# ಪ್ರಸ್ತಾವನೆ

---

॥ ಓಂ ನಮಶ್ಶಿವಾಯ ॥

ಪ್ರಪಂಚದಲ್ಲಿರುವ ಮಾನವಕೋಟಿಯ ಅಜ್ಞಾನವು ನಿವಾರಣೆಯಾಗಿ ಸರ್ವರಿಗೂ ಜ್ಞಾನೋದಯವಾಗಲೆಂಬ ಸದುದ್ದೇಶದಿಂದ ಶ್ರೀ ವೇದವ್ಯಾಸಮಹರ್ಷಿಗಳು ವೇದ, ಉಪನಿಷತ್ತು, ಇವುಗಳ ಅರ್ಥವನ್ನೇ ವಿವರಿಸಿ ಬೋಧಿಸುವ ಬ್ರಹ್ಮಸೂತ್ರ, ಮಹಾಪುರಾಣಗಳು, ಉಪಪುರಾಣಗಳು, ಮಹಾಭಾರತ, ಶಿವರಹಸ್ಯ ಇವೇ ಮೊದಲಾದ ಅನೇಕ ಗ್ರಂಥಗಳನ್ನು ರಚಿಸಿ, ಸರ್ವರಿಗೂ ಅಧ್ಯಾತ್ಮಜ್ಞಾನವು ವೃದ್ಧಿಯಾಗುವಂತೆ ಮಾಡಿರುವರು ವ್ಯಾಸಮಹರ್ಷಿಪ್ರಣೀತಗಳಾದ ಈ ಗ್ರಂಥರಾಜಗಳು ಶೈವ, ವೈಷ್ಣವ, ಶಾಕ್ತ ಮುಂತಾದ ಮತಗಳ ಸರ್ವೋತ್ಕೃಷ್ಟತೆಯನ್ನು ಸ್ಪಷ್ಟವಾಗಿ ತಿಳಿಸಿ, ಆಯಾ ಮತತತ್ತ್ವಗಳನ್ನು ಶ್ರದ್ಧಾಭಕ್ತಿಯಿಂದ ಅನುಷ್ಠಾನಕ್ಕೆ ತರಲು ಅತ್ಯಂತ ಸಹಕಾರಿಗಳಾಗಿರುತ್ತವೆ ಇಷ್ಟೇ ಅಲ್ಲದೆ, ಕೆಲವು ಗ್ರಂಥಗಳಲ್ಲಿ ಸರ್ವಮತಗಳಿಗೂ ಸರ್ವೇಶ್ವರನೊಬ್ಬನೇ ಕರ್ತೃ, ಶಿವ, ವಿಷ್ಣು, ಶಕ್ತಿ ಎಂಬ ಕಲ್ಪನೆಯು ಉಪಾಧಿಯಿಂದ ಉಂಟಾಗಿದೆ ಎಂಬುದನ್ನೂ ವ್ಯಾಸರು ಸ್ಥಿರಪಡಿಸಿರುವರು ಭಕ್ತಿ ಜ್ಞಾನ, ವೈರಾಗ್ಯ ಇವುಗಳನ್ನು ಸಂಪಾದಿಸಿ ತನ್ಮೂಲಕ ಪರಮಾತ್ಮಸಾಕ್ಷಾತ್ಕಾರವನ್ನು ಪಡೆದು, ಜನಸಮುದಾಯವು ಐಹಿಕಾಮುಷ್ಮಿಕಸುಖಗಳೆರಡನ್ನೂ ಅನುಭವಿಸಲೆಂಬುದೇ, ವ್ಯಾಸಮಹಾಮುನಿಗಳ ಉದ್ದೇಶ

ಪ್ರಕೃತ ಈ ಶಿವಗೀತೆಯು ಪದ್ಮಪುರಾಣದ ಒಂದುಭಾಗ ಹದಿನಾರು ಅಧ್ಯಾಯಗಳಿಂದ ಕೂಡಿದ ಈ ಶಿವಗೀತೆಯು, ಬ್ರಹ್ಮವಿದ್ಯಾಬೋಧಕವಾದ ಒಂದು ಉಪನಿಷತ್ತಿನಂತಿರುವುದು ಇದರಲ್ಲಿ ಅನೇಕ ಉಪನಿಷತ್ತುಗಳ ವಾಕ್ಯಗಳೂ, ಮಂತ್ರಶ್ರುತಿಗಳೂ, ಶ್ಲೋಕರೂಪಗಳಾಗಿ ಕಂಡುಬರುತ್ತಿವೆ ಶ್ರೀರಾಮಚಂದ್ರನು ಸ್ತ್ರೀವಿರಹವನ್ನು ಪಡೆದು ಲಕ್ಷ್ಮಣನೊಡನೆ ಆತ್ಮಹತ್ಯೆಗೆ ಅನುವಾದಾಗ, ಅಗಸ್ತ್ಯಮಹರ್ಷಿಗಳು ಶ್ರೀರಾಮನ ಸಮೀಪಕ್ಕೆ ಬಂದು ನಾನಾರೀತಿಯಿಂದ ಸಮಾಧಾನ

ಮಾಡಿ, ವಿರಜಾದೀಕ್ಷೆಯನ್ನು ಪಡೆದು ಪಾಶುಪತವ್ರತವನ್ನಾಚರಿಸಿ, ವೇದಸಾರ ಶಿವಸಹಸ್ರನಾಮಗಳನ್ನು ಪಾರಾಯಣಮಾಡಿ, ದುಃಖನಿರ್ಮುಕ್ತನಾಗುವಂತೆ ಉಪದೇಶ ಮಾಡುವರು. ಮಹರ್ಷಿಗಳ ಉಪದೇಶದಂತೆ ಶ್ರೀರಾಮನು ಮಹಾಪಾಶುಪತವ್ರತವನ್ನು ಕೈಕೊಂಡು, ಪರಮೇಶ್ವರನನ್ನು ಮೆಚ್ಚಿಸಿ, ಅವನ ಸಾಕ್ಷಾತ್ಕಾರದಿಂದ ವಿಶ್ವರೂಪವನ್ನೇ ಪರಶಿವನ ಸಾಕಾರಮೂರ್ತಿಯಲ್ಲಿ ದರ್ಶನಮಾಡಿ, ಶಿವದತ್ತವರಮಹಿಮೆಯಿಂದ ರಾವಣಾದಿಗಳನ್ನು ಕೊಲ್ಲುವಂತಹ ಸಾಮರ್ಥ್ಯವನ್ನು ಪಡೆದನೆಂಬುದೇ ಇಲ್ಲಿಯ ಕಥೆಯು. ನಾನಾರೀತಿಯ ಮನಃಕ್ಲೇಶಕ್ಕೆ ಒಳಗಾಗಿ ಪರಿತಪಿಸುವ ಶ್ರೀರಾಮನಿಗೆ ಪರಶಿವನು ವಿಭೂತಿನಿಸ್ತರಯೋಗ, ವಿಶ್ವರೂಪಸಂದರ್ಶನಯೋಗ, ದೇಹೋತ್ಪತ್ತ್ಯಾದಿನಿರೂಪಣೆ, ದೇಹಸ್ವರೂಪನಿರೂಪಣೆ, ಜೀವಸ್ವರೂಪನಿರೂಪಣೆ, ಉಪಾಸನಾವಿಧಿ, ಮೋಕ್ಷಯೋಗ ಭಕ್ತಿಯೋಗ, ಇವೇ ಮೊದಲಾದ ಮುಕ್ತಿಪ್ರದಗಳಾದ ವಿಷಯಗಳನ್ನು ಸುಲಭವಾಗಿ ದೃಷ್ಟಾಂತನಿರೂಪಣಪೂರ್ವಕ ಉಪದೇಶಿಸಿರುವನು. ಈ ಉಪದೇಶಕ್ರಮವು ಪ್ರತಿಯೊಬ್ಬ ನಾಸ್ತಿಕನಿಗೂ ಬೋಧಪ್ರದವಾದ ಹಾರದಂತಿರುವುದು. ಸಗುಣೋಪಾಸನೆಯು ನಿರ್ಗುಣೋಪಾಸನೆಗೆ ಎಷ್ಟರಮಟ್ಟಿನ ಸಹಕಾರಿಯಾಗುವುದೆಂಬುದನ್ನು ಇಲ್ಲಿ ನಾವು ದೃಷ್ಟಾಂತಪೂರ್ವಕವಾಗಿ ತಿಳಿದುಕೊಳ್ಳಬಹುದು. ಶಮದಮಾದಿಗಳಿಂದ ಚಿತ್ತಶುದ್ಧಿಯನ್ನು ಪಡೆದು, ಅನಂತರ ಸದ್ಗುರೂಪದೇಶದಿಂದ ಬ್ರಹ್ಮಜ್ಞಾನವನ್ನಾರ್ಜಿಸಿ, ಪರಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುವುದೇ ಜೀವನ್ಮುಕ್ತಿಯ ಕ್ರಮವೆಂದು ಬೋಧಿಸಿ, ಈ ಜೀವನ್ಮುಕ್ತಿಯನ್ನು ಸಾಧಿಸಲು ಸುಲಭವಾದ ಭಕ್ತಿಯೋಗವನ್ನು ನಿರೂಪಿಸುವನು. ಭಕ್ತಿಯೆಂದರೆ, ತಾನು ಮಾಡಿದ ಸಮಸ್ತ ಕರ್ಮಗಳನ್ನು ಈಶ್ವರಾರ್ಪಣಮಾಡಿ, ಪರಮಾತ್ಮನಲ್ಲಿ ನಿವೇದನಮಾಡುವುದೇ ಪರಮಭಕ್ತಿಸ್ವರೂಪ. ಭಕ್ತಿಯು ಸಾಕಾರಬ್ರಹ್ಮನನ್ನು ಉಪಾಸನಮಾಡುವುದಾದರೂ, ಅದರಿಂದ ದೊರೆಯುವುದು ನಿರಾಕಾರ ಬ್ರಹ್ಮಜ್ಞಾನವೇ, ಇದರಲ್ಲಿ ಸಂಶಯವಿಲ್ಲ. ಆದ್ದರಿಂದ ಯಾರು ಬ್ರಹ್ಮಜ್ಞಾನವನ್ನು ಸಾಧಿಸಲು ಅಸಮರ್ಥರೋ, ಬ್ರಹ್ಮಜ್ಞಾನೋಪದೇಶವು ಯಾರಿಗೆ ಸರಿಯಾದ ಗುರುವಿನಿಂದ ದೊರೆಯಲಾರದೋ, ಅಂತಹವರು ಭಕ್ತಿಮಾರ್ಗದಲ್ಲಿ ಹೋಗಿ ಪರಮೇಶ್ವರನನ್ನು ಸಾಕ್ಷಾತ್ಕರಿಸಿಕೊಳ್ಳಬಹುದು ಎಂಬುದೇ ಈ ಗ್ರಂಥದ ಮುಖ್ಯಾಭಿಪ್ರಾಯ.

ಈ ಶಿವಗೀತೆಯು ಪ್ರಪಂಚದಲ್ಲಿ ಕಂಡುಬರುವ ಎಲ್ಲಗೀತೆಗಳಿಗೂ ಮೂಲ ಪ್ರತಿಯಂತಿವೆ ಇದರಲ್ಲಿರುವ ಅನೇಕ ವಿಷಯುಗಳು ಇತರಗೀತೆಗಳಲ್ಲಿ ಚರ್ವಿತಚರ್ವಣ ವಾಗಿ ಬಂದಿವೆ ಉದಾಹರಣೆಗೆ, 'ಯತ್ಕರೋಷಿ ಯದಶ್ನಾಸಿ' 'ಅಪಿಚೇತ್ಸು ದುರಾಚಾರೋ' ಇತ್ಯಾದಿ ಅನೇಕಶ್ಲೋಕಗಳು ಭಗವದ್ಗೀತೆಯಲ್ಲಿಯೂ ಬಂದಿವೆ ಶಿವಗೀತೆಯಲ್ಲಿ ಬ್ರಹ್ಮಜ್ಞಾನವನ್ನು ಉಪದೇಶಿಸಿರುವ ಮಾರ್ಗವೇ ಭಗವದ್ಗೀತೆ ಯಲ್ಲಿಯೂ ಅನುಸರಿಸಲ್ಪಟ್ಟಿರುವುದು ಶಿವಗೀತೆಯ ವಿಶ್ವರೂಪದರ್ಶನವೇ ಭಗವ ದ್ಗೀತೆಯ ವಿಶ್ವರೂಪದರ್ಶನ ಭಗವದ್ಗೀತೆಯಲ್ಲಿ ಹೇಳಿರುವ ಅನೇಕ ಮಾರ್ಗಗಳು ಒಂದುವೇಳೆ ಓದುವವರ ಮನಸ್ಸಿಗೆ ಕಠಿನವಾಗಿ ಕಂಡುಬರಬಹುದು

ಶಿವಗೀತೆಯಲ್ಲಿ ಭಕ್ತಿ, ಜ್ಞಾನ, ಇವೆರಡಕ್ಕೇ ಪ್ರಾಶಸ್ತ್ಯ ಕೊಟ್ಟು, ಸಾಮಾನ್ಯ ಮಾನವನೂ ಸುಲಭವಾಗಿ ಅನುಸರಿಸುವಂತಹ ಮಾರ್ಗವನ್ನು ಉಪದೇಶಿಸಿದ್ದಾರೆ ವಿರಜಾದೀಕ್ಷಾಕ್ರಮ, ಪಾಶುಪತವ್ರತವಿಧಾನ, ಇವೆರಡನ್ನು ಮತ್ತಾವಗ್ರಂಥದಲ್ಲಿಯೂ ಇಷ್ಟು ಸುಲಭವಾಗಿ ತಿಳಿಸಿಲ್ಲ ಅರ್ಥವನ್ನರಿತು ಶ್ರದ್ಧಾ ಭಕ್ತಿಯಿಂದ ಈ ಗೀತೆಯನ್ನು ಮನಃಪೂರ್ವಕವಾಗಿ ಓದಿದವರು ಇದರಲ್ಲಿ ಹೇಳಿರುವ ವಿಷಯುಗಳನ್ನು ನಿಜವಾಗಿಯೂ ತಮ್ಮ ಜೀವನಮಾರ್ಗದಲ್ಲಿ ಅನುಷ್ಠಾನಕ್ಕೆ ತರ ಬಹುದು ಆದರಿಂದ ಪರಮೇಶ್ವರಾನುಗ್ರಹವನ್ನು ಪಡೆದು, ಪರಬ್ರಹ್ಮಸಾಕ್ಷಾತ್ಕಾರ ವನ್ನು ಸಾಧಿಸಬಹುದು ಈ ಶಿವಗೀತೆಯು, ಕಥಾಸರಣಿಯಲ್ಲಿ, ಉಪದೇಶವಿಧಾನ ದಲ್ಲಿ, ವಿಷಯನಿರೂಪಣೆಯಲ್ಲಿ, ಆಬಾಲವೃದ್ಧರಿಗೂ ಉಪಯೋಗವಾಗುವಂತೆ ರಚಿತ ವಾಗಿದೆ ದೇಹೋತ್ಪತ್ತಿಕ್ರಮ, ದೇಹದಸ್ವರೂಪ, ಇವುಗಳನ್ನು ಇಲ್ಲಿ ಓದುವಾಗ ಪ್ರತಿಯೊಬ್ಬರಿಗೂ ತಮ್ಮ ತಮ್ಮ ದೇಹದಲ್ಲಿ ಜುಗುಪ್ಸೆಯುಂಟಾಗದೇ ಇರದು ಹೀಗೆ ಇಹಪರಸಾಧಕವಾಗಿ, ಪರಮೇಶ್ವರಪ್ರೋಕ್ತವೆನಿಸಿ, ಬಹುವಿಷಯುಗಳಿಂದ ಗರ್ಭಿತವಾಗಿರುವ ಶೈವಗ್ರಂಥರತ್ನವಾದ ಈ ಶಿವಗೀತೆಯು ಕನ್ನಡದಲ್ಲಿ ಪರಿವರ್ತನೆ ಯಾಗಿ ಬಂದಿರುವುದರಿಂದ ಸರ್ವಜನಾದರಣೀಯವಾಗಿ ಹರಡುವುದರಲ್ಲಿ ಸಂಶಯುವೇ ಇಲ್ಲ ಇಂತಹ ಅಮೂಲ್ಯಗ್ರಂಥರತ್ನವು, ನಮ್ಮನ್ನಾಳುವ, ಆಸ್ತಿಕ ಧರ್ಮೋದ್ಧಾರ ಕರೂ, ಪ್ರಜಾವಾತ್ಸಲ್ಯಪರಿಪೂರ್ಣರೂ, ಆದ **ಶ್ರೀಮನ್ಮಹಾರಾಜ ಶ್ರೀ ಜಯ ಚಾಮರಾಜೇಂದ್ರ ಒಡೆಯರ್ ಬಹದ್ದೂರ್,** ಜಿ ಸಿ ಬಿ, ಜಿ ಸಿ ಎಸ್ ಐ, ಮಹಾಪ್ರಭುಗಳವರ ಪ್ರೋತ್ಸಾಹದಿಂದಲೂ, ಸಂಪೂರ್ಣಸಹಾಯದಿಂದಲೂ ಕನ್ನಡ

ಭಾಷೆಗೆ ಪರಿವರ್ತಿತವಾಗಿ ಕನ್ನಡಿಗರೆಲ್ಲರಿಗೂ ಸುಲಭವಾಗಿ ದೊರೆಯುವಂತಾಯಿತು. ಈರೀತಿ ಇನ್ನೂ ಅನೇಕ ಪ್ರಾಚೀನಗ್ರಂಥಗಳು ಪ್ರಕಾಶಕ್ಕೆ ಬರುವಂತೆ ಮಾಡಿದ ನಮ್ಮ ಶ್ರೀಮನ್ಮಹಾರಾಜರವರಿಗೂ, ಅವರ ಮಾತೃಶ್ರೀಯವರೇಮೊದಲಾದ ಸಕಲ ಕುಟುಂಬವರ್ಗಕ್ಕೂ ಜಗದೀಶ್ವರನು ಆಯುರಾರೋಗ್ಯೈಶ್ವರ್ಯಾದಿಗಳನ್ನು ಇತೋಪ್ಯತಿ ಶಯವಾದ ದಿವ್ಯಜ್ಞಾನವನ್ನೂ ಕರುಣಿಸಲೆಂದು ಅನನ್ಯಭಕ್ತಿಯಿಂದ ನಾವು ಜಗತ್ಪತಿ ಯಾದ ಪರಮೇಶ್ವರನನ್ನು ಪ್ರಾರ್ಥಿಸುತ್ತೇವೆ.

| | |
|---|---|
| ವಿರೋಧಿ ಸಂವತ್ಸರದ<br>ಪುಷ್ಯ ಬಹುಳ<br>ದ್ವಿತೀಯಾ<br>ಶುಕ್ರವಾರ. | ಶಿಲ್ಪಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳು,<br>ಶ್ರೀ ಜಗದ್ಗುರು ನಾಗಲಿಂಗಸ್ವಾಮಿ ಸಂಸ್ಥಾನ,<br>ಮೈಸೂರು. |

# ವಿಷಯಾನುಕ್ರಮಣಿಕೆ

ಆರನೆಯ ಅಧ್ಯಾಯ—



ಏಳನೆಯ ಅಧ್ಯಾಯ—



ಎಂಟನೆಯ ಅಧ್ಯಾಯ—



ಒಂಬತ್ತನೆಯ ಅಧ್ಯಾಯ—



ಕರ್ಣಾಟಕ ಸಿಂಹಾಸನಾಧೀಶ್ವರರು, ಶ್ರೀ ಗುರುದೈವಭಕ್ತರೂ ಆದ
ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್

## ॥ ಶ್ರೀಮನ್ಮಹಾರಾಜರವರ ಸದಾಶಯ ॥



ಈ ಶಿವಗೀತೆಯು ಸಮಸ್ತಮಾನವವೃಂದವನ್ನೂ ಜ್ಞಾನವಾಹಿನಿಗೆ ಸೆಳೆದು ತನ್ಮೂಲಕ ಜನತೆಯು ಐಹಿಕಾಮುಷ್ಮಿಕಸೌಖ್ಯಗಳನ್ನು ಪಡೆದು ಶಾಂತಮನಸ್ಸಿನಿಂದ ಬಾಳಲೆಂಬ ಸದುದ್ದೇಶದಿಂದ, ಈಗ ನಡೆಯುತ್ತಿರುವ ಶ್ರೀ ಜಗದ್ಗುರು ಶ್ರೀ ಸಚ್ಚಿದಾನಂದ ನಂಜುಂಡ ಶಿವಯೋಗೀಂದ್ರ ಸ್ವಾಮಿಗಳವರ, ಇಪ್ಪತ್ತೈದನೆಯ ವರ್ಷದ ಆರಾಧನ ಮಹೋತ್ಸವದ ಸವಿನೆನಪಿಗಾಗಿ, ಮುದ್ರಿಸಿ ಗುರುಚರಣಾರವಿಂದಗಳಿಗೆ ಸಮರ್ಪಿಸಿ, ಗುರುಭಕ್ತರಿಗೆ ಈ ಪ್ರತಿಗಳನ್ನು ಉಚಿತವಾಗಿ ಕೊಡಿಸಿಕೊಡಬೇಕೆಂದು ನಾವು ಅಪ್ಪಣೆಮಾಡಿರುತ್ತೇವೆ.

ವಿರೋಧಿ ಸಂವತ್ಸರದ
ಪುಷ್ಯ ಬಹುಳ
ದ್ವಿತೀಯಾ
ಶುಕ್ರವಾರ
ತಾ॥ ೬-೧-೧೯೫೦.

ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್,
ಮೈಸೂರು.

॥ ಶ್ರೀಃ ॥

॥ ಶುಭಮಸ್ತು ॥

॥ ಓಂ ನಮಶ್ಶಿವಾಯ ॥

## ॥ ಅಥ ಗಣಪತಿಸ್ತೋತ್ರಂ ॥

**ಅಗಜಾನನಪದ್ಮಾರ್ಕಂ ಗಜಾನನಮಹರ್ನಿಶಂ ।**
**ಅನೇಕದಂ ತಂ ಭಕ್ತಾನಾಮೇಕದಂತಮುಪಾಸ್ಮಹೇ ॥**

## ॥ ದೇವೀಸ್ತೋತ್ರಂ ॥

**ಜಯ ತ್ವಂ ದೇವಿ ಚಾಮುಂಡೇ ಜಯ ಭೂತಾಪಹಾರಿಣಿ ।**
**ಜಯ ಸರ್ವಗತೇ ದೇವಿ ಭದ್ರಕಾಳಿ ನಮೋಽಸ್ತು ತೇ ॥**

---

ಭಕ್ತರಿಗೆ ಆಗಾಗ ಒದಗುವ ವಿಘ್ನಪರಂಪರೆಗಳನ್ನು ನಾಶಮಾಡಿ, ಅವರ ಸಕಲ ಇಷ್ಟಾರ್ಥಗಳನ್ನು ಸಲ್ಲಿಸುವ ಮಹಾಗಣಪತಿಯು ಪಾರ್ವತಿಯ ಮುಖ ಕಮಲಕ್ಕೆ ಸೂರ್ಯನಂತಿದ್ದು ದೇವಿಗೆ ಸಂಪೂರ್ಣ ಆನಂದದಾಯಕನಾಗಿರುವನು ಗಜಮುಖನೂ, ಏಕದಂತನೂ ಆದ ವಿಘ್ನೇಶ್ವರನು ತನ್ನನ್ನಾರಾಧಿಸಿದವರಿಗೆ ನಾನಾ ವಿಧಗಳಾದ ಅನಂತಫಲಗಳನ್ನು ಕರುಣಿಸುವನು ಇಂತಹ ಮಹಾಮಹಿಮನಾದ ವಿಘ್ನೇಶ್ವರನನ್ನು ಇಷ್ಟಕಾರ್ಯಸಿದ್ಧಿಗಾಗಿ ನಾವು ಸರ್ವದಾ ಭಜಿಸುವೆವು.

ಭೂತಪ್ರೇತಪಿಶಾಚಾದಿ ದುಷ್ಟಗ್ರಹಗಳ ಭಯವನ್ನು ನಿವಾರಿಸುವ ಚಾಮುಂ ಡಾಂಬೆಯೇ, ನೀನು ಸರ್ವೋತ್ಕೃಷ್ಟಳೆನಿಸು. ಸಮಸ್ತಪ್ರಪಂಚದಲ್ಲಿಯೂ ನಾನಾರೂಪ ದಿಂದ ಹರಡಿ, ಜಗತ್ಕಲ್ಯಾಣವೆಸಗುತ್ತಿರುವ ಭದ್ರಕಾಳಿಯೇ, ದುಷ್ಟರ ನಾಶಕಾರ್ಯ ದಲ್ಲಿ ನಿನಗೆ ಜಯವಾಗಲಿ ನೀನು ವಿಜಯಶಾಲಿನಿಯಾಗಿ ನಮ್ಮಂತಹ ಭಕ್ತವೃಂದ ವನ್ನು ಕಾಪಾಡು ದೇವಿಯೇ, ನಿನಗೆ ಸಾಷ್ಟಾಂಗ ನಮಸ್ಕಾರ

ಲಕ್ಷ್ಮೀಪ್ರದಾನಸಮಯೇ ನವವಿದ್ರುಮಾಭಾಂ
ವಿದ್ಯಾಪ್ರದಾನಸಮಯೇ ಶರದಿಂದುಶುಭ್ರಾಂ
ವಿದ್ವೇಷಿವರ್ಗವಿಜಯೇ ಹರಿನೀಲವರ್ಣಾಂ
ಅಂಬಾಂ ತ್ರಿಲೋಕಜನನೀಮಜನಿಂ ಪ್ರಪದ್ಯೇ ||

ಯಾ ಕುಂದೇಂದುತುಷಾರಹಾರಧವಳಾ ಯಾ ಶುಭ್ರವಸ್ತ್ರಾವೃತಾ |
ಯಾ ವೀಣಾವರದಂಡಮಂಡಿತಕರಾ ಯಾ ಶ್ವೇತಪದ್ಮಾಸನಾ |
ಯಾ ಬ್ರಹ್ಮಾಚ್ಯುತಶಂಕರಪ್ರಭೃತಿಭಿರ್ದೇವೈಸ್ಸದಾ ಪೂಜಿತಾ |
ಸಾ ಮಾಂ ಪಾತು ಸರಸ್ವತೀ ಭಗವತೀ ನಿಶ್ಶೇಷಜಾಡ್ಯಾಪಹಾ ||

---

ದೇವಿಯೇ, ಎಳಚಿಗುರಿನಂತೆ ಶೋಭಿಸುವ ಲಕ್ಷ್ಮೀದೇವಿಯ ಆಕಾರದಿಂದ ನೀನು ಭಕ್ತರಿಗೆ ಸಕಲ ಐಶ್ವರ್ಯವನ್ನೂ ಕರುಣಿಸುವೆ ಶರತ್ಕಾಲದ ಚಂದ್ರನಂತೆ ಶುಭ್ರ ವರ್ಣವುಳ್ಳ ಸರಸ್ವತಿಯ ಅವತಾರದಿಂದ ಭಕ್ತವೃಂದಕ್ಕೆ ವಿದ್ಯಾಪ್ರದಳಾಗುವೆ ನೀಲವರ್ಣದ ಕಾಳಿಕಾದೇವಿಯಂತೆ ಕಂಡುಬಂದು ಲೋಕದ್ವೇಷಿಗಳ ಕುಲವನ್ನು ನಿರ್ಮೂಲಗೊಳಿಸುವೆ ಹೀಗೆ ತ್ರಿಲೋಕಗಳನ್ನೂ ಜನನಿಯಂತೆ ರಕ್ಷಿಸುವ, ಉತ್ಪತ್ತಿ ನಾಶರಹಿತಳಾದ ಜಗನ್ಮಾತೆಯಾದ ನಿನ್ನನ್ನು ಸದಾ ಧ್ಯಾನಿಸುತ್ತೇನೆ

ಶುಭ್ರವಾದ ಕೋಲುಮಲ್ಲಿಗೆಹೂವು, ಪ್ರಕಾಶಮಾನವಾದ ಚಂದ್ರ, ನಿರ್ದೋಷ ವಾದ ಮಂಜಿನರಾಶಿ ಇವುಗಳಂತೆ ಬಿಳುಪಾದ ಮತ್ತು ಸುಂದರವಾದ ಹಾರವನ್ನು ಧರಿಸಿರುವವಳೂ, ಬಿಳುಪಾದ ವಸ್ತ್ರವನ್ನುಟ್ಟಿರುವವಳೂ ಆದ ಸರಸ್ವತಿಯು ತನ್ನ ಕೋಮಲವಾದ ಕೈಯಿಂದ ವೀಣೆಯನ್ನು ಹಿಡಿದಿರುವಳು, ಬಿಳಿಯ ಕಮಲದ ಮೇಲೆ ಮಂಡಿಸಿರುವಳು ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳೂ ಈ ಸರಸ್ವತಿಯನ್ನು ಸರ್ವದಾ ಪೂಜಿಸುತ್ತಿರುವರು ಮಾನಸಿಕವಾದ ಸಮಸ್ತ ದೋಷ ಗಳನ್ನೂ ಪರಿಹರಿಸುವ ಷಡ್ಗುಣೈಶ್ವರ್ಯ ಪರಿಪೂರ್ಣಳಾದ ಇಂತಹ ಶಾರದಾಂಬೆಯು ನನಗೆ ಸದ್ಬುದ್ಧಿಯನ್ನು ಕರುಣಿಸಿ ಸಂರಕ್ಷಿಸಲಿ

॥ ಶ್ರೀಃ ॥

# ಶ್ರೀ ಶಿವಗೀತಾ

॥ ಶ್ರೀಸೂತ ಉವಾಚ ॥

ಅಥಾತಸ್ಸಂಪ್ರವಕ್ಷ್ಯಾಮಿ ಶುದ್ಧಂ ಕೈವಲ್ಯಮುಕ್ತಿದಂ ।
ಅನುಗ್ರಹಾನ್ಮಹೇಶಸ್ಯ ಭವದುಃಖಸ್ಯ ಭೇಷಜಂ ॥ ೧ ॥
ನ ಕರ್ಮಣಾಮನುಷ್ಠಾನೈಃ ನ ದಾನೈಸ್ತಪಸಾಪಿ ವಾ ।
ಕೈವಲ್ಯಂ ಲಭತೇ ಮರ್ತ್ಯಃ ಕಿಂತು ಜ್ಞಾನೇನ ಕೇವಲಂ ॥ ೨ ॥

---

೧ ನೈಮಿಷಾರಣ್ಯವಾಸಿಗಳಾದ ಶ್ರೀ ಸೂತಮಹರ್ಷಿಗಳು ಶೌನಕಾದಿ ಮಹರ್ಷಿಗಳನ್ನು ಕುರಿತು ಅವರಿಗೆ ಶಿವಗೀತೆಯನ್ನು ಉಪದೇಶಮಾಡುವ ಒಂದು ವಿಶೇಷ ಕುತೂಹಲದಿಂದ ಈರೀತಿ ನುಡಿದರು —ಋಷಿವರ್ಯರೇ, ಕೇಳಿರಿ ಈಗ ನಾನು ಹೇಳಲಿರುವ ಶಿವಗೀತೆಯು, ದುಃಖನಿವೃತ್ತಿಪೂರ್ವಕವಾದ ಆನಂದವನ್ನು ದೊರಕಿಸುವ ಶುದ್ಧಕೈವಲ್ಯವನ್ನು ಕೊಡಿಸುವ ಸಾಮರ್ಥ್ಯವುಳ್ಳದ್ದು ಇದನ್ನು ಹೇಳುವುದಕ್ಕೂ, ಕೇಳುವುದಕ್ಕೂ ಮೊದಲು ಈಶ್ವರಾನುಗ್ರಹವಿರಬೇಕು ಇದನ್ನು ಕೇಳಿ ಇದರಂತೆ ನಡೆಯುವವರಿಗೆ ಸಾಂಸಾರಿಕವಾದ ಯಾವ ದುಃಖವೂ ಲಭಿಸಲಾರದು ಯೋಗ್ಯಚಿಕಿತ್ಸೆಯಿಂದ ರೋಗವು ಕಣ್ಮರೆಯಾಗುವಂತೆ ಇದರ ಶ್ರವಣಪಠನಾದಿಗಳಿಂದಲೇ ಸಮಸ್ತ ದುಃಖಗಳೂ ದೂರವಾಗುವುವು

೨ ಮಾನವರು ಶ್ರೌತಸ್ಮಾರ್ತಾದಿ ಯಾವ ಕರ್ಮಾನುಷ್ಠಾನಗಳಿಂದಲೂ, ಭೂದಾನ ಗೋದಾನಾದಿ ಅನೇಕ ದಾನಾಚರಣೆಗಳಿಂದಲೂ, ಸಾವಿರಾರು ವರ್ಷಗಳ ವರೆಗಿನ ತಪಶ್ಚರ್ಯೆಯಿಂದಲೂ ಶುದ್ಧಮೋಕ್ಷವನ್ನು ಗಳಿಸಲಾರರು ಅಂತಹ ಶುದ್ಧ ಮುಕ್ತಿಯು ಕೇವಲ ಜ್ಞಾನದಿಂದ ಅನಾಯಾಸವಾಗಿ ಲಭಿಸುವುದು 'ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇನೈಕೇ ಅಮೃತತ್ವಮಾನಶುಃ'' 'ಜ್ಞಾನಾದೇವ ಹಿ ಕೈವಲ್ಯಂ'' ಎಂಬ ಶ್ರುತಿಗಳೂ ಇದಕ್ಕೆ ಉಪಷ್ಟಂಭಕವಾಗಿರುವುವು ಇದೇ ಅರ್ಥವೇ "ತಮೇವ ವಿದಿತ್ವಾತಿಮೃತ್ಯುಮೇತಿ ನಾನ್ಯಃ ಪಂಥಾ ಅಯನಾಯ ವಿದ್ಯತೇ'' ಎಂಬ ಶ್ರುತಿಯಿಂದಲೂ ವ್ಯಕ್ತವಾಗಿರುವುದು

ರಾಮಾಯ ದಂಡಕಾರಣ್ಯೇ ಪಾರ್ವತೀಪತಿನಾ ಪುರಾ ।
ಯಾ ಪ್ರೋಕ್ತಾ ಶಿವಗೀತಾಖ್ಯಾ ಗುಹ್ಯಾದ್ಗುಹ್ಯತಮಾ ಹಿ ಸಾ ॥ ೩ ॥

ಯಸ್ಯಾಃ ಶ್ರವಣಮಾತ್ರೇಣ ನೃಣಾಂ ಮುಕ್ತಿರ್ಧ್ರುವಾ ಭವೇತ್ ।
ಪುರಾ ಸನತ್ಕುಮಾರಾಯ ಸ್ಕಂದೇನಾಭಿಹಿತಾ ಹಿ ಸಾ ॥ ೪ ॥

ಸನತ್ಕುಮಾರಃ ಪ್ರೋವಾಚ ವ್ಯಾಸಾಯ ಮುನಿಸತ್ತಮಾಃ ।
ಮಹ್ಯಂ ಕೃಪಾತಿರೇಕೇಣ ಪ್ರದದೌ ಬಾದರಾಯಣಃ ॥ ೫ ॥

ಉಕ್ತಂ ಚ ತೇನ ಕಸ್ಮೈಚಿತ್ ನ ದಾತವ್ಯಮಿದಂ ತ್ವಯಾ ।
ಸೂತಪುತ್ರಾನ್ಯಥಾ ದೇವಾಃ ಕ್ಷುಭ್ಯಂತಿ ಚ ಶಪಂತಿ ಚ ॥ ೬ ॥

---

೩ ಹಿಂದೆ ದಂಡಕಾರಣ್ಯದಲ್ಲಿ ಪಾರ್ವತೀಪತಿಯಾದ ಪರಶಿವನು ಮೊದಲು ಶ್ರೀರಾಮನಿಗೆ ಈ ಶಿವಗೀತೆಯನ್ನು ಉಪದೇಶಮಾಡಿದನು ಆದರೆ ಇದು ಅತ್ಯಂತ ಗೋಪ್ಯವಾದದ್ದು ಇಷ್ಟು ರಹಸ್ಯವಾಗಿದ್ದರೂ ನಮ್ಮ ಗುರುಗಳು ನನ್ನ ಮೇಲಿನ ವಾತ್ಸಲ್ಯದಿಂದ ನನಗೆ ಅದನ್ನು ತಿಳಿಯಪಡಿಸಿದರು

೪ ಈ ಶಿವಗೀತೆಯನ್ನು ಭಕ್ತಿಯಿಂದ ಕೇಳಿದವರಿಗೂ ಸ್ಥಿರಮುಕ್ತಿಯೊದ ಗುವುದೆಂದು ಪರಮೇಶ್ವರನೇ ಹೇಳಿರುವನು, ಇದು ನಿಶ್ಚಯ ಇದೇ ಶಿವಗೀತೆ ಯನ್ನು ಈಶ್ವರಪುತ್ರನಾದ ಕುಮಾರಸ್ವಾಮಿಯು ಹಿಂದೆ ಸನತ್ಕುಮಾರಮಹರ್ಷಿಗೆ ಉಪದೇಶಿಸಿರುವನು

೫ ಸನತ್ಕುಮಾರ ಮಹರ್ಷಿಯು ಸ್ಕಂದಸ್ವಾಮಿಯಿಂದ ತಿಳಿದುಕೊಂಡ ಶಿವಗೀತೆಯನ್ನು ವ್ಯಾಸಮಹರ್ಷಿಗಳಿಗೆ ಬೋಧಿಸಿದನು ಅದನ್ನು ನನ್ನ ಪರಮಗುರು ವಾದ ಆ ಬಾದರಾಯಣರು ದಯೆಯಿಂದ ನನಗೆ ಉಪದೇಶಿಸಿರುವರು.

೬ ಉಪದೇಶ ಕಾಲದಲ್ಲಿ ಗುರುಗಳಾದ ವ್ಯಾಸಮಹರ್ಷಿಗಳು, ತೆನ್ನಿಂದೆ ಉಪದಿಷ್ಟವಾದ ಈ ಶಿವಗೀತೆಯನ್ನು ಯಾರಿಗೂ ತಿಳಿಸಕೂಡದೆಂದು ನನಗೆ ಕಟ್ಟಪ್ಪಣೆ ಮಾಡಿರುವರು. ಒಂದುವೇಳೆ ಇದನ್ನು ಎಲ್ಲರಿಗೂ ಪ್ರಕಾಶಪಡಿಸುವು ದಾದರೆ, ದೇವತೆಗಳ ಆಗ್ರಹಕ್ಕೂ ಪಾತ್ರನಾಗುವೆಯೆಂದು ಎಚ್ಚರಿಸಿರ ವರು

ಅಥ ಪೃಷ್ಟೋ ಮಯಾ ವಿಪ್ರಾಃ ಭಗವಾನ್ ಬಾದರಾಯಣಃ ।
ಭಗವನ್ ದೇವತಾಸ್ಸರ್ವಾಃ ಕಿಂ ಕ್ಷುಭ್ಯಂತಿ ಶಪಂತಿ ಕಿಂ ॥ ೭ ॥

ತಾಸಾಮತ್ರಾಸ್ತಿ ಕಾ ಹಾನಿಃ ಯಯಾ ಕುಪ್ಯಂತಿ ದೇವತಾಃ ।
ಪಾರಾಶರ್ಯೋಽಥ ಮಾಮಾಹ ಯತ್ಪೃಷ್ಟಂ ಶೃಣು ವತ್ಸಲ ॥ ೮ ॥

ನಿತ್ಯಾಗ್ನಿಹೋತ್ರಿಣೋ ವಿಪ್ರಾಃ ಸಂತಿ ಯೇ ಗೃಹಮೇಧಿನಃ ।
ತ ಏವ ಸರ್ವಫಲದಾಃ ಸುರಾಣಾಂ ಕಾಮಧೇನವಃ ॥ ೯ ॥

ಭಕ್ಷ್ಯಂ ಭೋಜ್ಯಂ ಚ ಪೇಯಂ ಚ ಯದ್ಯದಿಷ್ಟಂ ಸುಪರ್ವಣಾಂ ।
ಅಗ್ನೌ ಹುತೇನ ಹವಿಷಾ ತತ್ಸರ್ವಂ ಲಭ್ಯತೇ ದಿವಿ ॥ ೧೦ ॥

---

೭–೮ ಆ ಕೂಡಲೇ ನಾನು ಗುರುಗಳನ್ನು ಕುರಿತು "ಭಗವನ್, ಈ ಶಿವಗೀತೆಯನ್ನು ಪ್ರಚಾರಮಾಡುವುದರಿಂದ ದೇವತೆಗಳಿಗೆ ಕೋಪ ಬರಲು ಕಾರಣವೇನು ? ಭಕ್ತರು ಮುಕ್ತಿಯನ್ನು ಪಡೆದರೆ ದೇವತೆಗಳು ಶಾಪಕೊಡುವುದೇತಕ್ಕೆ ? ಎಂದು ಪ್ರಶ್ನಿಸಿದೆನು ಆಗ ಪರಾಶರಪುತ್ರರಾದ ವ್ಯಾಸಮಹರ್ಷಿಗಳು ಹೀಗೆಂದು ನುಡಿದರು

೯ "ವತ್ಸ, ಸೂತನೇ ಕೇಳು, ಭೂಲೋಕದಲ್ಲಿ ಯಾರು ನಿತ್ಯವೂ ಅಗ್ನಿಹೋತ್ರಾದಿಗಳನ್ನು ನಡೆಸಿಕೊಂಡು, ಗೃಹಸ್ಥಧರ್ಮಾವಲಂಬಿಗಳಾಗಿ ಯಾಗಾದಿ ಕರ್ಮಗಳನ್ನು ನಡೆಸುತ್ತಾ ದೇವತೆಗಳಿಗೆ ಹವಿರ್ದ್ರವ್ಯಾದಿಗಳನ್ನು ಕೊಡುವರೋ, ಅವರೇ ದೇವತೆಗಳಿಗೆ ನಿಜವಾದ ಪೋಷಕರು ಕಾಮಧೇನುವು, ಕೇಳಿದ ಇಷ್ಟಾರ್ಥಗಳನ್ನು ಕಲ್ಪಿಸಿಕೊಡುವಂತೆ, ಕರ್ಮಮಾರ್ಗತತ್ಪರರಾದವರು ದೇವತೆಗಳ ಅಭೀಷ್ಟವನ್ನು ತಪ್ಪದೆ ನೆರವೇರಿಸುವರು

೧೦ ದೇವತೆಗಳು ಸ್ವರ್ಗಲೋಕದಲ್ಲಿದ್ದು ಯಾವ ಯಾವ ಭಕ್ಷ್ಯಭೋಜ್ಯಾದಿಗಳನ್ನು ಬಯಸುವರೋ, ಅವೆಲ್ಲವೂ ಭೂಲೋಕದ ಜನರು ಯಾಗದಲ್ಲಿ ಕೊಡುವ

ನಾನ್ಯದಸ್ತಿ ಸುರೇಶಾನಾಂ ಇಷ್ಟಸಿದ್ಧಿಪ್ರದಂ ದಿವಿ ।
ದೋಗ್ಧ್ರೀ ಧೇನುರ್ಯಥಾ ನೀತಾ ದುಃಖದಾ ಗೃಹಮೇಧಿನಾಂ ॥ ೧೧ ॥

ತಥೈವ ಜ್ಞಾನವಾನ್ ವಿಪ್ರೋ ದೇವಾನಾಂ ದುಃಖದೋ ಭವೇತ್ ।
ತ್ರಿದಶಾಸ್ತೇನ ವಿಘ್ನಂತಿ ಪ್ರವಿಷ್ಟಾ ಹೃದಯಂ ನೃಣಾಂ ॥ ೧೨ ॥

ತತೋ ನ ಜಾಯತೇ ಭಕ್ತಿಃ ಶಿವೇ ಕಸ್ಯಾಪಿ ದೇಹಿನಃ ।
ತಸ್ಮಾದ್ವಿವಿದಿಷಾ ನೈವ ಜಾಯತೇ ಶೂಲಪಾಣಿನಃ ॥ ॥ ೧೩ ॥

---

ಪುರೋಡಾಶವೇ ಮೊದಲಾದ ಹವಿರ್ದ್ರವ್ಯಗಳಿಂದ ಅವರಿಗೆ ಸುಲಭವಾಗಿ ದೊರೆಯು ವುವು ಈ ಕರ್ಮಮಾರ್ಗವೊಂದು ಭೂಲೋಕದಲ್ಲಿ ನಿಂತುಹೋದರೆ ಆಗ ದೇವತೆ ಗಳ ಜೀವನವೇ ಸುಗಮವೆನಿಸುವುದಿಲ್ಲ

೧೧ ಗೃಹಸ್ಥರಿಗೆ ಸರ್ವಪೋಷಕದ್ರವ್ಯವನ್ನೂ ಒದಗಿಸುವ ಗೋವು ಕಳ್ಳ ರಿಂದ ಅಪಹೃತವಾದರೆ, ಹೇಗೆ ಗೃಹಸ್ಥರು ಮಂಕಾಗುವರೋ, ಅದರಂತೆ ಭೂಮಿ ಯಲ್ಲಿ ಕರ್ಮಮಾರ್ಗವು ನಿಂತುಹೋದರೆ ದೇವತೆಗಳಿಗೆ ದಿಕ್ಕೇ ತೋರದಂತಾಗು ವುದು

೧೨ ಜ್ಞಾನಿಯಾದವನು ಕರ್ಮವನ್ನು ಬಿಡುವದು ನಿಜ ಅದಕ್ಕಾಗಿಯೇ ದೇವತೆಗಳು ಭೂಲೋಕದಲ್ಲಿ ಜ್ಞಾನಿಗಳು ಹೆಚ್ಚದಂತೆ ನೋಡಿಕೊಳ್ಳುವರು ಕರ್ಮಠರು ಜ್ಞಾನಿಗಳಾಗಲು ಯತ್ನಿಸಿದರೆ, ಆಗ ದೇವತೆಗಳು ಎಚ್ಚೆತ್ತು ಅವರಿಗ ಜ್ಞಾನಭಂಗವಾಗುವಂತಹ ಅನೇಕ ಅಡ್ಡಿ ಆತಂಕಗಳನ್ನು ತಂದೊಡ್ಡುವರು ಮಾನವನ ಹೃದಯವನ್ನು ಸೂಕ್ಷ್ಮರೂಪದಿಂದ ಪ್ರವೇಶಿಸಿ, ಅವರು ಜ್ಞಾನಿಗಳಾಗು ವಂತೆ ಮಾಡುವ ಸಾಹಸವು ದೇವತೆಗಳಲ್ಲಿರುವುದು ಪತ್ನೀಪುತ್ರಾದಿಗಳಲ್ಲಿ ಮೋಹ ವನ್ನು ಕಲ್ಪಿಸಿ, ಮಾನವರು ಜ್ಞಾನಿಗಳಾಗದಂತೆ ದೇವತೆಗಳು ವಂಚನೆಮಾಡುವರು ಇದೇ ಅರ್ಥವನ್ನೇ "ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ ಶೃಣ್ವಂತೋಽಪಿ ಬಹವೋಽಯಂ ನ ವಿದ್ಯುಃ" ಎಂಬ ಶ್ರುತಿಯೂ ನಿರೂಪಿಸುವುದು

೧೩. ದೇವತೆಗಳು ಮಾಡುವ ಈ ಕೃತ್ರಿಮದಿಂದಲೇ ಮಾನವರಿಗ ನೈಜ

ಯಥಾ ಕಥಂಚಿಜ್ಜಾತಾಽಪಿ ಮಧ್ಯೇ ವಿಚ್ಛಿದ್ಯತೇ ನೃಣಾಂ
ಜಾತಂ ವಾಽಪಿ ಶಿವಜ್ಞಾನಂ ನ ವಿಶ್ವಾಸ್ಯಂ ಭವತ್ಯಲಮ್ || ೧೪ ||

|| ಋಷಯ ಊಚುಃ ||

ಯದ್ಯೇವಂ ದೇವತಾ ವಿಘ್ನಂ ಆತರಂತಿ ತನೂಭೃತಾಂ |
ಪೌರುಷಂ ತತ್ರ ಕಸ್ಯಾಸ್ತಿ ಯೇನ ಮುಕ್ತಿರ್ಭವಿಷ್ಯತಿ || ೧೫ ||
ಸತ್ಯಂ ಸೂತಾತ್ಮಜ ಬ್ರೂಹಿ ತತ್ರೋಪಾಯೋಽಸ್ತಿ ವಾ ನ ವಾ |

---

ವಾದ ಜ್ಞಾನವು ಲಭಿಸುವುದಿಲ್ಲ ಈ ವಿಷಯವು ನಮಗೆ ತಿಳಿಯಬೇಕಾದರೂ ಪುರಾಣಗ್ರಂಥವನ್ನು ಓದಿ ಅಥವಾ ಕೇಳಿರಬೇಕು ಯಾರು ಪುರಾಣಪಠನಶ್ರವಣಾದಿಗಳಲ್ಲಿ ವಿಮುಖರಾಗಿರುವರೋ ಅವರಿಗೆ ಈ ದೇವತೆಗಳ ವಂಚನೆ ತಿಳಿಯುವುದಿಲ್ಲ ಜ್ಞಾನಪ್ರದವಾದ ಈಶ್ವರಭಕ್ತಿಯು ಅಂತಹವರಿಗೆ ಉಂಟಾಗುವುದೂ ಇಲ್ಲ

೧೪. ಒಂದುವೇಳೆ ಸುಕೃತವಶದಿಂದ ಶಿವವಿಷಯಕವಾದ ಭಕ್ತಿಯುಂಟಾದರೂ, ಅದಕ್ಕೆ ವಿಚ್ಛಿತ್ತಿಯುಂಟಾಗುವಂತೆ ದೇವತೆಗಳು ಏರ್ಪಡಿಸುವರು ಹಾಗೂ ಅವಿಚ್ಛಿನ್ನವಾದ ಶಿವಭಕ್ತಿ ನೆಲಸಿದರೂ, ಶಿವಜ್ಞಾನೋತ್ಪತ್ತಿಗೆ ಮೊದಲೇ ಅದರಲ್ಲಿ ನಂಬಿಕೆಯೇ ಇಲ್ಲವಂತೆ ಮಾಡುವ ಅಜ್ಞಾನವು ದೇವತೆಗಳಿಂದ ಬಂದುಬಿಡುವುದು

೧೫ ಹೀಗೆ ಸೂತರು ವ್ಯಾಸೋಕ್ತಿಯನ್ನು ವಿವರಿಸುವಾಗಲೇ ಮಧ್ಯೆ ಜಿಜ್ಞಾಸುಗಳಾದ ಋಷಿಗಳು ಸೂತಮಹರ್ಷಿಗಳನ್ನು ಕುರಿತು "ಒಂದುವೇಳೆ ಹಾಗೆ ದೇವತೆಗಳು ವಿಘ್ನವನ್ನು ತಂದೊಡ್ಡಿದರೂ, ಅದನ್ನು ತಪ್ಪಿಸಿಕೊಂಡು ಜ್ಞಾನಾರ್ಜನಮಾಡುವ ಉಪಾಯವು ಯಾವುದೂ ಇಲ್ಲವೆ? ಹಾಗೆ ದೇವತೆಗಳಿಂದ ಬರುವ ಮೋಹಾದಿಗಳನ್ನು ತಡೆಗಟ್ಟುವ ಯುಕ್ತಿ ಏನಾದರೂ ಇದ್ದರೆ ನಮಗೆ ತಪ್ಪದೆ ಅದನ್ನು ತಿಳಿಸಬೇಕು" ಎಂದು ವಿನಯದಿಂದ ಪ್ರಾರ್ಥಿಸಿಕೊಂಡರು

೧೬-೧೮ ವಿಷಯವನ್ನು ತಿಳಿಯಬೇಕೆಂಬ ಆಸಕ್ತಿಯಿಂದ ಹಾಗೆ ಪ್ರಶ್ನೆಮಾಡಿದ ಋಷಿಸಮೂಹವನ್ನು ಕುರಿತು ಸೂತಮಹರ್ಷಿಗಳು ಬಹುಪ್ರೇಮ

|| ಸೂತ ಉವಾಚ ||

**ಕೋಟಿಜನ್ಮಾರ್ಜಿತೈಃ ಪುಣ್ಯೈಃ ಶಿವೇ ಭಕ್ತಿಃ ಪ್ರಜಾಯತೇ || ೧೬ ||**

**ಇಷ್ಟಾಪೂರ್ತಾನಿ ಕರ್ಮಾಣಿ ತೇನಾಚರತಿ ಮಾನವಃ ।**
**ಶಿವಾರ್ಪಣಧಿಯಾ ಕಾಮಾನ್ ಪರಿತ್ಯಜ್ಯ ಯಥಾವಿಧಿ || ೧೭ ||**

---

ದಿಂದ ಶಿವಭಕ್ತಿಯುದಯಿಸುವ ಮಾರ್ಗವನ್ನೂ, ಅದರಿಂದ ಮೋಕ್ಷವನ್ನು ಸಂಪಾದಿಸುವ ಪುರುಷಪ್ರಯತ್ನವನ್ನೂ ಈರೀತಿ ವಿವರಿಸಿದರು —

ಮಾನವರು ತಮ್ಮ ಹಿಂದಿನ ಕೋಟ್ಯಂತರ ಜನ್ಮಗಳಲ್ಲಿ ಸಂಪಾದಿಸಿದ ಸುಕೃತ ರಾಶಿಯಿಂದ ಯಾವುದೋ ಒಂದು ಜನ್ಮದಲ್ಲಿ ಈಶ್ವರ ವಿಷಯಕವಾದ ಭಕ್ತಿಯು ಮನಸ್ಸಿನಲ್ಲಿ ಉತ್ಪನ್ನವಾಗುವುದು ಅದನ್ನು ಮುಕ್ತಿಸಾಧಕವಾಗುವಂತೆ ಮಾಡಿಕೊಳ್ಳುವುದು ಮಾನವರ ಕರ್ತವ್ಯ ಈ ವಿಷಯದಲ್ಲಿ ಪುರುಷಪ್ರಯತ್ನವು ಬೇಕು ಶಿವಭಕ್ತಿಯುತನಾದವನು ಶಿವಾರ್ಪಣೆಯ ಬುದ್ಧಿಯಿಂದ ಯಾಗಾದಿಕರ್ಮಗಳನ್ನೂ, ಕೆರೆ, ತೋಟ, ಗೃಹ ಇವುಗಳನ್ನು ದಾನಮಾಡುವ ಸತ್ಕರ್ಮಗಳನ್ನೂ ಅವಿಚ್ಛಿನ್ನವಾಗಿ ನಡೆಸಬೇಕು ಅವೇ ನಿಷ್ಕಾಮಕರ್ಮವೆನಿಸುವುದು ಅದರಿಂದ ಚಿತ್ತಶುದ್ಧಿಯುಂಟಾಗಿ, ನಿತ್ಯ ಮತ್ತು ಅನಿತ್ಯ ವಸ್ತುಗಳ ವಿವೇಕವು ಲಭಿಸುವುದು ಪ್ರಾಪಂಚಿಕವಾದ ಸಕಲ ವಸ್ತುಗಳೂ ಅನಿತ್ಯಗಳೆಂದು ಆತನಿಗೆ ತಿಳಿದರೆ, ಕೂಡಲೇ ಎಲ್ಲ ದೃಶ್ಯವಸ್ತುಗಳಲ್ಲಿಯೂ ಜಿಹಾಸೆ ತೋರುವುದು ಅದೇ ವೈರಾಗ್ಯ ವೈರಾಗ್ಯದಿಂದ ಶಮದಮಾದಿಗಳು ಅಂದರೆ ಕಷ್ಟಸಹಿಷ್ಣುತೆ, ತಾಳ್ಮೆ ಮುಂತಾದ ಸುಗುಣಗಳು ಬರುವುವು ಅನಂತರ ಪರಬ್ರಹ್ಮವಸ್ತುವಿಷಯಕವಾದ ಜಿಜ್ಞಾಸೆಯೂ, ತದಂಗವಾಗಿ ಸರ್ವಸಂಗಪರಿತ್ಯಾಗರೂಪವಾದ ಸಂನ್ಯಾಸವೂ ಸಿದ್ಧಿಸುವುದು ಆಗ ಸದ್ಗುರೂಪದೇಶವುಂಟಾಗಿ, ಆ ಉಪದೇಶದ ಶ್ರವಣ, ಮನನ, ನಿದಿಧ್ಯಾಸನಗಳಿಂದ ಅಪ್ರತಿಬುದ್ಧ ಬ್ರಹ್ಮಸಾಕ್ಷಾತ್ಕಾರವು ಲಭಿಸುವುದು ಹೀಗೆ ಶಿವಭಕ್ತಿಯು ಮುಕ್ತಿಗೆ ಸಾಧನವೆನಿಸುವುದು ಇಂತಹ ಶಿವಭಕ್ತಿಯನ್ನು ಯಾರು ಶಿವಾನುಗ್ರಹದಿಂದ ಸಂಪಾದಿಸುವರೋ, ಅಂತಹವರನ್ನು ನೋಡಿದೊಡನೆಯೇ ದೇವತೆಗಳು ಹೆದರಿ ಅವರಲ್ಲಿ ತಮ್ಮ ಬಲ

**ಅನುಗ್ರಹಾತ್ತೇನ ಶಂಭೋಃ ಜಾಯತೇ ಸುದೃಢೋ ನರಃ ।**
**ತತೋ ಭೀತಾಃ ಪಲಾಯಂತೇ ವಿಘ್ನಂ ಹಿತ್ವಾ ಸುರೇಶ್ವರಾಃ ॥ ೧೮ ॥**
**ಜಾಯತೇ ತೇನ ಶುಶ್ರೂಷಾ ಚರಿತೇ ಚಂದ್ರಮೌಳಿನಃ ।**
**ಶೃಣ್ವತೋ ಜಾಯತೇ ಜ್ಞಾನಂ ಜ್ಞಾನಾದೇವ ಪ್ರಮುಚ್ಯತೇ ॥ ೧೯ ॥**
**ಬಹುನಾತ್ರ ಕಿಮುಕ್ತೇನ ಯಸ್ಯ ಭಕ್ತಿಶ್ಶಿವೇ ದೃಢಾ ।**
**ಮಹಾಪಾಪೋಪಪಾಪೌಘಕೋಟಿಗ್ರಸ್ತೋಽಪಿ ಮುಚ್ಯತೇ ॥ ೨೦ ॥**

---

ಪ್ರಯೋಗವನ್ನು ಮಾಡದೆ ಅವರ ಶಾಪಕ್ಕೆ ಹೆದರಿ ಓಡುವರು. ಆರೀತಿ ದೃಢನಾದ ಶಿವಭಕ್ತಿಯುಳ್ಳವರಿಗೆ ಯಾವ ದೇವತೆಗಳಿಂದಲೂ ಏನೂ ವಿಘ್ನವುಂಟಾಗಲಾರದು

೧೯-೨೦ ಹಾಗೆ ದೇವತೆಗಳಿಂದ ವಿಘ್ನವು ತಪ್ಪಿದಮೇಲೆ ಚಂದ್ರಶೇಖರ ನೆನಿಸಿದ ಮಹಾದೇವನ ಪವಿತ್ರವಾದ ಇತಿಹಾಸವನ್ನು ಕೇಳಬೇಕೆಂಬ ಆಸೆಯುಂಟಾಗುವುದು ಪರಶಿವನ ಚರಿತೆಯು ಸಗುಣಾತ್ಮಕವಾಗಿಯೂ, ನಿರ್ಗುಣಾತ್ಮಕವಾಗಿಯೂ ವೇದಪುರಾಣಾದಿಗಳಲ್ಲಿ ಪ್ರತಿಪಾದಿತವಾಗಿರುವುದು ತದೇಕಧ್ಯಾನದಿಂದ ಯಾರು ಶಿವಚರಿತೆಯಲ್ಲಿ ಮನಸ್ಸಿಡುವರೋ, ಅವರಿಗೆ ಕ್ರಮವಾಗಿ ವೈರಾಗ್ಯವೂ, ಅನಂತರ ಜೀವಾತ್ಮೈಕ್ಯಜ್ಞಾನವೂ ಲಭಿಸಿ ಮುಕ್ತಿಯು ಹಸ್ತಗತವಾಗುವುದು "ತಮೇವ ವಿದಿತ್ವಾತಿಮೃತ್ಯುಮೇತಿ" ಎಂಬ ಶ್ರುತಿಯೂ ಇದನ್ನೇ ತಿಳಿಸುವುದು ಆದ್ದರಿಂದಲೇ ಯಾರು ಪರಮೇಶ್ವರನಲ್ಲಿ ದೃಢವಾದ ಭಕ್ತಿಯಿಟ್ಟು, ಶಂಕರನ ಲೀಲಾಮಾತ್ರ ಬೋಧಕವಾದ ಚರಿತೆಗಳನ್ನೇ ಮನಸಾ ಅನುಸಂಧಾನಮಾಡುವರೋ, ಅವರು, ಎಂತಹ ಪಾಪಿಷ್ಠರಾಗಿದ್ದರೂ, ಜನ್ಮಾಂತರಗಳಲ್ಲಿ ಎಂತಹ ಪಾಪರಾಶಿಯನ್ನು ಕೂಡಿಹಾಕಿಕೊಂಡಿದ್ದರೂ, ಶಿವಭಕ್ತಿಯ ಮಹಿಮೆಯಿಂದ ಪರಿಶುದ್ಧರೆನಿಸುವರು ಅವರಿಗೆ ಬ್ರಹ್ಮಸಾಕ್ಷಾತ್ಕಾರವೊದಗುವುದು ಸಹಜ ಇವನ್ನೇ ಈ ಶಿವಗೀತೆಯ ೧೩ನೇ ಅಧ್ಯಾಯದ ೮ನೇ ಶ್ಲೋಕದಲ್ಲಿ ಶ್ರೀರಾಮನಿಗೆ ಪರಮೇಶ್ವರನೇ ಉಪದೇಶಮಾಡಿರುತ್ತಾನೆ. "ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯ-ಭಾಕ್ ಸಾಧುರೇವ ಸ ಮಂತವ್ಯಃ" ಎಂದು ಹೇಳಿ ಭಕ್ತಿಯ ಪರಾಕಾಷ್ಠೆಯನ್ನು ಸ್ಥಿರಪಡಿಸಿರುತ್ತದೆ

ಅನಾದರೇಣ ಶಾಠ್ಯೇನ ಪರಿಹಾಸೇನ ಮಾಯಯಾ ।
ಶಿವಭಕ್ತಿರತಶ್ಚೇತ್ಸ್ಯಾತ್ ಅಂತ್ಯಜೋಽಪಿ ವಿಮುಚ್ಯತೇ ॥ ೨೧ ॥

ಏವಂ ಭಕ್ತಿಶ್ಚ ಸರ್ವೇಷಾಂ ಸರ್ವದಾ ಸರ್ವತೋಮುಖೀ ।
ತಸ್ಯಾಂ ತು ವಿದ್ಯಮಾನಾಯಾಂ ಯಸ್ತು ಮರ್ತ್ಯೋ ನ ಮುಚ್ಯತೇ ॥ ೨೨ ॥

ಸಂಸಾರಬಂಧನಾತ್ತಸ್ಮಾತ್ ಅನ್ಯಃ ಕೋ ವಾಽಸ್ತಿ ಮೂಢಧೀಃ ।
ನಿಯಮಾದ್ಯಸ್ತು ಕುರ್ವೀತ ಭಕ್ತಿಂ ವಾ ದ್ರೋಹಮೇವ ವಾ ॥ ೨೩ ॥

---

೨೧ ಪರಮೇಶ್ವರನಲ್ಲಿ, ಉದಾಸೀನದಿಂದಲಾದರೂ, ಮೋಸದಿಂದ ಲಾದರೂ, ಹಾಸ್ಯದಿಂದಾದರೂ ಭಕ್ತಿಯನ್ನಿಟ್ಟರೂ ಸಾಕು ಒಂದುವೇಳೆ ಕಪಟ ಸ್ನೇಹವನ್ನು ಶಂಕರನಲ್ಲಿ ತೋರಿಸಿ ತಾನು ಭಕ್ತನೆಂದುಕೊಂಡರೂ ಸಾಕು ಅಂತಹ ವರನ್ನೂ ಪರಶಿವನು ಉದ್ಧರಿಸುವನು ಭಕ್ತಿಗೆ ಜಾತಿವ್ಯವಸ್ಥೆಯಿಲ್ಲ ಜಾತಿಯಿಂದ ಅಂತ್ಯಜನಾದರೂ ಅವನು ಭಕ್ತಿಯುತನಾದರೆ ಅವನಿಗೂ ಮುಕ್ತಿ ದೊರೆಯುವುದು ಇದರಲ್ಲಿ ಸಂಶಯವಿಲ್ಲ

೨೨ ಹೀಗೆ ಎಲ್ಲವರ್ಗದವರಿಗೂ ಸರ್ವಫಲಪ್ರದವೆನಿಸಿದ ಈ ಭಕ್ತಿಯು ಸುಲಭಸಾಧ್ಯವಾಗಿರುವಾಗ, ಇದರ ಫಲವನ್ನು ಪಡೆಯದೆ ನರಕಗಾಮಿಗಳಾದರೆ, ಅಂತಹವರನ್ನು ಉದ್ಧರಿಸುವವರು ಯಾರು ? ಸಂಸಾರಬಂಧವೆಂಬುದು ಸರ್ವರನ್ನೂ ಬಿಗಿದು ಹಿಡಿದಿರುವ ಒಂದು ಪಾಪಗ್ರಂಥಿ ಅದರಿಂದ ತಪ್ಪಿಸಿಕೊಳ್ಳುವುದಕ್ಕೆ ಈ ಶಿವಭಕ್ತಿಗಿಂತ ಉತ್ತಮವಾದ ಮತ್ತೊಂದು ಸಾಧನವೇ ಇರುವುದಿಲ್ಲ

೨೩–೨೪ ಪರಮಾತ್ಮನಲ್ಲಿ ಒಂದು ನಿಯಮದಿಂದ ದ್ರೋಹವೆಣಿಸಿದವರಿಗೂ ಮುಕ್ತಿಯುಂಟೆಂದು ಭಾಗವತವೇ ಮೊದಲಾದ ಗ್ರಂಥಗಳು ನಿದರ್ಶನಪೂರ್ವಕವಾಗಿ ತಿಳಿಸುತ್ತಿರುವುವು "ಗೋಪ್ಯಃ ಕಾಮಾದ್ಭಯಾತ್ಕಂಸೋ ದ್ವೇಷಾಚ್ಚೈದ್ಯಾದಯೋಽಪಿ ಚ । ನಿತ್ಯಂ ಹರೌ ವಿದಧತೋ ಯಾಂತಿ ಮನ್ಮಯತಾಂ ಹಿ ತೇ ॥" ಎಂಬ ಈ ವಚನದಂತೆ ಗೋಪಿಕಾಸ್ತ್ರೀಯರು ವಿಶೇಷಕಾಮದಿಂದಲೂ, ಕಂಸನು ಭಯದಿಂದಲೂ, ಶಿಶುಪಾಲನೇ ಮೊದಲಾದವರು ದ್ವೇಷದಿಂದಲೂ, ಕುಚೇಲಾದಿಗಳು ಸ್ನೇಹದಿಂದಲೂ

ತಸ್ಯಾಪಿ ಚೇತ್ತ್ರಸನ್ನೋಽಸೌ ಫಲಂ ಯಚ್ಛತಿ ವಾಂಛಿತಂ ।
ಉದ್ಭಂ ಕಿಂಚಿತ್ಸಮಾದಾಯ ಚುಳಕಂ ಜಲಮೇವ ವಾ ॥ ೨೪ ॥

ಯೋ ದದ್ಯಾನ್ನಿಯಮೇನಾಸೌ ತಸ್ಮೈ ದತ್ತೇ ಜಗತ್ತ್ರಯಂ ।
ತತ್ರಾಪ್ಯಶಕ್ತೋ ನಿಯಮಾತ್ ನಮಸ್ಕಾರಂ ಪ್ರದಕ್ಷಿಣಂ ॥ ೨೫ ॥

ಯಃ ಕರೋತಿ ಮಹೇಶಸ್ಯ ತಸ್ಮೈ ತುಷ್ಟೋ ಭವೇಚ್ಛಿವಃ ।
ಪ್ರದಕ್ಷಿಣಾದ್ಯಶಕ್ತೋಽಪಿ ಯಸ್ಸ್ವಾಂತೇ ಚಿಂತಯೇಚ್ಛಿವಂ ॥ ೨೬ ॥

---

ಶ್ರೀಕೃಷ್ಣನನ್ನು ವಿಧಿವತ್ತಾಗಿ ಸ್ಮರಿಸುತ್ತಾ ಮುಕ್ತಿಯನ್ನು ಪಡೆದರೆಂದು, ಪರಮಾತ್ಮಸಾಕ್ಷಾತ್ಕಾರಕ್ಕೆ ಪ್ರಕಾರಾಂತರವನ್ನೂ ತಿಳಿಸುತ್ತಿದೆ ಆದರೆ ಭಕ್ತಿಗಾಗಲಿ ದ್ವೇಷಕ್ಕಾಗಲಿ, ಸ್ನೇಹಕ್ಕಾಗಲಿ ಒಂದು ನಿಯಮಬೇಕು ತದೇಕಭಾವನ ಇರಬೇಕು ಅನಿಯತವಾದ ಭಕ್ತಿಯೂ ಈಶ್ವರನಿಗೆ ಪ್ರೀತಿಯಾಗಲಾರದು ದ್ರೋಹಿಗಳನ್ನೂ ಉದ್ಧರಿಸುವ ಪರಮಾತ್ಮನು ಭಕ್ತರನ್ನು ಮುಕ್ತರನ್ನಾಗಿ ಮಾಡದೆ ಇರುವನೆ ! ಶ್ರೀಮಂತನು ತನ್ನ ವೈಭವವನ್ನೆಲ್ಲಾ ಭಕ್ತಿಯಿಂದ ಪರಮಾತ್ಮ ಸಮರ್ಪಣೆಮಾಡಬೇಕು ದರಿದ್ರನು ತನ್ನ ಶಕ್ತಿಯನ್ನನುಸರಿಸಿ, ನೀರು, ಪತ್ರೆ, ಇವುಗಳನ್ನು ಭಕ್ತಿಯಿಂದ ಶಂಕರನಿಗೆ ಅರ್ಪಿಸಿದರೂ ಸಾಕು ದಯಾಳುವಾದ ಮಹೇಶ್ವರನು ಅದರಿಂದ ತೃಪ್ತನಾಗಿ ಮೂರುಲೋಕಗಳ ಐಶ್ವರ್ಯವನ್ನೇ ತನ್ನ ಭಕ್ತರಿಗೆ ಕರುಣಿಸುವನ

೨೫–೨೬ ವಿಧಿವತ್ತಾಗಿ ದೇವತಾರಾಧನೆಮಾಡಲು ಸಾಕಾದಷ್ಟು ಸಾದನೆ ಸಂಪತ್ತು ದೊರೆಯದಿದ್ದರೆ, ನಿಯಮಪೂರ್ವಕವಾಗಿ ಪರಮಾತ್ಮನಿಗ ಒಂದುಸಾರಿ ಪ್ರದಕ್ಷಿಣನಮಸ್ಕಾರಮಾಡಿದರೂ, ಅದರಿಂದ ಶಿವನು ತೃಪ್ತನಾಗುವನು ಆ ಪ್ರದಕ್ಷಿಣನಮಸ್ಕಾರಕ್ಕೂ ಅಸಮರ್ಥನೆನಿಸಿದವನು, ಮಹಾದೇವನನ್ನು ಉತ್ತಮ ಬಾವನೆಯಿಂದ ಧ್ಯಾನಿಸಬಹುದು ಶಿವಧ್ಯಾನಮಾಡುತ್ತಾ ಸ್ವಕಾರ್ಯಾರ್ಥವಾಗಿ ಸಂಚರಿಸಿದರೂ, ಒಂದೇ ಕಡೆ ಕುಳಿತಿದ್ದರೂ, ಪರಮೇಶ್ವರನು ಅದರಿಂದ ಪ್ರಸನ್ನನಾಗುವನು

ಗಚ್ಛೇ ಸಮುಪವಿಷ್ಟೋ ವಾ ತಸ್ಯಾಭೀಷ್ಟಂ ಪ್ರಯಚ್ಛತಿ ।
ಚಂದನಂ ಬಿಲ್ವಕಾಷ್ಠಸ್ಯ ಪುಷ್ಪಾಣಿ ವನಜಾನ್ಯಪಿ ॥ ೨೭ ॥

ಫಲಾನಿ ತಾದೃಶಾನ್ಯೇವ ಯಸ್ಯ ಪ್ರೀತಿಕರಾಣಿ ವೈ ।
ದುಷ್ಕರಂ ತಸ್ಯ ಸೇವಾಯಾಂ ಕಿಮಸ್ತಿ ಭುವನತ್ರಯೇ ॥ ೨೮ ॥

ವನ್ಯೇಷು ಯಾದೃಶೀ ಪ್ರೀತಿಃ ವರ್ತತೇ ಪರಮೇಶಿತುಃ
ಉತ್ತಮೇಷ್ವಪಿ ನಾಸ್ತ್ಯೇವ ತಾದೃಶೀ ಗ್ರಾಮಜೇಷ್ವಪಿ ॥ ೨೯ ॥

ತಂ ತ್ಯಕ್ತ್ವಾ ತಾದೃಶಂ ದೇವಂ ಯಸ್ಸೇವೇತಾನ್ಯದೇವತಾಂ ।
ಸ ಹಿ ಭಾಗೀರಥೀಂ ತ್ಯಕ್ತ್ವಾ ಕಾಂಕ್ಷತೇ ಮೃಗತೃಷ್ಣಿಕಾಂ ॥ ೩೦ ॥

೨೭–೨೮ ಶ್ರೀಗಂಧ, ಬಿಲ್ವಪತ್ರೆ, ಕಾಡಿನಲ್ಲಿ ಬೆಳೆದ ಹೂವು, ಮರದಿಂದ ಬಿದ್ದ ಹಣ್ಣುಗಳು, ಇವೂ ಸಹ ಭಕ್ತಿಯಿಂದ ಅರ್ಪಿತವಾದರೆ, ಪರಶಿವನಿಗೆ ಅವು ತೃಪ್ತಿಯನ್ನುಂಟುಮಾಡುವುವು ಕರುಣಾಕರನಾದ ಮಹೇಶ್ವರನನ್ನು ಸೇವಿಸಲು ಅಪೂರ್ವವಸ್ತುಗಳನ್ನೇನೂ ತರಬೇಕಾಗಿಲ್ಲ ಅತಿಯಾದ ಶ್ರಮವನ್ನೂ ವಹಿಸಬೇಕಿಲ್ಲ ಭಕ್ತಿಯೊಂದಿದ್ದರೆ ಮಹೇಶ್ವರನು ಅತ್ಯಂತ ಸುಲಭನೆನಿಸುವನು

೨೯–೩೦ ಮಹಾದೇವನಿಗೆ ಪಕ್ಷಪಾತಗುಣವಿಲ್ಲ ಲೋಕದಲ್ಲಿ ಸೃಷ್ಟವಾಗಿರುವ ಸಮಸ್ತವಸ್ತುಗಳಲ್ಲಿಯೂ ಅವನಿಗೆ ಅಭಿಮಾನವುಂಟು ಅಷ್ಟೇ ಅಲ್ಲ ನಾವು ಯಾವುದನ್ನು ನಿಕೃಷ್ಟವೆಂದು ಭಾವಿಸುವೆವೋ, ಅದನ್ನು ಪರಮಾತ್ಮನು ಪ್ರೀತಿಯಿಂದ ಸ್ವೀಕರಿಸುವನು ಕಾಡಿನಲ್ಲಿ ಬೆಳೆದ ವಸ್ತುಗಳನ್ನು ಪ್ರೀತಿಸುವಂತೆ ಮಹೇಶ್ವರನು ಧನಕನಕಾದಿ ಉತ್ತಮದ್ರವ್ಯಗಳನ್ನೂ, ಗ್ರಾಮಜನ್ಯವಾದ ಇತರ ಸಾರಫಲಗಳನ್ನೂ ಲಕ್ಷಿಸಲಾರನು ಹೀಗೆ ಸಹಜಸರಲನಾದ ಪರಶಿವನನ್ನು ಬಿಟ್ಟು ಬೇರೆ ಇತರ ಕ್ಷುದ್ರದೇವತೆಗಳನ್ನು ಆಶ್ರಯಿಸುವವರು ಮೂಢರಲ್ಲದೆ ಮತ್ತಾರು ? ದಿವ್ಯವಾದ ನೀರನ್ನು ಒದಗಿಸುವ ಸಮೀಪಸ್ಥವಾದ ಗಂಗಾನದಿಯನ್ನು ಅಲಕ್ಷಿಸಿ, ದೂರದಲ್ಲಿ ಕಾಣುವ ಬಿಸಿಲ್ಗುದುರೆಯ ಜಲಕ್ಕೆ ಮನಸ್ಸಿಡುವ ಅವಿವೇಕಿಯಂತೆ ದೇವತಾಂತರವನ್ನು ಭಜಿಸುವ ಮಾನವನು ನಿಷ್ಫಲನೆನಿಸುವನು

ಕಿಂತು ಯಸ್ಯಾಸ್ತಿ ದುರಿತಂ ಕೋಟಿಜನ್ಮಸು ಸಂಚಿತಂ ।
ತಸ್ಯ ಪ್ರಕಾಶತೇ ನಾಯಮರ್ಥೋ ಮೋಹಾಂಧಚೇತಸಃ ॥ ೩೧ ॥

ನ ಕಾಲನಿಯಮೋ ಯತ್ರ ನ ದೇಶಸ್ಯ ಸ್ಥಲಸ್ಯ ಚ ।
ಯತ್ರಾಸ್ಯ ಚಿತ್ತಂ ರಮತೇ ತತ್ರ ಧ್ಯಾನೇನ ಕೇವಲಂ ॥ ೩೨ ॥

ಸ್ವಾತ್ಮತ್ವೇನ ಶಿವಸ್ಯಾಸೌ ಶಿವಸಾಯುಜ್ಯಮಾಪ್ನುಯಾತ್ ।
ಅತಿಸ್ವಲ್ಪತರಾಯುಶ್ಚೇತ್ ಭೂತೇಶಾಂಶಾಧಿಪೋಽಪಿ ಯಃ ॥ ೩೩ ॥

ಸ ತು ರಾಜಾಽಹಮಸ್ಮೀತಿ ವಾದಿನಂ ಹಂತಿ ಸಾನ್ವಯಂ ।
ಕರ್ತಾಽಪಿ ಸರ್ವಲೋಕಾನಾಂ ಅಕ್ಷಯ್ಯೈಶ್ವರ್ಯವಾನಪಿ ॥ ೩೪ ॥

---

೩೧–೩೨ ಆದರೆ ಅನೇಕ ಜನ್ಮಗಳಿಂದ ಪಾಪರಾಶಿಯನ್ನು ಸಂಪಾದಿಸಿ ಕೊಂಡಿರುವ ಮಾನವರಿಗೆ ಎಂದಿಗೂ ಶಿವಭಕ್ತಿಯ ಶ್ರೇಷ್ಠತೆಯು ಹೊಳೆಯಲಾರದು ಅವರ ಮನಸ್ಸು ಅಜ್ಞಾನದಿಂದ ಆವೃತವಾಗಿರುತ್ತದೆ ಚಿತ್ತಶುದ್ಧಿಯಂತೂ ಅವರಿಗೆ ದುರ್ಲಭವೇ ಪರಮಾತ್ಮನ ಧ್ಯಾನಕ್ಕೆ ಕಾಲ, ದೇಶ, ಕ್ಷೇತ್ರ, ಇವುಗಳ ನಿಯಮವೇನೂ ಇಲ್ಲ ಯಾವಾಗ ಎಲ್ಲಿ ಪರಮಾತ್ಮನ ಧ್ಯಾನಕ್ಕೆ ಮನಸ್ಸು ಪ್ರವರ್ತಿಸುವುದೋ ಆ ಕಾಲವೇ, ಆ ಪ್ರದೇಶವೇ ಉತ್ತಮವಾದದ್ದೆಂದು ಭಾವಿಸ ಬೇಕು ಪರಶಿವನು ಧ್ಯಾನ ಗೋಚರನೂ, ಧ್ಯಾನಗಮ್ಯನೂ ಎಂಬುದನ್ನು ದೃಢವಾಗಿ ನಂಬಬೇಕು

೩೩–೩೪ ಪರಶಿವನೇ ಪರಮಾತ್ಮನು, ಸ್ವಾತ್ಮಸ್ವರೂಪಿಯೇ ಶಂಕರನು ಎಂದು ಭಾವಿಸಿ ಧ್ಯಾನಿಸುವುದೇ ನೈಜವಾದ ಆತ್ಮಜ್ಞಾನ ಇದನ್ನು ಪಡೆದವರಿಗೆ ಶಿವಸಾಯುಜ್ಯವು ಅನಾಯಾಸವಾಗಿ ಲಭಿಸುವುದು ಶಿವಧ್ಯಾನಾಸಕ್ತನಾದವನು, ಅಲ್ಪಾಯುವಾಗಿದ್ದರೂ ಪೂರ್ಣಾಯುರ್ದಾಯವನ್ನು ಪಡೆಯುವನು ಈಶಾಂಶದಿಂದ ಸಾಮಾನ್ಯ ಮಾಂಡಲಿಕರಾಜನೆನಿಸಿದ್ದರೂ, ಶಿವಧ್ಯಾನ ಬಲದಿಂದ ಆತನು ನಾನೇ ರಾಜನೆಂದು ಮೆರೆಯುವ ರಾಜಾಧಿರಾಜನನ್ನೂ ಧ್ವಂಸಮಾಡಿಬಿಡುವನು

ಶಿವಶ್ಶಿವೋऽಹಮಸ್ಮೀತಿ ವಾದಿನಂ ಯಂ ಚ ಕಂ ಚ ನ ।
ಆತ್ಮನಾ ಸಹ ತಾದಾತ್ಮ್ಯಭಾಗಿನಂ ಕುರುತೇ ಭೃಶಂ ॥ ३४ ॥

ಧರ್ಮಾರ್ಥಕಾಮಮೋಕ್ಷಾಣಾಂ ಪಾರಂ ಯಾಸ್ಯಂತಿ ಯೇನ ವೈ ।
ಮುನಯಸ್ತತ್ಪ್ರವಕ್ಷ್ಯಾಮಿ ವ್ರತಂ ಪಾಶುಪತಾಭಿದಂ ॥ ३५ ॥

ಕೃತ್ವಾ ತು ವಿರಜಾದೀಕ್ಷಾಂ ಭೂತಿರುದ್ರಾಕ್ಷಧಾರಿಣಃ ।
ಜಪಂತೋ ವೇದಸಾರಾಖ್ಯಂ ಶಿವನಾಮಸಹಸ್ರಕಂ ॥ ३६ ॥

ಸಂತ್ಯಜ್ಯ ತೇನ ಮರ್ತ್ಯತ್ವಂ ಶೈವೀಂ ತನುಮವಾಪ್ಸ್ಯಥ ।
ತತಃ ಪ್ರಸನ್ನೋ ಭಗವಾನ್ ಶಂಕರೋ ಲೋಕಶಂಕರಃ ॥ ३७ ॥

---

३४–३५ ಸರ್ವಲೋಕಾಧಿಪತಿಯಾಗಿ, ಸಮಸ್ತೈಶ್ವರ್ಯಕ್ಕೂ ಒಡೆಯನೆನಿಸಿರುವ ಮಹಾರಾಜನೂ ಕೂಡ, ಅವೆಲ್ಲವನ್ನೂ ಲಕ್ಷಿಸದೆ, "ಶಿವೋऽಹಂ" ಎಂಬ ಭಾವನೆಯಿಂದಿರಬೇಕು ಆರೀತಿ ಶಿವತಾದಾತ್ಮ್ಯವನ್ನರಿತವನು ಆತ್ಮಜ್ಞಾನಿಯೆನಿಸುವನು ಅವನೇ ಶಿವಸಾಯುಜ್ಯ ಪ್ರಾಪ್ತಿಗೆ ಅಧಿಕಾರಿ ಅಜ್ಞಾನಿಗಳು ಚಿತ್ತಶುದ್ಧಿಯನ್ನು ಪಡೆಯಬೇಕಾದರೆ ಒಂದು ಮಾರ್ಗವುಂಟು ಆ ಮಾರ್ಗವನ್ನನುಸರಿಸಿ, ಅನೇಕ ಮಹರ್ಷಿಗಳು ಧರ್ಮ, ಅರ್ಥ, ಕಾಮ, ಮೋಕ್ಷ ಈ ಪುರುಷಾರ್ಥಗಳನ್ನು ಸುಲಭವಾಗಿ ಸಂಪಾದಿಸುವರು ಪಾಶುಪತವ್ರತವೇ ಆ ಸುಲಭೋಪಾಯ ಪಾಶುಪತವ್ರತದ ವಿಧಾನವನ್ನೆಲ್ಲಾ ಈಗ ನಾನು ವಿಸ್ತಾರವಾಗಿ ಹೇಳಬೇಕೆಂದಿರುವೆನು

३६–३७ ಅದರಂತೆ ವಿರಜಾದೀಕ್ಷೆಯನ್ನು (ಇದರ ವಿವರಣೆ ಮುಂದಿದೆ) ಸ್ವೀಕರಿಸಿ, ವಿಭೂತಿ, ರುದ್ರಾಕ್ಷಿ ಇವುಗಳನ್ನು ಧರಿಸಿ, ವೇದಸಾರಶಿವಸಹಸ್ರನಾಮ ಸ್ತೋತ್ರವನ್ನು ಜಪಿಸುತ್ತಾ, ಶಿವಾನುಗ್ರಹವನ್ನು ಪಡೆದವರಿಗೆ ಈ ಮನುಷ್ಯಜನ್ಮವು ಮಾಯವಾಗಿ ಶಿವಸಾಯುಜ್ಯವು ಲಭಿಸುವುದು ಮಹರ್ಷಿವರ್ಯರೇ, ನೀವೂ ಇದರಂತೆ ನಡೆದು ಶೈವಧಾಮವನ್ನು ಪಡೆಯಿರಿ ನಿಮ್ಮಲ್ಲಿ ಶಂಕರನು ಕರುಣೆಯಿಡುವನು

ಭವತಾಂ ದೃಶ್ಯತಾಮೇತ್ಯ ಕೈವಲ್ಯಂ ವಃ ಪ್ರದಾಸ್ಯತಿ ।
ರಾಮಾಯ ದಂಡಕಾರಣ್ಯೇ ಯತ್ಪ್ರಾದಾತ್ಕುಂಭಸಂಭವಃ ॥ ೩೯ ॥
ತತ್ಸರ್ವಂ ವಃ ಪ್ರವಕ್ಷ್ಯಾಮಿ ಶೃಣುಧ್ವಂ ಭಕ್ತಿಯೋಗತಃ ।
ಇತಿ ಶ್ರೀ ಪದ್ಮಪುರಾಣೇ ಶಿವಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಸೂತರ್ಷಿಸಂವಾದೇ ಭಕ್ತಿಯೋಗೋ ನಾಮ
ಪ್ರಥಮೋಽಧ್ಯಾಯಃ

---

೪೦ ಪಾಶುಪತವ್ರತಾಚರಣೆಯಲ್ಲಿ ನೀವು ಭಕ್ತಿಯಿಂದ ತೊಡಗುವುದಾದರೆ, ಲೋಕಶಂಕರನಾದ ಮಹಾದೇವನು ಅನಾಯಾಸವಾಗಿ ನಿಮಗೆ ಪ್ರತ್ಯಕ್ಷನಾಗುವನು ಹಿಂದೆ ಇದೇ ಪಾಶುಪತವ್ರತವಿಧಾನವನ್ನು ಕುಂಭಸಂಭವನಾದ ಅಗಸ್ತ್ಯಮಹರ್ಷಿಯು ಶ್ರೀರಾಮನಿಗೆ ದಂಡಕಾರಣ್ಯದಲ್ಲಿ ಉಪದೇಶಿಸಿದನು. ಪತ್ನಿಯನ್ನು ಕಳೆದುಕೊಂಡು ದುಃಖಿತನಾಗಿದ್ದ ಶ್ರೀರಾಮನು ಅಗಸ್ತ್ಯರ ಉಪದೇಶದಂತೆ ಪಾಶುಪತವ್ರತವನ್ನು ಮಾಡಿ, ತನ್ಮೂಲಕ ದುಃಖಸಾಗರವನ್ನೇ ದಾಟಿದನು ಅದೇ ವಿಚಾರವನ್ನೇ ಈಗ ನಿಮಗೆ ಹೇಳುವೆನು, ಸಾವಧಾನದಿಂದ ಲಾಲಿಸಿರಿ ಎಂದು ಸೂತಮಹರ್ಷಿಗಳು ಶೌನಕಾದಿಗಳಿಗೆ ಭಕ್ತಿಯೋಗವೆಂಬ ಯೋಗಶಾಸ್ತ್ರಭಾಗವನ್ನು ಉಪದೇಶಿಸಿದರು

ಇಲ್ಲಿಗೆ ಪ್ರಥಮಾಧ್ಯಾಯವು ಸಮಾಪ್ತವಾದುದು

# ಶ್ರೀ ಶಿವಗೀತಾ

## ದ್ವಿತೀಯೋಽಧ್ಯಾಯಃ

॥ ಋಷಯ ಊಚುಃ ॥

ಕಿಮರ್ಥಮಾಗತೋಽಗಸ್ತ್ಯೋ ರಾಮಚಂದ್ರಸ್ಯ ಸನ್ನಿಧಿಂ ।
ಕಥಂ ವಾ ವಿರಜಾದೀಕ್ಷಾಂ ಕಾರಯಾಮಾಸ ರಾಘವಂ ॥ ೧ ॥

ತತಃ ಕಿಮಾಪ್ತವಾನ್ ರಾಮಃ ಫಲಂ ತದ್ವಕ್ತುಮರ್ಹಸಿ ।

॥ ಸೂತ ಉವಾಚ ॥

ರಾವಣೇನ ಯದಾ ಸೀತಾಽಪಹೃತಾ ಜನಕಾತ್ಮಜಾ ॥ ೨ ॥

ತದಾ ವಿಯೋಗದುಃಖೇನ ವಿಲಪನ್ನಾಸ ರಾಘವಃ ।
ನಿರ್ನಿದ್ರೋ ನಿರಹಂಕಾರೋ ನಿರಾಹಾರೋ ದಿವಾನಿಶಂ ॥ ೩ ॥

---

## ಎರಡನೆಯ ಅಧ್ಯಾಯ

ಸೂತಮಹರ್ಷಿಗಳು ಪಾಶುಪತವ್ರತದ ವಿಚಾರವನ್ನು ತಿಳಿಸಿದೊಡನೆಯೇ ಅದನ್ನು ಪೂರ್ಣವಾಗಿ ತಿಳಿದುಕೊಳ್ಳುವ ಕುತೂಹಲದಿಂದ ಶೌನಕಾದಿಗಳು ಈರೀತಿ ಪ್ರಶ್ನೆ ಮಾಡಿದರು.

೧–೨ "ಸೂತಮಹರ್ಷಿಯೇ, ನೀನು ಹಿಂದೆ ಹೇಳಿದಂತೆ ಅಗಸ್ತ್ಯಮಹರ್ಷಿಗಳು ಅಕಸ್ಮಾತ್ತಾಗಿ ಶ್ರೀರಾಮನ ಸಮೀಪಕ್ಕೆ ಬರಲು ಕಾರಣವೇನಿತ್ತು? ಅದರಿಂದ ಶ್ರೀರಾಮಚಂದ್ರನು ಪಡೆದ ಫಲವೇನು? ದಯೆಯಿಟ್ಟು ಈ ವಿಷಯವನ್ನೆಲ್ಲಾ ನಮಗೆ ತಿಳಿಯಪಡಿಸಬೇಕು."

೩–೪ ಹೀಗೆ ವಿನಯದಿಂದ ಪ್ರಾರ್ಥಿಸಿದ ಮುನಿವೃಂದವನ್ನು ಕುರಿತು ಸೂತಮಹರ್ಷಿಗಳು ಈ ರೀತಿ ಕಥಾಭಾಗವನ್ನು ಮುಂದುವರಿಸಿದರು. ಮುನಿವರ್ಯರೇ, ಕೇಳಿರಿ —ದುಷ್ಟನಾದ ರಾವಣನು ರಾಮಪತ್ನಿಯಾದ ಸೀತಾದೇವಿಯನ್ನು

ಮೋಕ್ತುಮೈಚ್ಛತ್ತತಃ ಪ್ರಾಣಾನ್ ಸಾನುಜೋ ರಘುನಂದನಃ ।
ಲೋಪಾಮುದ್ರಾಪತಿರ್ಜ್ಞಾತ್ವಾ ತಸ್ಯ ಸನ್ನಿಧಿಮಾಗಮತ್ ॥ ೪ ॥
ಅಥ ತಂ ಬೋಧಯಾಮಾಸ ಸಂಸಾರಾಸಾರತಾಂ ಮುನಿಃ ।

॥ ಅಗಸ್ತ್ಯ ಉವಾಚ ॥

ಕಿಂ ವಿಷೀದಸಿ ರಾಜೇಂದ್ರ ಕಾಂತಾ ಕಸ್ಯ ವಿಚಾರ್ಯತಾಂ ॥ ೫ ॥
ಜಡಃ ಕಿಂ ನು ವಿಜಾನಾತಿ ದೇಹೋಽಯಂ ಪಾಂಚಭೌತಿಕಃ ।
ನಿರ್ಲೇಪಃ ಪರಿಪೂರ್ಣಶ್ಚ ಸಚ್ಚಿದಾನಂದವಿಗ್ರಹಃ ॥ ೬ ॥

---

ಅಪಹರಿಸಿಕೊಂಡು ಹೋದನಷ್ಟೆ ಆಗ ಅದರಿಂದ ಅತ್ಯಂತ ದುಃಖಿತನಾದ ಶ್ರೀರಾಮನು ಪತ್ನೀವಿಯೋಗಕಾತರನಾಗಿ, ಆಹಾರ, ನಿದ್ದೆ ಇವುಗಳನ್ನು ತೊರೆದು ಬಹಳವಾಗಿ ಶೋಕಿಸಲಾರಂಭಿಸಿದನು ಅವನ ಮನೋವ್ಯಾಕುಲಕ್ಕೆ ಮೇರೆಯೇ ಇಲ್ಲವಾಯಿತು ಕೊನೆಗೆ ಶ್ರೀರಾಮನು ಲಕ್ಷ್ಮಣನೊಡಗೂಡಿ ಆತ್ಮಹತ್ಯೆಗೆ ಮನಸ್ಸು ಮಾಡಿದನು ಯೋಗಬಲದಿಂದ ಅದನ್ನರಿತ ಲೋಪಾಮುದ್ರಾಪತಿಯಾದ ಅಗಸ್ತ್ಯ ಮುನಿಯು ಸಂಸಾರದ ಅಸಾರತೆಯನ್ನು ವಿವರವಾಗಿ ತಿಳಿಸಲೋಸುಗ ಶ್ರೀರಾಮನ ಸಮೀಪಕ್ಕೆ ಹಠಾತ್ತಾಗಿ ಆಗಮಿಸಿದನು ಶ್ರೀರಾಮನ ಮುಖಮುದ್ರೆಯಿಂದ ಅವನ ಶೋಕಕಾರಣವನ್ನರಿತು, ಯೋಗಕ್ಷೇಮಾದಿಗಳನ್ನು ಸಹ ವಿಚಾರಿಸದೆ ಈರೀತಿ ಪ್ರಶ್ನಿಸಲಾರಂಭಿಸಿದನು —

೫–೬ ರಾಜಶ್ರೇಷ್ಠನಾದ ರಘುವೀರನೇ ? ಏತಕ್ಕಾಗಿ ನೀನು ಹೀಗೆ ಪರಿತಪಿಸುತ್ತಿರುವೆ ? ಇಷ್ಟು ವಿವೇಕಶಾಲಿಯಾದ ನೀನು ಪತ್ನೀವಿರಹಕ್ಕಾಗಿ ಇಷ್ಟು ಕಂಗೆಡುವುದು ನ್ಯಾಯವೆ ? ಸಾಮಾನ್ಯವಾಗಿ ಯಾವ ದುಃಖವೂ ಮಾನವರ ದೇಹಕ್ಕಾಗಲಿ, ಆತ್ಮನಿಗಾಗಲಿ ಸಲ್ಲುವುದು ನ್ಯಾಯವಲ್ಲ ಪಂಚಭೂತಾತ್ಮಕವಾದ ದೇಹವು ಜಡವಸ್ತುವಾದುದರಿಂದ ಅದಕ್ಕೆ ದುಃಖವೆಲ್ಲಿಯದು ? ಇನ್ನು ಆತ್ಮನಿಗೆ ಶೋಕಾದಿಗಳು ಎಂದಿಗೂ ಸಂಭವಿಸಲಾರವು. ಏತಕ್ಕೆಂದರೆ ಆತ್ಮವು ಸಚ್ಚಿದಾನಂದಾತ್ಮಕವಾದದ್ದು ಅದಕ್ಕೆ ಜನನಮರಣಾದಿಗಳಿಲ್ಲ ಸುಖದುಃಖಾದಿಗಳ ಸಂಬಂಧವೂ ತೋರುವುದಿಲ್ಲ ಅದು ಸದಾನಂದ ಪರಿಪೂರ್ಣವಾದದ್ದು

ಆತ್ಮಾ ನ ಜಾಯತೇ ನೈವ ಮ್ರಿಯತೇ ನ ಚ ದುಃಖಭಾಕ್ ।
ಸೂರ್ಯೋಽಸೌ ಸರ್ವಲೋಕಸ್ಯ ಚಕ್ಷುಷ್ಟ್ವೇನ ವ್ಯವಸ್ಥಿತಃ ॥ ೭ ॥

ತಥಾಽಪಿ ಚಾಕ್ಷುಷೈರ್ದೋಷೈಃ ನ ಕದಾಚಿದ್ವಿಲಿಪ್ಯತೇ ।
ಸರ್ವಭೂತಾಂತರಾತ್ಮಾಪಿ ತದ್ವದ್ದುಃಖೈರ್ನ ಲಿಪ್ಯತೇ ॥ ೮ ॥

ದೇಹೋಽಪಿ ಮಲಪಿಂಡೋಽಯಂ ಮುಕ್ತಜೀವೋ ಜಡಾತ್ಮಕಃ ।
ದಹ್ಯತೇ ವಹ್ನಿನಾ ಕಾಷ್ಠೈಃ ಶಿವಾದ್ಯೈರ್ಭಕ್ಷ್ಯತೇಽಪಿ ವಾ ॥ ೯ ॥

ತಥಾಪಿ ನೈವ ಜಾನಾತಿ ವಿರಹೇ ತಸ್ಯ ಕಾ ವ್ಯಥಾ ।
ಸುವರ್ಣಗೌರೀ ದೂರ್ವಾಯಾಃ ದಳವಚ್ಛ್ಯಾಮಲಾಪಿ ವಾ ॥ ೧೦ ॥

---

೭–೮ "ಅಸಂಗೋಽಹ್ಯಯಂ ಪುರುಷಃ ಅವಿನಾಶೀ ವಾ ಅರೇಽಯಮಾತ್ಮಾ" ಎಂಬ ಶ್ರುತ್ಯನುಸಾರವಾಗಿ ಆತ್ಮನಿಗೆ ದುಃಖಾದ್ಯುಪದ್ರವಗಳು ಎಂದೂ ಸಂಭವಿಸುವಂತಿಲ್ಲ ಆತ್ಮನಿಗೆ ಈ ಪಂಚಭೂತಾತ್ಮಕವಾದ ದೇಹಸಂಬಂಧದಿಂದ ದುಃಖವು ಪ್ರಾಪ್ತವಾಗುವುದೆಂದು ಹೇಳುವುದಾದರೆ, ಅದೂ ಸಾಧುವಲ್ಲ ಹೇಗೆಂದರೆ "ಆದಿತ್ಯಶ್ಚಕ್ಷುರ್ಭೂತ್ವಾಕ್ಷಿಣೀ ಪ್ರಾವಿಶತ್" ಎಂಬ ಶ್ರುತಿವಚನದಂತೆ ಸರ್ವಲೋಕಕ್ಕೂ ಸೂರ್ಯನು ನೇತ್ರಪ್ರಾಯನು ತಾನೆ? ಸೂರ್ಯನಿಲ್ಲದಿದ್ದರೆ ಯಾವ ಕಣ್ಣೂ ಯಾವ ಕೆಲಸವನ್ನೂ ಮಾಡಲಾರದು ಅಂತಹ ಸೂರ್ಯನು ಸರ್ವರ ಚಕ್ಷುರಿಂದ್ರಿಯದಲ್ಲೇ ಅಡಗಿದ್ದರೂ, ಚಕ್ಷುಸ್ಸಿಗೆ ಕಂಡುಬರುವ ಯಾವ ವ್ಯಾಧಿಗಳೂ ಆ ಸೂರ್ಯನಿಗೆ ಅಂಟಲಾರವು ಏಕೆಂದರೆ ಸೂರ್ಯನು ಸ್ವಭಾವವಾಗಿ ಚಾಕ್ಷುಷ ವ್ಯಾಧಿಗಳಿಗೆ ನಿರ್ಲಿಪ್ತನೆನಿಸುವನು ಅದರಂತೆಯೇ ಆತ್ಮವಸ್ತುವೂ ನಿರ್ಲೇಪವು ಸರ್ವಭೂತಾಂತರ್ವರ್ತಿಯಾಗಿದ್ದರೂ ಆತ್ಮನಿಗೆ ದುಃಖಸ್ಪರ್ಶವಿಲ್ಲ

೯–೧೦ ಪ್ರತ್ಯಕ್ಷಕ್ಕೆ ಗೋಚರವಾಗುವ ಈ ದೇಹವಾದರೋ ಕೇವಲ ಅಶುಚಿಯಾದ ವಸ್ತುಗಳಿಂದ ಪೂರ್ಣವಾದದ್ದು. ಲಿಂಗದೇಹಾತ್ಮಕವಾದ ಜೀವವು ದೇಹದಿಂದ ಯಾವಾಗ ಮಾಯವಾಗುವುದೋ, ಆ ಕೂಡಲೇ ಈ ಜಡದೇಹವನ್ನು ಬೆಂಕಿಯಿಂದ ಸುಟ್ಟುಬಿಡುವರು ಅಥವಾ ನರಿ ಕಾಗೆ ಮುಂತಾದುವುಗಳು ನಿರ್ಭಯ

ಪೀನೋತ್ತುಂಗಸ್ತನಾಭೋಗಭುಗ್ನಸೂಕ್ಷ್ಮವಲಗ್ನಕಾ ।
ಬೃಹನ್ನಿತಂಬಜಘನಾ ರಕ್ತಪಾದಸರೋರುಹಾ ॥ ೧೧ ॥

ರಾಕಾಚಂದ್ರಮುಖೀ ಬಿಂಬಪ್ರತಿಬಿಂಬರದಚ್ಛದಾ ।
ನೀಲೇಂದೀವರನೀಕಾಶನಯನದ್ವಯಶೋಭಿತಾ ॥ ೧೨ ॥

ಮತ್ತಕೋಕಿಲಸಂಲಾಪಾ ಮತ್ತದ್ವಿರದಗಾಮಿನೀ ।
ಕಟಾಕ್ಷೈರನುಗೃಹ್ಣಾತಿ ಮಾಂ ಪಂಚೇಷುಶರೋತ್ತಮೈಃ ॥ ೧೩ ॥

ಇತಿ ಯೋ ಮನ್ಯತೇ ಮೂರ್ಖಃ ಸ ತು ಪಂಚೇಷುಶಾಸಿತಃ ।
ತಸ್ಯಾವಿವೇಕಂ ವಕ್ಷ್ಯಾಮಿ ಶೃಣುಷ್ವಾವಹಿತೋ ನೃಪ ॥ ೧೪ ॥

---

ವಾಗಿ ಅದನ್ನು ತಿಂದುಬಿಡುವುವು ಆ ಸಮಯದಲ್ಲಿ ದೇಹಕ್ಕೆ ಯಾವ ವಿಧವಾದ ನೋವೂ ಸಂಭವಿಸುವುದಿಲ್ಲ ಇಂತಹ ದೇಹವು ಪತ್ನೀವಿರಹದುಃಖವನ್ನು ಹೇಗೆ ಹೊಂದೀತು ?

೧೦-೧೩ ಶ್ರೀರಾಮನೇ ಕೇಳು, ಲೋಕದಲ್ಲಿ ಸ್ತ್ರೀವ್ಯಕ್ತಿಯು ಸುವರ್ಣ ವಸ್ತುವಿನಂತೆ ಶೋಭಿಸುವ ದೇಹವುಳ್ಳದ್ದಾಗಿರುವುದು ಅಥವಾ ಎಳೆಗರಿಕೆಯಂತೆ ಶ್ಯಾಮಲವರ್ಣದಿಂದ ಶೋಭಿತವಾಗಿರಬಹುದು. ದಪ್ಪವಾದ ಸ್ತನಭಾರದಿಂದ ಬಗ್ಗಿದ ತೆಳುವಾದ ಸೊಂಟವುಳ್ಳದ್ದಾಗಿರಬಹುದು. ನಿತಂಬವೂ ಜಘನಪ್ರದೇಶವೂ ಸ್ಥೂಲ ವಾಗಿ ಕಾಣುತ್ತಾ, ಕಾಲು ಕೆಂಪಾಗಿ ಕೆಂದಾವರೆಯಂತೆ ರಂಜಿಸಬಹುದು ಮುಖವು ಪೂರ್ಣಚಂದ್ರನಂತೆಯೂ, ತುಟಿಯು ತೊಂಡೆಹಣ್ಣಿನಂತೆಯೂ, ಕಣ್ಣುಗಳು ನೀಲೋತ್ಪಲಗಳಂತೆಯೂ ಇದ್ದು, ಕೋಗಿಲೆಯಂತೆ ಮೃದುವಾದ ಇಂಚರ ದಿಂದಲೂ, ಮದ್ದಾನೆಯಂತೆ ಮಂದಗಮನದಿಂದಲೂ, ಸ್ತ್ರೀಯರು ಪುರುಷರ ಮನಸ್ಸನ್ನು ಉಪಭೋಗಕ್ಕಾಗಿ ಆಕರ್ಷಿಸಬಹುದು

೧೪-೧೫ ಈ ಲಕ್ಷಣವಿಶಿಷ್ಟಳಾದ ಹೆಂಗಸೊಬ್ಬಳು ತನ್ನನ್ನು ತನ್ನ ಓರೆಗಣ್ಣಿ ನಿಂದ ನೋಡಿ ಮೋಹಿಸುತ್ತಾಳೆ ಎಂದು ನಂಬಿ ಯಾವನು ಕಾಮಪರವಶನಾಗು

ನ ಚೆ ಸ್ತ್ರೀ ನ ಪುಮಾನೇಷಃ ನೈವ ಚಾಯಂ ನಪುಂಸಕಃ ।
ಅಮೂರ್ತಃ ಪುರುಷಃ ಪೂರ್ಣೋ ದ್ರಷ್ಟಾ ಸಾಕ್ಷೀ ಸಜೀವನಃ ॥ ೧೫ ॥

ಯಾ ತನ್ವಂಗೀ ಮೃದುರ್ಬಾಲಾ ಮಲಪಿಂಡಾತ್ಮಿಕಾ ಜಡಾ ।
ಸಾ ನ ಪಶ್ಯತಿ ಯತ್ಕಿಂಚಿನ್ನ ಶೃಣೋತಿ ನ ಜಿಘ್ರತಿ ॥ ೧೬ ॥

ಚರ್ಮಮಾತ್ರಂ ತನುಸ್ತಸ್ಯಾಃ ಬುದ್ಧ್ಯಾ ವೀಕ್ಷಸ್ವ ರಾಘವ ।
ಯಾ ಪ್ರಾಣಾದಧಿಕಾ ಸೈವ ಹಂತ ತೇ ಸ್ಯಾದ್ಘೃಣಾಸ್ಪದಂ ॥ ೧೭ ॥

---

ವನೋ, ಅವನನ್ನು ಎಂತಹ ಮೂರ್ಖನೆನ್ನೋಣ ರಾಜಪುತ್ರನಾದ ಶ್ರೀರಾಮನೇ, ಆ ಕಾಮುಕನ ಅಜ್ಞಾನವನ್ನು ಈಗ ನಿನಗೆ ವಿವರಿಸಿ ಹೇಳುವೆನು ಕೇಳು ಸ್ತ್ರೀಪುರುಷ ಸಾಮಾನ್ಯ ಜೀವಿಗಳ ಹೃದಯಾಂತರಾಳದಲ್ಲಿ ಅಡಗಿರುವ ಪರಮಾತ್ಮನು ಒಬ್ಬನೇ. ಉಪಾಧಿಭೇದದಿಂದ ಅವನು ನಾನಾ ಆಕಾರಗಳನ್ನು ಪಡೆಯುವನು ಸ್ವಭಾವವಾಗಿ ಆತ್ಮನು ಹೆಂಗಸೂ ಅಲ್ಲ ಗಂಡಸೂ ಅಲ್ಲ ನಪುಂಸಕನೂ ಅಲ್ಲ ಅಳತೆಗೆ ಸಿಲುಕದ ಆಕಾರವುಳ್ಳವನು ಸಮಸ್ತ ವಸ್ತುಗಳನ್ನೂ, ಕ್ರಿಯೆಗಳನ್ನೂ ಸಾಕ್ಷೀರೂಪದಿಂದ ನೋಡುತ್ತಿರುವವನು ಪರಿಪೂರ್ಣನೆನಿಸಿದವನು ಇಂತಹ ಆತ್ಮನೇ ಉಪಾಧಿ ವಶದಿಂದ ಪುರುಷಾಕಾರದಲ್ಲಿ ಕಂಡು ಬರುವನು

೧೬-೧೭ ಅದೇ ಅವ್ಯಕ್ತಸ್ವಭಾವದ ಆತ್ಮನು ಕೋಮಲವಾದ ದೇಹ, ಮೃದುವಾಣಿ ಮಂದಗಮನ ಮುಂತಾದ ಗುಣಗಳುಳ್ಳ ಸ್ತ್ರೀದೇಹದಲ್ಲಿ ಪ್ರತಿಫಲಿಸಿ, ಸ್ತ್ರೀಯಂತೆ ನಟಿಸುವನು ಎಲ್ಲ ದೇಹದಂತೆ ಆ ಸ್ತ್ರೀದೇಹವೂ ಮಲಪಿಂಡಾತ್ಮಕ ವಾದದ್ದು ಸ್ತ್ರೀದೇಹಾಂತರ್ವರ್ತಿಯಾದ ಆತ್ಮನೂ ಇಂದ್ರಿಯಾದಿಗಳಿಗೆ ಅಧೀನ ನಾದವನಲ್ಲ ಆ ಆತ್ಮನು ಯಾರನ್ನೂ ನೋಡುವವನಲ್ಲ ಏನನ್ನೂ ಕೇಳುವ, ವನಲ್ಲ ಯಾವ ವಸ್ತುವಿನ ಸುಗಂಧವನ್ನೂ ಆಘ್ರಾಣಿಸುವವನಲ್ಲ ಶ್ರೀರಾಮ ಚಂದ್ರನೇ, ಈಗ ನೀನು ನಿನ್ನ ಪತ್ನಿಯಲ್ಲಿ ಅಡಗಿರುವ ಆತ್ಮವಸ್ತುವನ್ನು ನೋಡು ತ್ತಿಲ್ಲ ಅದರ ನೈಜಸ್ಥಿತಿಯನ್ನೂ ಯೋಚಿಸುತ್ತಿಲ್ಲ ಮೃದುಮಧುರವಾಗಿ ಕಾಣುವ ಆ ಸೀತಾದೇಹಕ್ಕಾಗಿ ನೀನು ಆಸಪಡುತ್ತಿರುವೆ ಅದೇ ಕ್ಷಣಿಕವಾದ ಸೀತಾದೆ ಹ

ಜಾಯನ್ತೇ ಯದಿ ಭೂತೇಭ್ಯೋ ದೇಹಿನಃ ಪಾಂಚಭೌತಿಕಾಃ ।
ಆತ್ಮಾ ಯದ್ಯೇಕಲಸ್ತೇಷು ಪರಿಪೂರ್ಣಸ್ಸನಾತನಃ ॥ ೧೮ ॥

ಕಾ ಕಾಂತಾ ತತ್ರ ಕಃ ಕಾಂತಃ ಸರ್ವ ಏವ ಸಹೋದರಾಃ ।
ನಿರ್ಮಿತಾಯಾಂ ಗೃಹಾವಳ್ಯಾಂ ತದವಚ್ಛಿನ್ನಕಾಂ ಗತಂ ॥ ೧೯ ॥

ನಭಸ್ತಸ್ಯಾಂ ತು ದಗ್ಧಾಯಾಂ ನ ಕಾಂಚಿತ್ಕ್ಷತಿಮೃಚ್ಛತಿ ।
ತದ್ವದಾತ್ಮಾಪಿ ದೇಹೇಷು ಪರಿಪೂರ್ಣಸ್ಸನಾತನಃ ॥ ೨೦ ॥

ಹನ್ಯಮಾನೇಷು ತೇಷ್ವೇವ ಸ ಸ್ವಯಂ ನೈವ ಹನ್ಯತೇ ।
ಹಂತಾ ಚೇನ್ಮನ್ಯತೇ ಹಂತುಂ ಹತಶ್ಚೇನ್ಮನ್ಯತೇ ಹತಂ ॥ ೨೧ ॥

---

ವನ್ನು ನಿನ್ನ ಪ್ರಾಣಕ್ಕಿಂತಲೂ ಹೆಚ್ಚಿನದಾಗಿ ಕರುಣೆಯಿಂದ ಭಾವಿಸುತ್ತಿರುವೆ ಇದು ನಾಚಿಕೆಗೇಡು ರಾಘವನೇ ಸ್ವಲ್ಪ ವಿವೇಕದಿಂದ ದೇಹಾತ್ಮಗಳ ಸ್ವರೂಪ ವನ್ನು ವಿಮರ್ಶೆಮಾಡಿ ನೋಡು

೧೮-೧೯ ನಿತ್ಯನೂ, ಅದ್ವಿತೀಯನೂ ಆದ ಆತ್ಮನಿಗೆ ಪಂಚಭೂತಗಳ ಸಂಸರ್ಗದಿಂದ ಅನೇಕ ರೀತಿಯ ದೇಹಗಳು ಉತ್ಪನ್ನವಾಗುವುವು ಎಲ್ಲ ದೇಹ ಗಳಲ್ಲಿಯೂ ಪ್ರತಿಫಲಿಸುವ ಆತ್ಮನು ಮಾತ್ರ ಒಬ್ಬನೇ ಇದನ್ನೇ "ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ । ಏಕೋ ದೇವಃ ಸರ್ವಭೂತೇಷು ಗೂಢಃ" ಇತ್ಯಾದಿ ಶ್ರುತಿಗಳು ಸಾರಿಸಾರಿ ಹೇಳುತ್ತಿರುವುವು ಹೀಗೆ ಸಜಾತೀಯ ವಿಜಾತೀಯ ಸ್ವಗತಭೇದರಹಿತನಾದ ಪರಮಾತ್ಮನು ಪರಿಪೂರ್ಣನೆನಿಸಿ ಸರ್ವವ್ಯಾಪಿಯಾಗಿರುವಾಗ ಹೆಂಡತಿ ಯಾರು? ಗಂಡನು ಯಾರು? ಎಲ್ಲರೂ ಆತ್ಮಸ್ವರೂಪರೇ ಅಲ್ಲವೆ! ಒಬ್ಬನೇ ಆತ್ಮನು ಉಪಾಧಿಭೇದದಿಂದ ಸ್ತ್ರೀಪುರುಷಾಕಾರಗಳಲ್ಲಿ ಕಂಡುಬರುವ ನೆಂಬುದನ್ನು ಮಾತ್ರ ಮರೆಯಬೇಡ

೨೦-೨೧ ಒಂದುವೇಳೆ ಆ ದೇಹವು ನಾಶವಾದ ಮಾತ್ರಕ್ಕೆ ತದಂತರ್ವರ್ತಿ ಯಾದ ಆತ್ಮನಿಗೆ ನಾಶವಿಲ್ಲ ಹೇಗೆಂದರೆ ಎಲ್ಲ ಮನೆಗಳಲ್ಲಿ...



**ತಾವುಭೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ।**
**ತಸ್ಮಾನ್ನೃಪಾತಿದುಃಖೇನ ಕಿಂ ಖೇದಸ್ಯಾಸ್ತಿ ಕಾರಣಂ ॥ ೨೨ ॥**

---

(ಅವಕಾಶವು) ನಡುಮನೆ, ಕಿರುಮನೆ ಎಂಬ ಉಪಾಧಿಭೇದದಿಂದ ಕಿರಿದಾಗಿ, ಹಿರಿದಾಗಿ ಕಾಣುವುದು ಸ್ವಭಾವವಷ್ಟೆ ಒಂದುವೇಳೆ ಆ ಮನೆಯು ಸುಟ್ಟುಹೋದರೆ ಮನೆಯೊಳಗೆ ಕಂಡುಬರುತ್ತಿದ್ದ ಆಕಾಶವು (ಅವಕಾಶವು) ಧ್ವಂಸವಾಗುವುದಿಲ್ಲ ಅದೇ ಆಕಾಶವು ಹಿರಿದಾದ ಆಕಾಶದಲ್ಲಿ ಲೀನವಾಗಿ ದೊಡ್ಡದೆನಿಸುವುದು. ಮತ್ತೊಂದು ಮನೆಯ ನಿರ್ಮಾಣದಿಂದ ಮತ್ತೆ ಆಕಾಶಕ್ಕೆ ಹಿರಿಮ ಕಿರಿದರ ಭಾವವೇ ಕಾಣುವುದು ಅದೇ ರೀತಿ ಆತ್ಮವಸ್ತುವಿಗೆ ಉಪಾಧಿವಶದಿಂದ ಸ್ತ್ರೀಪುರುಷಭಾವ ತೋರಿದರೂ, ಆ ದೇಹವು ನಷ್ಟವಾದ ನಂತರ ದೇಹಾಂತರ್ವರ್ತಿಯಾದ ಆತ್ಮನು ಪರಮಾತ್ಮಭಾವವನ್ನೇ ತಾಳುವನು ದೇಹನಾಶದಿಂದ ಆತ್ಮನಿಗೆ ಎಂದೂ ಕ್ಷತಿಯಿರುವುದಿಲ್ಲ. ಮಾನವದೇಹಾದಿಗಳನ್ನು ಕೊಲ್ಲುವವನೂ ಆತ್ಮನೇ ಸಾಯುವವನೂ ಆತ್ಮನೇ ಘಾತುಕನು ನಾನು ಕೊಲ್ಲುವೆನು ಎನ್ನುತ್ತಾನೆ ಸಾಯುವವನು ನಾನು ಸಾಯುತ್ತೇನೆ ಎಂದು ನಂಬುತ್ತಾನೆ ಇವೆಲ್ಲವೂ ಸುಳ್ಳು ವ್ಯವಹಾರದಲ್ಲಿ ತೋರಿಬರುವ, ಹಂತೃಹನನಭಾವವೂ, ಪಾಲ್ಯಪಾಲಕಭಾವವೂ, ಜನ್ಯಜನಕಭಾವವೂ ಇದೇ ರಿ ತಿ ಮಿಥ್ಯಾಭೂತವಾದದ್ದು ಎಲ್ಲವೂ ಆತ್ಮಸ್ವರೂಪವೇ ಆಗಿರುವಾಗ ಈರೀತಿ ವ್ಯವಹಾರವು ಹೇಗೆ ಸಂಬಂಧವಾದೀತು ? ಅಜ್ಞಾನಿಗಳು ಮಾತ್ರ ಎಲ್ಲ ಕ್ರಿಯೆಗೂ, ಎಲ್ಲ ಸಿದ್ಧಿಗೂ ತಾವೇ ಕಾರಣರೆಂದು ನಂಬುತ್ತಾರೆ.

೨೨ ಶ್ರೀರಾಮಚಂದ್ರನೇ, ಈ ಆತ್ಮಸ್ವರೂಪವನ್ನು ನೀನು ಚೆನ್ನಾಗಿ ಅನುಸಂಧಾನಮಾಡಿ, ಕಾಂತಾವಿಷಯಕವಾದ ದುಃಖವನ್ನು 'ಮೊದಲು ದೂರಮಾಡು. ಸ್ವಸ್ವರೂಪವನ್ನರಿತು, ವ್ಯವಹಾರಮಾರ್ಗವನ್ನು ಮಿಥ್ಯೆಯೆಂದು ನಂಬಿ ಸುಖಿಯಾಗು' ಎಂದು ಅಗಸ್ತ್ಯಮಹರ್ಷಿಯು ಸ್ತ್ರೀಪುರುಷರ ನೈಜಸ್ವರೂಪವನ್ನು ವಿವರಿಸಿ ಶ್ರೀರಾಮನ ಅಭಿಪ್ರಾಯವನ್ನೇ ಎದುರುನೋಡುತ್ತ ಕುಳಿತನು

ಸ್ವಸ್ವರೂಪಂ ವಿದಿತ್ವೈವಂ ದುಃಖಂ ತ್ಯಕ್ತ್ವಾ ಸುಖೀ ಭವ ।

॥ ಶ್ರೀರಾಮ ಉವಾಚ ॥

ಮುನೇ ದೇಹಸ್ಯ ನೋ ದುಃಖಂ ನೈವ ಚೇತ್ಪರಮಾತ್ಮನಃ ॥ ೨೩ ॥

ಸೀತಾವಿಯೋಗದುಃಖಾಗ್ನಿಃ ಮಾಂ ಭಸ್ಮೀಕುರುತೇ ಕಥಂ ।
ಸದಾನುಭೂಯತೇ ಯೋಽರ್ಥಃ ಸ ನಾಸ್ತೀತಿ ತ್ವಯೇರಿತಃ ॥ ೨೪ ॥

ಜಾಯತಾಂ ತತ್ರ ವಿಶ್ವಾಸಃ ಕಥಂ ಮೇ ಮುನಿಪುಂಗವ ।
ಅನ್ಯೋಽತ್ರ ನಾಸ್ತಿ ಕೋ ಭೋಕ್ತಾ ಯೇನ ಜಂತುಃ ಪ್ರತಪ್ಯತೇ ॥ ೨೫ ॥

---

೨೩–೨೫. ಅಗಸ್ತ್ಯಮಹರ್ಷಿಗಳ ಮಾತನ್ನು ಕೇಳಿ ಶ್ರೀರಾಮನು ಆಶ್ಚರ್ಯಚಕಿತನಾಗಿ, "ಮಹರ್ಷಿವರ್ಯರೇ, ತಾವು ಇಲ್ಲಿನವರೆಗೂ ದೇಹ ಮತ್ತು ಆತ್ಮ ಇವುಗಳ ಸ್ವರೂಪವನ್ನು ವರ್ಣಿಸಿದಿರಿ ನಿಮ್ಮ ಅಭಿಪ್ರಾಯದಂತೆ ದುಃಖಾನುಭವವು ದೇಹಕ್ಕೂ ಆತ್ಮನಿಗೂ ಸಂಭವಿಸುವಂತೆಯೇ ಇಲ್ಲ ನನ್ನ ಅನುಭವದಲ್ಲಿ ಮಾತ್ರ ನನಗೆ ಸೀತಾವಿಯೋಗದುಃಖವು ಬಹುಕಾಲದಿಂದಿದೆ ಅಗ್ನಿಯು ಸುಡುವಂತೆ ಈ ದುಃಖವು ನನ್ನನ್ನು ಬೇಯಿಸುತ್ತಿದೆ ನಿಮ್ಮ ಮಾತಿನಂತೆ ದೇಹ ಮತ್ತು ಆತ್ಮಗಳಿಗೆ ದುಃಖವಿಲ್ಲದೆ ಹೋದರೆ, ದುಃಖವನ್ನು ಪಡೆಯುತ್ತಿರುವ ನಾನು ಯಾರು ? ದೇಹಾತ್ಮಗಳಿಗಿಂತ ಬೇರೆಯಾದ ವಸ್ತುವೇನಾದರೂ ಇರುವುದೆ ? ನನ್ನಂತೆಯೇ ಅನೇಕರು ದುಃಖಪಡುತ್ತಿರುವುದನ್ನು ನಾನು ನೋಡುತ್ತಿರುವೆನು ಹಾಗೆ ಸುಖದುಃಖಗಳನ್ನು ಪಡೆಯುವವರು ಯಾರು ? ಕೊಡುವವರು ಯಾರು ? ಈ ವಿಷಯದಲ್ಲಿ (ನನಗೆ) ನಂಬಿಕೆಯುಂಟಾಗುವಂತೆ ಸೂಕ್ಷ್ಮವಾದ ಆತ್ಮತತ್ತ್ವವನ್ನು ನನಗೆ ಉಪದೇಶಿಸಬೇಕು" ಎಂದು ಪ್ರಾರ್ಥಿಸಿಕೊಂಡನು ಹೀಗೆ ಆತ್ಮವಿಚಾರವನ್ನು ತಿಳಿಯುವ ಕುತೂಹಲದಿಂದ ಪ್ರಶ್ನೆಮಾಡಿದ ಶ್ರೀರಾಮನನ್ನು ಕುರಿತು ಅಗಸ್ತ್ಯಮಹರ್ಷಿಗಳು ಈ ರೀತಿ ನುಡಿದರು,—

ಸುಖಸ್ಯ ವಾಪಿ ದುಃಖಸ್ಯ ತದ್ಬ್ರೂಹಿ ಮುನಿಸತ್ತಮ ।

॥ ಅಗಸ್ತ್ಯ ಉವಾಚ ॥

ದುರ್ಜ್ಞೇಯಾ ಶಾಂಭವೀ ಮಾಯಾ ತಯಾ ಸಂಮೋಹ್ಯತೇ ಜಗತ್॥ ೨೬ ॥

ಮಾಯಾಂ ತು ಪ್ರಕೃತಿಂ ವಿದ್ಧಿ ಮಾಯಿನಂ ತು ಮಹೇಶ್ವರಮ್ ।
ತಸ್ಯಾವಯವಭೂತೇನ ವ್ಯಾಪ್ತಂ ಸರ್ವಮಿದಂ ಜಗತ್ ॥ ೨೭ ॥

ಸತ್ಯಜ್ಞಾನಾತ್ಮಕೋಽನಂತೋ ವಿಭುರಾತ್ಮಾ ಮಹೇಶ್ವರಃ
ತಸ್ಯೈವಾಂಶೋ ಜೀವಲೋಕೇ ಹೃದಯೇ ಪ್ರಾಣಿನಾಂ ಸ್ಥಿತಃ ॥ ೨೮ ॥

---

೨೬-೨೮ ಶ್ರೀರಾಮನೇ ಕೇಳು ಈಶ್ವರಾಧೀನವಾಗಿರುವ ಈಶ್ವರೀಶಕ್ತಿಯನ್ನು ಮಾಯೆಯೆನ್ನುವರು ಆ ಮಾಯಾಶಕ್ತಿಯು ಚತುರ್ವಿಧವಾದ (ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜ) ಪ್ರಾಣಿಜಾಲವನ್ನೂ ಮೋಹಗೊಳಿಸುವುದು. ಸಾಂಖ್ಯಮತಾನುಯಾಯಿಗಳು ಆ ಮಾಯೆಯನ್ನೇ ಪ್ರಕೃತಿಯೆನ್ನುವರು ಆ ಪ್ರಕೃತಿಯು ಅಲ್ಲಿ ಸ್ವತಂತ್ರವಾದದ್ದು ಇದೇ ಲೋಕವನ್ನು ಶತ್ರುಮಿತ್ರತ್ವ ಭಾವದಿಂದ ಬಂಧಿಸುವುದು ಎಂದು ಅವರು ಅಭಿಪ್ರಾಯಪಡುವರು ಹಾಗೆಯೇ ಸಾಂಖ್ಯರು ಚೈತನ್ಯವಿಶಿಷ್ಟನಾದ ಪುರುಷನನ್ನು ತಾವರೆ ಎಲೆಯ ಮೇಲಿನ ನೀರಿನಂತೆ ನಿರ್ಲೇಪನು, ಎಂದು ಹೇ- ಪ್ರಕೃತಿಶಕ್ತಿಯನ್ನೇ ಜಗತ್ಕಾರಣವನ್ನಾಗಿ ಹೇಳುವರು ಆದರೆ ಅದ್ವೈತಿಗಳು, ಮಾಯೆಯು ಈಶ್ವರಾಧೀನವಾದ ಶಕ್ತಿವಿಶೇಷವೆಂದು ಒಪ್ಪುವರು ಮಹೇಶ್ವರನೂ ಕೂಡ ಮಾಯಾರೂಪವಾದ ಆ ಶಕ್ತಿಯನ್ನು ಅಧೀನವನ್ನಾಗಿ ಮಾಡಿಕೊಂಡು, ಜಗತ್ತಿಗೆ ಉಪಾದಾನಕಾರಣನೆನಿಸುವನು ಮಾಯಾಕಾರ್ಯವಾದ ಅಹಂಕಾರದಲ್ಲಿ ಪ್ರತಿಬಿಂಬರೂಪವಲ್ಲಿ ಪ್ರತಿಫಲಿಸುವ ಚೈತನ್ಯವೇ ಜೀವವು. ಆ ಚೈತನ್ಯ ಪ್ರತಿಬಿಂಬಗಳೇ ಮಹೇಶ್ವರಾಂಶಗಳು ಈ ಮಹೇಶ್ವರಾಂಶದಿಂದಲೇ ಚರಾಚರಾತ್ಮಕವಾದ ಪ್ರಪಂಚವೆಲ್ಲಾ ತುಂಬಿಹೋಗಿರುವುದು ಮಹೇಶ್ವರನು ಸತ್ಯಜ್ಞಾನಸ್ವರೂಪನು ನಾಶರಹಿತನು ಅಂದರೆ ಶಾಶ್ವತನು ಇದರಿಂದಲೇ ಆತ್ಮನು ಎಲ್ಲ ಕಾಲದಲ್ಲಿಯೂ ಇರುವವನು ಸರ್ವವ್ಯಾಪಿಯಾದ ಆತ್ಮನಿಗೆ ದೇಶವ್ಯವಸ್ಥೆ

ವಿಷ್ಫುಲಿಂಗಾ ಯಥಾ ವಹ್ನೇರ್ಜಾಯಂತೇ ಕಾಷ್ಠಯೋಗತಃ ।
ಅನಾದಿಕರ್ಮಸಂಬಂದಾತ್ತದ್ವದಂಶಾ ಮಹೇಶಿತುಃ ॥ ೨೯ ॥

ಅನಾದಿವಾಸನಾಯುಕ್ತಾಃ ಕ್ಷೇತ್ರಜ್ಞಾ ಇತಿ ತೇ ಸ್ಮೃತಾಃ ।
ಮನೋಬುದ್ಧಿರಹಂಕಾರಃ ಚಿತ್ತಂ ಚೇತಿ ಚತುಷ್ಟಯಂ ॥ ೩೦ ॥

---

ಯಿಲ್ಲ ಆತ್ಮನಿಗಿಂತ ಬೇರೆಯಾದ ವಸ್ತುವೇ ಇಲ್ಲ ಅಂತಹ ಆತ್ಮಾಂಶವೇ ಜೀವ ಲೋಕವಾಗಿ ಪರಿಣಮಿಸಿದೆ ಮಾಯಾವಚ್ಛಿನ್ನ ಚೈತನ್ಯವೇ ನಾನಾಜೀವರೂಪವಾಗಿ ಕಂಡುಬರುತ್ತಿದೆ "ಯಥಾಹ್ಯಯಂ ಜ್ಯೋತಿರಾತ್ಮಾ ವಿವಸ್ವಾನಪೋ ಭಿನ್ನಾ ಬಹು ಧೈಕೋನುಗಚ್ಛನ್ । ಉಪಾಧಿನಾ ಕ್ರಿಯತೇ ಭೇಧರೂಪೋ ದೇವಃ ಕ್ಷೇತ್ರೇಷ್ವೇವ ಮಜೋಯಮಾತ್ಮಾ । ಏಕ ಏವ ಹಿ ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತಃ । ಏಕಧಾ ಬಹುಧಾ ಚೈವ ದೃಶ್ಯತೇ ಜಲಚಂದ್ರವತ್" ಇತ್ಯಾದಿ ಶ್ರುತಿಗಳೂ ಇದೇ ಅರ್ಥವನ್ನೇ ಪ್ರಕಾಶಪಡಿಸುತ್ತಿವೆ

೨೯-೩೦ ಉಷ್ಣಪ್ರಕಾಶಾತ್ಮಕವಾದ ಅಗ್ನಿಯು ಸೌದೆಯ ಸಂಸರ್ಗದಿಂದ ಉರಿ, ಕೆಂಡ ಮುಂತಾದ ರೂಪಾಂತರಗಳನ್ನು ಪಡೆದು, ದೇಶಕಾಲಾದಿಗಳ ಪರಿಚ್ಛೇದಕ್ಕೆ ಒಳಪಡುವಂತೆ, ಅನಾದಿಕರ್ಮಸಂಬಂಧದಿಂದ ತಾದಾತ್ಮ್ಯಭಾವವನ್ನು ಹೊಂದಿದ ಮಹೇಶ್ವರಾಂಶಗಳು ಜೀವರೂಪಗಳಾಗಿ ಸುಖದುಃಖಾದ್ಯನುಭವಗಳಿಗೆ ಪಾತ್ರವಾಗುತ್ತವೆ ಲೋಕಸೃಷ್ಟಿಗೆ ಮೊದಲೇ ಅನಾದಿಕರ್ಮ ಸಂಸ್ಕಾರಗಳಿಂದ ಯುಕ್ತವಾದ ಜೀವವು ಸೃಷ್ಟಿಕಾಲದಲ್ಲಿ ಮಾಯಾಕಾರವಾದ ಅಹಂಕಾರದಲ್ಲಿ ಸೇರಿ ಸ್ತ್ರೀಪುರುಷಾದಿ ಜೀವಾತ್ಮನಾ ಪ್ರತಿಫಲಿಸಿ ಸುಖದುಃಖಾದಿ ಭೋಗಗಳಿಗೆ ಕಾರಣವಾಗುತ್ತದೆ ಬ್ರಹ್ಮಜ್ಞಾನಾರ್ಜನೆಯಿಂದ ಮಾತ್ರವೇ ಜೀವನಿಗೆ ಆ ದುಃಖ ನಿವೃತ್ತಿಯಾಗುವುದು ಅನಾದಿಕರ್ಮಸಂಸ್ಕಾರಜನ್ಯವಾದ ಸುಖದುಃಖಾದಿಗಳನ್ನು ಅನುಭವಿಸಲು ಸ್ಥೂಲಶರೀರವೊಂದು ಪಂಚಭೂತಗಳ ಪಂಚೀಕರಣದಿಂದ ಉತ್ಪನ್ನವಾಗುವುದು ಶಿವಮಾಯಾಮೋಹಿತವಾದ ಆತ್ಮವೇ, ನಾನು ಸ್ಥೂಲನಾಗಿರುವೆನು, ನಾನು ತೆಳ್ಳಗಿರುವೆನು, ನಾನು ಜಾತಿಯಿಂದ ಬ್ರಾಹ್ಮಣನು, ಕ್ಷತ್ರಿಯನು ಇತ್ಯಾದಿ

**ಅಂತಃಕರಣಮಿತ್ಯಾಹುಃ ತತ್ರ ತೇ ಪ್ರತಿಬಿಂಬಿತಾಃ ।**
**ಜೀವತ್ವಂ ಪ್ರಾಪ್ನುಯುಃ ಕರ್ಮ ಫಲಭೋಕ್ತಾರ ಏವ ತೇ || ೩೧ ||**

**ತತೋ ವೈಷಯಿಕಂ ತೇಷಾಂ ಸುಖಂ ವಾ ದುಃಖಮೇವ ವಾ ।**
**ತ ಏವ ಭುಂಜತೇ ಭೋಗಾಯತನೇಽಸ್ಮಿನ್ ಶರೀರಕೇ || ೩೨ ||**

---

ಯಾವ ಜಾತಿಗುಣ ವಿಭಾಗಾತ್ಮಕವಾದ ಅಜ್ಞಾನದಿಂದ ಕೂಡಿ, ಸಂಸಾರದ ಹೋರಾಟದಲ್ಲಿ ಪಾತ್ರವಹಿಸುವನು

೩೧–೩೨ ಶಿವಮಾಯಾ ವಿಶಿಷ್ಟನಾದ ಆತ್ಮನು ಪ್ರಾಣಿಗಳ ಹೃದಯದಲ್ಲಿ ನಿಲ್ಲುತ್ತಾನೆಂದು ಹಿಂದೆ ಹೇಳಿದೆಯಷ್ಟೆ ಆ ಹೃದಯಗ್ರಂಥಿಸ್ವರೂಪವನ್ನು ಸ್ವಲ್ಪ ವಿವರಿಸುವೆನು ಕೇಳು ಅಂತಃಕರಣವೆಂಬುದು, ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ ಎಂದು ನಾಲ್ಕು ವಿಧಗಳುಳ್ಳದ್ದು ಅಹಂಪದಾರ್ಥಕ್ಕೆ ಮುಖ್ಯವಾಗಿ ಅಂತಃಕರಣವೆಂಬ ಮನಸ್ಸೇ ಗೋಚರವು ಅವಿದ್ಯಾವಶನಾದ ಆತ್ಮನೂ ಅಂತಃಕರಣವೂ ಬೆರೆತುಕೊಂಡು ನಾನು ಸುಖಿಯು, ನಾನು ದುಃಖಿಯು ಎಂಬ ವ್ಯವಹಾರವು ಹುಟ್ಟುವುದು ಸಂಕಲ್ಪವಿಕಲ್ಪಾತ್ಮಕವಾದದ್ದೇ ಮನಸ್ಸು ಬುದ್ಧಿಯು ನಿಶ್ಚಯಾತ್ಮಕವಾದದ್ದು ಅಭಿಮಾನವುಳ್ಳದ್ದೇ ಅಹಂಕಾರ ಅನುಸಂಧಾನಾತ್ಮಕವಾದದ್ದು ಚಿತ್ತ ಈ ಮನೋಬುದ್ಧ್ಯಹಂಕಾರ ಚಿತ್ತಗಳಲ್ಲಿ ಪರಮೇಶ್ವರಾಂಶಗಳು ಅವಿದ್ಯಾಸಂಬಂಧದಿಂದ, ಪ್ರತಿಬಿಂಬಿತಗಳಾಗಿ ಚೈತನ್ಯಸ್ವರೂಪವನ್ನು ಪಡೆದು ಜೀವಿಗಳೆನಿಸಿ, ಕರ್ಮಫಲವನ್ನು ಅನುಭವಿಸಲು ಯೋಗ್ಯಗಳಾಗುವುವು ಜೀವನು ದೇಹೇಂದ್ರಿಯಾಂತಃಕರಣಗಳೊಡನೆ ಬೆರೆತು ತಾನೇ ದೇಹಾದಿಸಂಘಾತನೆಂದು ಭ್ರಮಿಸಿ, ಅಹಂಕಾರಮಮಕಾರತೆಯಿಂದ ಸಂಸಾರಸಮುದ್ರದಲ್ಲಿ ಬಿದ್ದು ಜನ್ಮಜರಾಮರಣವೇ ಮೊದಲಾದ ದುಃಖವನ್ನು ಅನುಭವಿಸುವನು (ಶೋಕಹರ್ಷಭಯಕ್ರೋಧ ಲೋಭ ಮೋಹ ಸ್ಪೃಹಾದಯಃ । ಅಹಂಕಾರಸ್ಯ ದೃಶ್ಯಂತೇ ಜನ್ಮಮೃತ್ಯುಶ್ಚ ನಾತ್ಮನಃ ॥ ಸರ್ವಶ್ಚಿತ್ತ ವಿಲಾಸೋಽಯಂ) ಇತ್ಯಾದಿ ವಾಕ್ಯಗಳೂ ಇದನ್ನೇ ತಿಳಿಸುವುವು

ಸ್ಥಾವರಂ ಜಂಗಮಂ ಚೇತಿ ದ್ವಿವಿಧಂ ವಪುರುಚ್ಯತೇ ।
ಸ್ಥಾವರಾಸ್ತತ್ರ ದೇಹಾಸ್ಸ್ಯುಃ ವೃಕ್ಷಗುಲ್ಮಲತಾದಯಃ ॥ ೩೩ ॥

ಜರಾಯುಜಾಂಡಜಾಶ್ಚೈವ ಸ್ವೇದಜಾ ಇತಿ ಜಂಗಮಾಃ ।
ಯೋನಿಮನ್ಯೇ ಪ್ರಪದ್ಯಂತೇ ಶರೀರತ್ವಾಯ ದೇಹಿನಃ ॥ ೩೪ ॥

---

೩೩–೩೪ ಜೀವನಿಗೆ ಕರ್ಮಫಲಜನ್ಯವಾದ ಸುಖದುಃಖಾದಿಗಳನ್ನು ಅನುಭವಿಸುವುದಕ್ಕೆ ಒಂದು ಸ್ಥೂಲ ಶರೀರವು ಪಾಂಚಭೌತಿಕವಾಗಿ ಉತ್ಪನ್ನವಾಗುವುದಷ್ಟೆ ಆ ಶರೀರದ ಮೂಲಕ ವಿಷಯ ಸುಖವನ್ನೂ ದುಃಖವನ್ನೂ ಜೀವನು ಅನುಭವಿಸುವನು ಸರ್ವಭೋಗಸಾಧನವಾದ ದೇಹವು ಸ್ಥಾವರ, ಜಂಗಮ ಎಂದು ಎರಡು ಮುಖ್ಯ ವಿಧವುಳ್ಳದ್ದು ಮರ, ಬಳ್ಳಿ, ಪೊದರು ಇವೇ ಮೊದಲಾದ ವೃಕ್ಷಜಾತಿಗಳೆಲ್ಲಾ ಸ್ಥಾವರದೇಹವುಳ್ಳವುಗಳು ಇನ್ನು ಗರ್ಭಕೋಶದಲ್ಲಿ ಜನಿಸುವ ಪ್ರಾಣಿಗಳೂ ಮೊಟ್ಟೆಗಳಿಂದ ಮರಿಗಳಾಗುವ ಪಕ್ಷಿಗಳೂ, ಬೆವರಿನಿಂದ ಹುಟ್ಟುವ ಹೇನು ಕೂರೆ ಇವುಗಳೂ, ಜಂಗಮಾತ್ಮಕವಾದ ದೇಹಗಳನ್ನು ಪಡೆದಿರುವುವು ಜೀವನು ಸ್ವಕರ್ಮಜನ್ಯವಾದ ಪುಣ್ಯವಿಶೇಷದಿಂದ ಶರೀರವನ್ನು ಪಡೆಯಲು ಸ್ತ್ರೀಗರ್ಭದಲ್ಲಿ ಸೇರಿ ಯೋನಿಯ ಮೂಲಕ ಭೂಲೋಕವನ್ನು ಹೊಂದುವನು ಇನ್ನು ಕೆಲವು ಪಾಪಫಲದ ನಿಮಿತ್ತವಾಗಿ ವೃಕ್ಷಾದಿಗಳ ಜನ್ಮವನ್ನೂ ಪಡೆಯುವನು ಹೀಗೆ ದೇಹೇಂದ್ರಿಯ ಸಂಘಾತರೂಪವಾದ ಅಹಂಪದಾರ್ಥವೂ, ಚೈತನ್ಯಸ್ವರೂಪವಾದ ಮಹೇಶ್ವರಾಂಶವೂ ಒಂದಾಗಿ ತೋರಿ, ನಾನು ಸುಖಿ, ನಾನು ದುಃಖಿ, ನಾನು ಕುರುಡ, ಕುಂಟ ಮುಂತಾದ ಅನುಭವಗಳು ಮೇಲೆ ಮೇಲೆ ಉಂಟಾಗುವುವು ಸಂಘಾತದಲ್ಲಿ ಸೇರಿರುವ ಅಂತಃಕರಣದಲ್ಲಿ ಬುದ್ಧಿ, ಸುಖ, ದುಃಖೇಚ್ಛಾದಿಗಳಿರುವುವು ದೇಹದಲ್ಲಿ ಜನ್ಮ, ಜರಾ, ಮರಣಾದಿಗಳು ಕಾಣುವುವು ಕುರುಡುತನ, ಕುಂಟುತನ ಇವು ಇಂದ್ರಿಯಗಳಿಂದ ತೋರುವ ಅಂಶಗಳು ಆತ್ಮನಲ್ಲಿರುವ ಚೈತನ್ಯ, ವಿಷಯಾನುಭವ, ಆನಂದ ಮೊದಲಾದ ಧರ್ಮಗಳು ಅಂತಃಕರಣದಲ್ಲಿಯೂ ತೋರುವುವು ಇದರಿಂದ ಅನಾದಿಯಾಗಿ ಲೋಕವ್ಯವಹಾರ ನಡೆಯುತ್ತಿರುವುದು

ಸ್ಥಾಣುಮನ್ಯೇऽನುಸಂಯಂತಿ ಯಥಾಕರ್ಮ ಯಥಾಶ್ರುತಂ ।
ಸುಖ್ಯಹಂ ದುಃಖ್ಯಹಂ ಚೇತಿ ಜೀವ ಏವಾಭಿಮನ್ಯತೇ || ೩೫ ||

ನಿರ್ಲೇಪೋऽಪಿ ಪರಂಜ್ಯೋತಿಃ ಮೋಹಿತಃ ಶಂಭುಮಾಯಯಾ ।
ಕಾಮಃ ಕ್ರೋಧಸ್ತಥಾ ಲೋಭೋ ಮದೋ ಮಾತ್ಸರ್ಯಮೇವ ಚ || ೩೬ ||

ಮೋಹಶ್ಚೇತ್ಯರಿಷಡ್ವರ್ಗಂ ಅಹಂಕಾರಗತಂ ವಿದುಃ ।
ಸ ಏವ ಬಾಧ್ಯತೇ ಜೀವಃ ಸ್ವಪ್ನಜಾಗ್ರದವಸ್ಥಯೋಃ || ೩೭ ||

---

೩೫-೩೬ ನಿಜವಾಗಿ ಜೀವನೆಂಬ ವಸ್ತುವೇ ಬೇರೆ ಇಲ್ಲ ಪರಂಜ್ಯೋತಿಯಾದ ಪರಶಿವನೇ ಜೀವನು. ಆದರೆ ಪರಶಿವಮಾಯೆಯಿಂದ ಆಚ್ಛಾದಿತವಾಗಿ ಸುಖ ದುಃಖಗಳ ಭ್ರಾಂತಿಯನ್ನು ಪಡೆದು, ಶರೀರಾಭಿಮಾನಪುರಸ್ಸರವಾಗಿ ಸುಖ ದುಃಖಾದಿಗಳನ್ನು ಅನುಭವಿಸುವ ಪರಶಿವಾಂಶವೇ ಜೀವವು ಮಾಯೆಯು ಪರಶಿವ ನನ್ನು ಎಳೆಯಲಾರದು ಅದರಿಂದಲೇ ಪರಬ್ರಹ್ಮವಸ್ತುವಿಗೆ ಸುಖದುಃಖಾದಿಗಳಿಲ್ಲ ಕರ್ಮವೇ ಅಲ್ಲಿ ತೋರದಿರುವುದರಿಂದ ದುಃಖಾದಿಗಳ ಪ್ರಸಕ್ತಿಯೇ ಅಲ್ಲಿರಲಾರದು ಅವೆಲ್ಲವೂ ಜೀವಕ್ಕೇ ಸಂಬಂಧಿಸುವುದು (ತದುಪಾಧಿಭೂತವಾದ) ಅಹಂಕಾರದಲ್ಲಿ ಕಾಮಕ್ರೋಧಾಧಿ ಅರಿಷಡ್ವರ್ಗಗಳ ಸಂಬಂಧವಿರುವುದು ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಇವೇ ಅರಿಷಡ್ವರ್ಗಗಳು ಇವೆಲ್ಲವೂ ಅಹಂಕಾರಗತವಾದ ಧರ್ಮಗಳು

೩೭-೩೮ ಪರಶಿವನಲ್ಲಿಯೂ ಅಹಂಕಾರವಿದೆ ಆದರೆ ಅದು ಶುದ್ಧ ಸತ್ವ ಪ್ರಧಾನಮಾಯಾಪರಿಣತಿರೂಪವಾದದ್ದು. ಅದನ್ನೇ ಮುಂದೆ ಪರಶಿವನು ಶ್ರೀರಾಮ ನನ್ನು ಕುರಿತು, ತನ್ನ ಅಹಂಭಾವವಿಷಯಕವಾಗಿ ಉಪದೇಶಮಾಡುವನು (ಅಥಾ- ಬ್ರುವಮಹಂ ದೇವಾನ್ ಅಹಮೇವ ಪುರಾತನಃ । ಆಸಂ ಪ್ರಥಮಮೇವಾಹಂ ವರ್ತಾಮಿ ಚ ಸುರೇಶ್ವರಾಃ । ವ್ಯತಿರಿಕ್ತಂ ಚ ಮತ್ತೋऽಸ್ತಿ ನಾನ್ಯತ್ ಕಿಂಚಿತ್ಸು ರೇಶ್ವರಾಃ । ನಿತ್ಯೋऽನಿತ್ಯೋऽಹ ಮನಘ ಇತ್ಯಾದಿನಾ) ಹೀಗೆ ಅಹಂಕಾರವು ತನ್ನಲ್ಲಿ ಇದ್ದುದರಿಂದಲೇ ಆಗಾಗ ಸುಖದುಃಖಾದಿಗಳು ಒದಗಿದುವು ಎಂದು ಪರಶಿವನೇ ಹೇಳು

**ಸುಷುಪ್ತೌ ತದಭಾವಾಚ್ಚ ಜೀವಶ್ಶಂಕರತಾಂ ಗತಃ ।**
**ಸ ಏವ ಮಾಯಯಾ ಸ್ಪೃಷ್ಟಃ ಕಾರಣಂ ಸುಖದುಃಖಯೋಃ ॥ ೩೮ ॥**

**ಶುಕ್ತೌ ರಜತವದ್ವಿಶ್ವಂ ಮಾಯಯಾ ದೃಶ್ಯತೇ ಶಿವೇ ।**
**ತತೋ ವಿವೇಕಜ್ಞಾನೇನ ನ ಕೋಽಪ್ಯತ್ರಾಸ್ತಿ ದುಃಖಭಾಕ್ ॥ ೩೯ ॥**

---

ವನು ಆದರೆ ಮಲಿನಸತ್ವಪ್ರಧಾನವಾದ ಅವಿದ್ಯಾಕಾರ್ಯವೆನಿಸಿದ ಅಂತಃಕರಣಾವಸ್ಥಾ ವಿಶೇಷದಿಂದ ಕೂಡಿರುವ ಜೀವನಿಗೆ ಮಾತ್ರ ಸುಖದುಃಖಾದ್ಯನುಭವಗಳು ನಿತ್ಯವಾಗಿಯೇ ಇರುವುವು ಆದರೆ ಜೀವನು ಸ್ವಪ್ನಾವಸ್ಥೆಯಲ್ಲಿ ಮತ್ತು ಜಾಗ್ರದವಸ್ಥೆಯಲ್ಲಿ ಅಹಂಕಾರಾವಚ್ಛಿನ್ನನಾಗಿ ಸುಖದುಃಖಾದಿಗಳನ್ನು ಅನುಭವಿಸುವನು ಸುಷುಪ್ತ್ಯವಸ್ಥೆಯಲ್ಲಿ ಮಾತ್ರ ಆ ಸುಖದುಃಖವು ಅಜ್ಞಾನದಿಂದಾವೃತವಾಗಿರುತ್ತದೆ ದುಃಖಾನುಭವವಿರುವುದಿಲ್ಲ ಏಕೆಂದರೆ ಸುಷುಪ್ತ್ಯವಸ್ಥೆಯಲ್ಲಿ ಅಹಂಕಾರವಿರುವುದಿಲ್ಲ (ಅಥವಾ ಅಹಂಕಾರವು ಆಗ ಸೂಕ್ಷ್ಮರೂಪದಿಂದಿರುವುದು) ಅಹಂಕಾರವು ಸರ್ವಥಾ ನಾಶವಾದರೆ ಜೀವನು ಬ್ರಹ್ಮನೇ ಆಗಿಬಿಡುವನು ಸುಷುಪ್ತ್ಯವಸ್ಥೆಯಲ್ಲಿ ಜೀವನಿಗೆ ದುಃಖವೇ ಇರುವುದಿಲ್ಲ, ಸುಖಾನುಭವವು ಮಾತ್ರ ಇರುತ್ತದೆ ಆದ್ದರಿಂದಲೇ ಜೀವನು ಸುಷುಪ್ತ್ಯವಸ್ಥೆಯಲ್ಲಿ ಶಂಕರಸಾಮ್ಯವನ್ನು ಪಡೆಯುವನು ಜಾಗ್ರದವಸ್ಥೆಯಲ್ಲಿ ಜೀವನಿಗೆ ಇಂದ್ರಿಯಗಳಿಂದ ವಿಷಯೋಪಲಬ್ಧಿಯುಂಟಾಗುತ್ತದೆ ಜಾಗ್ರದವಸ್ಥೆಯಲ್ಲಿ ಉಂಟಾದ ಸಂಸ್ಕಾರ ವಿಶೇಷದಿಂದ ಸ್ವಪ್ನಾವಸ್ಥೆಯು ತೋರುವುದು ಸುಷುಪ್ತಿಯಲ್ಲಿ ಮಾತ್ರ ಯಾವ ವಿಷಯಕವಾದ ಜ್ಞಾನವೂ ಇರುವುದಿಲ್ಲ ಕೇವಲ ಆನಂದಮಯತೆಯೇ ಅಲ್ಲಿ ಕಾಣುವುದು

೩೯–೪೦ ಜೀವನು ಈರೀತಿ ಮಾಯಾವಶನಾಗಿ ಸುಖದುಃಖಾದಿಗಳಿಗೆ ಪಾತ್ರನಾಗಿ ಕಾಣುವುದೂ ಅವಿದ್ಯೆಯ ಮಹಿಮೆಯಿಂದ ಈ ಅವಿದ್ಯಾಪ್ರಾಚುರ್ಯವು ಬ್ರಹ್ಮಜ್ಞಾನದಿಂದ ನಾಶವಾಗುವುದು ಇದೇ ರೀತಿ ಅವಿದ್ಯಾಕಾರ್ಯರೂಪವಾದ ಅಂತಃಕರಣಾದಿಗಳ ವ್ಯಾಪಾರವೆಲ್ಲವೂ ಕೇವಲ ಕಾಲ್ಪನಿಕವೇ ಹೊರತು ವಾಸ್ತವವಾದುದಲ್ಲ ಕಪ್ಪೆಚಿಪ್ಪಿನಲ್ಲಿ ಅಜ್ಞಾನಿಯು ಬೆಳ್ಳಿಯ ಭ್ರಾಂತಿಯನ್ನು ಹೊಂದಿ, ನಿಜವಾ

ತತೋ ವಿರಮ ದುಃಖಾತ್ತ್ವಂ ಕಿಂ ಮುಧಾ ಪರಿತಪ್ಯಸೇ ।
॥ ಶ್ರೀರಾಮ ಉವಾಚ ॥
ಮುನೇ ಸರ್ವಮಿದಂ ಸತ್ಯಂ ಯನ್ಮಮಾಗ್ರೇ ತ್ವಯೇರಿತಂ ॥ ೪೮ ॥

ತಥಾಪಿ ನ ಜಹಾತ್ಯೇತತ್ಪ್ರಾರಬ್ಧಾದೃಷ್ಟಮುಲ್ಬಣಂ ।
ಮತ್ತಂ ಕುರ್ಯಾದ್ಯಥಾ ಮದ್ಯಂ ನಷ್ಟಾವಿದ್ಯಮಪಿ ದ್ವಿಜಂ ॥ ೪೯ ॥

ತದ್ವತ್ಪ್ರಾರಬ್ಧಭೋಗೋಽಪಿ ನ ಜಹಾತಿ ವಿವೇಕಿನಂ ।
ತತಃ ಕಿಂ ಬಹುನೋಕ್ತೇನ ಪ್ರಾರಬ್ಧಸಚಿವಸ್ಸ್ಮರಃ ॥ ೫೦ ॥

---

ಗಿಯೂ ಅದು ಬೆಳ್ಳಿಯಲ್ಲವೆಂದು ತಿಳಿಯುವವರೆಗೂ ಸಂತೋಷಪಡುವಂತೆ. ಅಜ್ಞಾನಿಯಾದ ಮಾನವನು ಸಚ್ಚಿದಾನಂದಾಖಂಡೈಕ ಪರಿಪೂರ್ಣಸ್ವರೂಪನಾದ ಪರಶಿವನಲ್ಲಿ ಅವಿದ್ಯಾಕಾರ್ಯಾಂತಃಕರಣಾದಿಗಳಿಂದ ಪ್ರಪಂಚದ ಭ್ರಾಂತಿಯನ್ನು ಪಡೆಯುವನು ಈ ಭ್ರಾಂತಿಯು ನಿವೃತ್ತಿಯಾಗಬೇಕಾದರೆ ವಿವೇಕಜ್ಞಾನವುದಯಿಸಬೇಕು ಬ್ರಹ್ಮಸತ್ಯ, ಜಗತ್ತುಮಿಥ್ಯಾ । ಎಂಬ ಪಾರಮಾರ್ಥಿಕಜ್ಞಾನವು, ಯಾವಾಗ ಜೀವನಿಗೆ ಶುದ್ಧರೂಪದಿಂದ ಆವಿರ್ಭವಿಸುವುದೋ, ಆಗಲೇ ಸಾಂಸಾರಿಕವಾದ ಸಕಲದುಃಖಗಳೂ ನಿವೃತ್ತಿಯಾಗುವುವು ಆದ್ದರಿಂದ ಎಲೈ ಶ್ರೀರಾಮನೇ, ವ್ಯರ್ಥವಾಗಿ ದುಃಖಪಡಬೇಡ ಶರೀರ, ಆತ್ಮ ಇವುಗಳ ಸ್ವರೂಪವನ್ನು ಅನುಸಂಧಾನಮಾಡಿ ದುಃಖದಿಂದ ದೂರನಾಗು" ಎಂದು ಅಗಸ್ತ್ಯಮಹರ್ಷಿಗಳು ದುಃಖತ್ಯಾಗಮಾರ್ಗವನ್ನು ಉಪದೆ ಶಿಸಿದರು

೪೮-೪೯-೫೦ ಅಗಸ್ತ್ಯಮಹರ್ಷಿಯ ದಿವ್ಯವಾಣಿಯನ್ನು ಸಾವಧಾನದಿಂದ ಕೇಳಿದ ಶ್ರೀರಾಮನು ಸ್ವಲ್ಪಮಟ್ಟಿಗೆ ಶಾಂತಮನಸ್ಕನಾಗಿ " ಮಹರ್ಷಿಯೇ, ನಾನು ತಮ್ಮಿಂದ ಉಕ್ತವಾದ ಜಗನ್ಮಿಥ್ಯಾತ್ವರೂಪವಾದ ವಿಷಯವನ್ನೆಲ್ಲಾ ತಿಳಿದುಕೊಂಡೆನು ಇದರಿಂದ ನಾನು ನಿಜವಾಗಿಯೂ ಪತ್ನೀವಿಚಾರವಾಗಿ ದುಃಖಿಸಬಾರದು ಆದರೂ ಅನಾದಿಕಾಲಸಂಚಿತವಾದ ಪಾಪಶೇಷವು ನನ್ನ ಮನಸ್ಸನ್ನು ಮೋಹಕ್ಕೆ ಎಳೆದು ನಾನಾರೀತಿ ದುಃಖಕ್ಕೆ ಈಡುಮಾಡುತ್ತಿರುವುದು ಮಾನವನು

ಬಾಧತೇ ಮಾಂ ದಿವಾರಾತ್ರಮಹಂಕಾರೋಽಪಿ ತಾದೃಶಃ ।
ಅತ್ಯಂತಂ ಪೀಡಿತೋ ಜೀವಃ ಸ್ಥೂಲದೇಹಂ ವಿಮುಂಚತಿ ॥ ೪೩ ॥

ತಸ್ಮಾಜ್ಜೀವಾಪ್ತಯೇ ಮಹ್ಯಮುಪಾಯಃ ಕ್ರಿಯತಾಂ ಮುನೇ ।

ಇತಿ ಶ್ರೀ ಪದ್ಮಪುರಾಣೇ ಶ್ರೀ ಶಿವಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಅಗಸ್ತ್ಯರಾಘವಸಂವಾದೇ ವೈರಾಗ್ಯಯೋಗೋ ನಾಮ
॥ ದ್ವಿತೀಯೋಽಧ್ಯಾಯಃ ॥

---

ಎಷ್ಟೇ ಜ್ಞಾನಿಯಾಗಿದ್ದರೂ, ಶಾಸ್ತ್ರಾಭ್ಯಾಸದಿಂದ ತನ್ನ ಮನಸ್ಸನ್ನು ಎಷ್ಟೇ ಪರಿಪಕ್ವ ಮಾಡಿಕೊಂಡಿದ್ದರೂ, ಪ್ರಾರಬ್ಧಕರ್ಮವಶನಾಗಿ ನಾನಾರೀತಿಯ ದುಃಖಗಳಿಗೆ ಈಡಾಗುವನು. ಮದ್ಯಪಾನವು ಎಂತಹ ಸ್ಥಿರಮನಸ್ಸಿನವನನ್ನಾದರೂ, ಭ್ರಾಂತಚಿತ್ತನನ್ನಾಗಿ ಮಾಡುವಂತೆ, ಪ್ರಾರಬ್ಧಕರ್ಮವು ಜಿತೇಂದ್ರಿಯನನ್ನೂ ಗೋಳಾಡಿಸದೆ ಬಿಡದು ಅದೂ ಅಲ್ಲದೆ ಆರಂಭವಾದ ಕಾರ್ಯವು ಏನಾದರೂ ಫಲವನ್ನು ಕೊಡದೆ ಬಿಡುವುದೇ ? ಅದರಂತೆಯೇ ಪ್ರಾರಬ್ಧವಾದ ಪುಣ್ಯಪಾಪಗಳು ಆಯಾ ಫಲಗಳನ್ನು ಅವರವರಿಗೆ ದೊರಕಿಸದೆ ಬಿಡಲಾರವು ಇದನ್ನು ತಿಳಿದೇ ಆಕಾರರಹಿತನಾದರೂ, ಶಿವನಿಂದ ಸಂಪೂರ್ಣವಾದ ದೇಹವನ್ನೇ ಕಳೆದುಕೊಂಡಿದ್ದರೂ ಮನ್ಮಥನು ಈ ಪ್ರಾರಬ್ಧಕರ್ಮವೆಂಬ ಮಂತ್ರಿಯನ್ನಿಟ್ಟುಕೊಂಡು, ಜೀವಲೋಕವನ್ನೇ ತೊಳಲಿಸಿ ಬಳಲಿಸುತ್ತಿರುವನು ಆತ್ಮನು ನಿರ್ಲೇಪನು ನಿಜ ನೀನು ಹೇಳಿದಂತೆಯೇ, ಪ್ರಬಲವಾದ ಪ್ರಾರಬ್ಧ ಕರ್ಮದಿಂದ ಸೀತಾವಿಯೋಗದಿಂದ ಹುಟ್ಟಿದ ದುಃಖವು ಅಂತಃಕರಣದಲ್ಲಿ ಆವಿರ್ಭವಿಸಿ, ಆತ್ಮ ಪ್ರತಿಬಿಂಬನಾದ ಜೀವನ ಮೂಲಕ ಪರಮಾತ್ಮನಲ್ಲಿ ದುಃಖ ಪ್ರತೀತಿಯಾಗುತ್ತಿರುವುದು ಹೀಗೆ ಉಂಟಾಗುತ್ತಿರುವ ಪ್ರತೀತಿಯಿಂದ ಬಂದ ದುಃಖನಿವೃತ್ತಿಯು ಈಗ ಆಗಬೇಕಾಗಿದೆ ಸಂಪೂರ್ಣವಾದ ಶುದ್ಧಬ್ರಹ್ಮಜ್ಞಾನವು ನನಗೆ ಈಗಲೇ ಲಭಿಸಲಾರದು "ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ" ಎಂಬ ಅನುಶಾಸನದಂತೆ ಎಂದೋ ಒದಗುವ ಬ್ರಹ್ಮಜ್ಞಾನವು ಸಾಂಸಾರಿಕ

ದುಃಖವನ್ನು ನಿವೃತ್ತಿಗೊಳಿಸಿ ಆತ್ಮಾನಂದವನ್ನುಂಟುಮಾಡೀತು ಅಷ್ಟರಲ್ಲಿ ಜಾತಿ, ಗುಣ, ಕ್ರಿಯೆಗಳಿಂದಲೂ, ಮಮಕಾರಗಳಿಂದಲೂ ವಿಶೇಷವಾಗಿ ಪೀಡಿಸಲ್ಪಟ್ಟಿತ್ತ ಜೀವನು ಈ ಪಾಂಚಭೌತಿಕವಾದ ಸ್ಥೂಲದೇಹವನ್ನು ಬಿಟ್ಟುಬಿಡುವ ಸಂದರ್ಭವಿದೆ. ಅಗಸ್ತ್ಯಮಹರ್ಷಿಯೇ, ಹಾಗೆ ಈ ಸ್ಥೂಲದೇಹವು ನಾಶವಾಗುವುದಾದರೆ ನಾನು ಮತ್ತೆ ಆ ಸೀತೆಯನ್ನೆಲ್ಲಿ ನೋಡುವುದು ? ಆದ್ದರಿಂದ ದಯೆಯಿಟ್ಟು ನನಗೆ ಸುಲಕ್ಷಣವಾಗಿ ಸೀತಾಪ್ರಾಪ್ತಿಯಾಗುವಂತಹ ಉಪಾಯವನ್ನು ಕರುಣಿಸಿ ಸಲಹಬೇಕು." ಎಂದು ಸೀತಾಪತಿಯಾದ ಶ್ರೀರಾಮನು ನಾನಾರೀತಿಯಾಗಿ ಪ್ರಾರ್ಥಿಸತೊಡಗಿದನು.

ಇಲ್ಲಿಗೆ ಶ್ರೀಪದ್ಮಪುರಾಣದ ಶ್ರೀ ಶಿವಗೀತೋಪನಿಷತ್ತಿನಲ್ಲಿ ಬ್ರಹ್ಮವಿದ್ಯಾಪ್ರತಿ
ಪಾದಕವಾದ ಅಗಸ್ತ್ಯ ಮತ್ತು ಶ್ರೀರಾಮ ಸಂವಾದ ರೂಪವಾಗಿ
ವೈರಾಗ್ಯಯೋಗವನ್ನು ತಿಳಿಸುವ ಎರಡನೆಯ
ಅಧ್ಯಾಯವು ಸಮಾಪ್ತವಾದುದು



॥ ಶ್ರೀಃ ॥

# ಶ್ರೀ ಶಿವಗೀತಾ

---

## ॥ ತೃತೀಯೋಽಧ್ಯಾಯಃ ॥

### ॥ ಅಗಸ್ತ್ಯ ಉವಾಚ ॥

ನ ಗೃಹ್ಣಾತಿ ವಚಃ ಪಥ್ಯಂ ಕಾಮಕ್ರೋದಾದಿಪೀಡಿತಃ ।
ಹಿತಂ ನ ರೋಚತೇ ತಸ್ಯ ಮುಮೂರ್ಷೋರಿವ ಭೇಷಜಂ ॥ ೧ ॥

ಮಧ್ಯೇಸಮುದ್ರಂ ಯಾ ನೀತಾ ಸೀತಾ ದೈತ್ಯೇನ ಮಾಯಿನಾ ।
ಆಯಾಸ್ಯತಿ ನರಶ್ರೇಷ್ಠ ಸಾ ಕಥಂ ತವ ಸನ್ನಿಧಿಂ ॥ ೨ ॥

---

### ಮೂರನೆಯ ಅಧ್ಯಾಯ.

ಶ್ರೀರಾಮಚಂದ್ರನಿಗೆ ಆತ್ಮಾನಾತ್ಮಸ್ವರೂಪವನ್ನು ಅಷ್ಟು ವಿಶದವಾಗಿ ತಿಳಿಸಿದರೂ, ಮತ್ತೂ ಸೀತಾಪ್ರಾಪ್ತಿರೂಪವಾದ ಉದ್ಯಮದಲ್ಲಿಯೇ ಉಪಾಯವನ್ನು ಪ್ರಶ್ನಿಸುತ್ತಿರುವುದನ್ನು ಅಗಸ್ತ್ಯಮಹರ್ಷಿಗಳು ಮನಗಂಡು, ಹಾಗೂ ಶ್ರೀರಾಮನ ಮನೋದುಃಖವನ್ನು ಜಿಹಾಸೆಯಿಂದ ಹೋಗಲಾಡಿಸಲು ಪ್ರಯತ್ನಪಟ್ಟು, ಮುಂದೆ ಹೇಳುವಂತೆ ಕಾರ್ಯಸಾಧನೆಗೆ ಇರುವ ಕೆಲವು ಕಷ್ಟಪರಂಪರೆಗಳನ್ನೂ ವಿವರಿಸಲಾರಂಭಿಸಿದರು.

೧-೨ ಕಾಮ, ಕ್ರೋಧಾದಿಗಳಿಂದ ಪೀಡಿತರಾದ ಅಜ್ಞಾನಿಗಳಿಗೆ ಎಂತಹ ಉಪನಿಷದರ್ಥವೂ ರುಚಿಸುವುದಿಲ್ಲ ಮರಣಕಾಲದಲ್ಲಿರುವ ರೋಗಿಗೆ ಯಾವ ಔಷಧವೂ ಹಿಡಿಯುವುದಿಲ್ಲ ಅದರಂತೆ ಅಜ್ಞಾನಿಗಳಿಗೆ ಆತ್ಮಸ್ವರೂಪ ವಚನವು ಅರ್ಥವಾಗದ ಮಾತು ಮಾನವಶ್ರೇಷ್ಠನಾದ ರಾಮಭದ್ರನೇ, ಮಾಯಾವಿಯಾದ

ದುರ್ಗಂ ಯಸ್ಯಾಸ್ತಿ ಲಂಕಾಖ್ಯಂ ದುರ್ಜಯಂ ದೇವದಾನವೈಃ ।
ಚತುರಂಗಬಲಂ ಯಸ್ಯ ವರ್ತತೇ ಕೋಟಿಸಂಖ್ಯಯಾ ॥ ೭ ॥

ಏಕಾಕಿನಾ ತ್ವಯಾ ಜ್ಞೇಯಃ ಸ ಕಥಂ ನೃಪನಂದನ ।
ಆಕಾಂಕ್ಷತೇ ಕರೇ ಧರ್ತುಂ ಬಾಲಶ್ಚಂದ್ರಮಸಂ ಯಥಾ ॥ ೮ ॥

ತಥಾ ತ್ವಂ ಕಾಮಮೋಹೇನ ಜಯಂ ತಸ್ಯಾಭಿವಾಂಛಸಿ ।

॥ ಶ್ರೀರಾಮ ಉವಾಚ ॥

ಕ್ಷತ್ರಿಯೋಽಹಂ ಮುನಿಶ್ರೇಷ್ಠ ಭಾರ್ಯಾ ಮೇ ರಕ್ಷಸಾ ಹೃತಾ ॥ ೯ ॥

---

ನಾಗಿರುವನು ದೇವತೆಗಳ ತಂಡವನ್ನೆಲ್ಲಾ ಹಿಂಡಿ ಚೂರ್ಣಮಾಡಿದ ಕುಂಭಕರ್ಣನು ಅವನಿಗೆ ತಮ್ಮನಾಗಿರುವನು ಮತ್ತೊಬ್ಬ ತಮ್ಮನಾದ ವಿಭೀಷಣನಾದರೋ ನಾನಾವಿಧವಾದ ದಿವ್ಯಾಸ್ತ್ರಗಳನ್ನು ಹೊಂದಿ ಮರಣವೇ ಇಲ್ಲದೆ ಚಿರಂಜೀವಿಯೆನಿಸಿ ಅಣ್ಣನಿಗೆ ಸಹಾಯಕನಾಗಿರುವನು

೭–೮ ಈ ಜನಬಲವಿರಲಿ, ಇನ್ನು ಅವನಿಗಿರುವ ಪ್ರಾಕೃತಿಕ ಬಲವನ್ನು ಹೇಳುವೆನು, ಕೇಳು ಸಮುದ್ರಮಧ್ಯದಲ್ಲಿರುವ ಲಂಕಾನಗರಿ ಅವನ ರಾಜಧಾನಿ ಅದಕ್ಕಿರುವ ಕೋಟೆಯು ದೇವದಾನವರಿಗೆ ಅಭೇದ್ಯವಾಗಿರುವುದು ಗಜ, ಅಶ್ವ, ರಥ, ಪದಾತಿ, ಈ ಚತುರಂಗ ಸೈನ್ಯವೂ ಕೋಟ್ಯಂತರ ಸಂಖ್ಯೆಯಲ್ಲಿ ಅಲ್ಲಿ ನೆಲಸಿರುವುವು ಶ್ರೀರಾಮಚಂದ್ರನೇ, ಈಗ ನೀನಾದರೋ ಏಕಾಕಿಯಾಗಿರುವೆ ಯಾವ ವಿಧವಾದ ಸೈನ್ಯದಸಹಾಯವೂ ನಿನಗೆ ಮುಂದೆ ದೊರೆಯುವಂತಿಲ್ಲ ಹೀಗಿರುವಲ್ಲಿ, ಎಳೆಯ ಹುಡುಗನು ಅಂತರಿಕ್ಷದಲ್ಲಿರುವ ಚಂದ್ರನನ್ನು ಹಿಡಿಯಲು ತವಕಪಡುವಂತೆ ನೀನು ಮಹಾ ಪ್ರಬಲಪರಾಕ್ರಮಿಯಾದ ರಾವಣನನ್ನು ಸೋಲಿಸಲು ಆಸೆಪಡುತ್ತಿರುವುದು ಹಾಸ್ಯಾಸ್ಪದವಾದೀತು, ಸೀತಾವಿಷಯಕವಾದ ಮೋಹದಿಂದ ನಿನಗೆ ಈ ಅಸಾಧ್ಯ ಕಾರ್ಯದಲ್ಲಿ ತೊಡಗುವ ಉತ್ಸಾಹ ಉಂಟಾಗಿದೆ ನಿದಾನವಾಗಿ ಯೋಚಿಸಿ ನೋಡು ಅಸಾಧ್ಯವಾಗಿರುವ ಕಾರ್ಯವನ್ನು ಸಾಧಿಸಲು ಶ್ರಮಪಡುವುದಕ್ಕಿಂತ

**ಯದಿ ತಂ ನ ನಿಹನ್ಮ್ಯಾಶು ಜೀವನೇ ಮೇऽಸ್ತಿ ಕಿಂ ಫಲಂ ।**
**ಅತಸ್ತೇ ತತ್ತ್ವಬೋಧೇನ ನ ಮೇ ಕಿಂಚಿತ್ಪ್ರಯೋಜನಂ ॥ ೧೦ ॥**

**ಕಾಮಕ್ರೋಧಾದಯಸ್ಸರ್ವೇ ದಹಂತ್ಯೇತೇ ತನುಂ ಮಮ ।**
**ಅಹಂಕಾರೋऽಪಿ ಮೇ ನಿತ್ಯಂ ಜೀವನಂ ಹಂತುಮುದ್ಯತಃ ॥ ೧೧ ॥**

**ಹೃತಾಯಾಂ ನಿಜಕಾಂತಾಯಾಂ ಶತ್ರುಣಾವಮತಸ್ಯ ವಾ ।**
**ಯಸ್ಯ ತತ್ತ್ವಬುಭುತ್ಸಾ ಸ್ಯಾತ್ಸ ಲೋಕೇ ಪುರುಷಾಧಮಃ ॥ ೧೨ ॥**

---

ಆ ಕಾರ್ಯದಲ್ಲಿ ಜಿಹಾಸೆಯನ್ನಿಟ್ಟು ವೈರಾಗ್ಯವನ್ನು ತಾಳುವುದು ವಿವೇಕಿಗಳ ಲಕ್ಷಣ ಎಂದು ಅಗಸ್ತ್ಯಮಹಾಮುನಿಯು ರಾಮನಿಗೆ ಯಾವುದಾದರೊಂದು ಮಾರ್ಗದಿಂದ ವೈರಾಗ್ಯವನ್ನುಂಟುಮಾಡುವ ಪ್ರತ್ಯಾಶೆಯಿಂದ ಹೀಗೆ ನುಡಿದನು

ಅಗಸ್ತ್ಯಮಹಾಮುನಿಯ ಈ ಉಪದೇಶಸರಣಿಯು ರಾಮನ ಮನಸ್ಸಿನ ಮೇಲೆ ಏನೂ ಪರಿಣಾಮಕಾರಿಯಾಗಲಿಲ್ಲ ಕೂಡಲೇ ಶ್ರೀರಾಮನು ಪ್ರತ್ಯುತ್ತರವಾಗಿ ಹೀಗೆ ನುಡಿದನು

೯–೧೧. "ಮುನಿಶ್ರೇಷ್ಠನೇ, ನಾನು ಕ್ಷತ್ರಿಯಜಾತಿಯಲ್ಲಿ ಹುಟ್ಟಿದವನು ನನ್ನ ಪತ್ನಿಯು ಈಗ ರಾಕ್ಷಸರಿಂದ ಅಪಹೃತಳಾಗಿದ್ದಾಳೆ. ಅಂತಹ ದ್ರೋಹಿಯನ್ನು ಕೊಲ್ಲುವುದು ಕ್ಷತ್ರಿಯನಾದ ನನ್ನ ಕರ್ತವ್ಯ ಆ ಶತ್ರುವಧರೂಪವಾದ ಕಾರ್ಯದಲ್ಲಿಯೇ ಈಗ ನನ್ನ ಮನಸ್ಸು ಓಡುತ್ತಿರುವುದು ಶತ್ರುವನ್ನು ಕೊಲ್ಲದಿದ್ದ ಮೇಲೆ ನಾನು ಬದುಕಿರುವುದೇ ವ್ಯರ್ಥವಾದೀತು. ಮಹರ್ಷಿಯೇ, ಇಂತಹ ನನಗೆ ನಿನ್ನ ತತ್ತ್ವೋಪದೇಶವು ಯಾವ ಕಾರ್ಯವನ್ನು ಸಾಧಿಸೀತು ? ಕಾಮಕ್ರೋಧಾದಿಗಳು ನನ್ನ ದೇಹವನ್ನೆಲ್ಲಾ ದಹಿಸುತ್ತಿರುವುವು ಅಹಂಕಾರವೇ ನನ್ನ ನಿತ್ಯ ಜೀವನವಾಗಿದೆ

೧೨–೧೩ ತನ್ನ ಹೆಂಡತಿಯನ್ನು ಶತ್ರುವು ಅಪಹರಿಸಿ, ಶತ್ರುವಿನಿಂದ ನಾನಾರೀತಿಯ ಅಪಮಾನವು ತನಗೆ ದೊರೆತಿರುವಾಗ, ತತ್ತ್ವೋಪದೇಶಕ್ಕೆ ಮನ

ತಸ್ಮಾತ್ತಸ್ಯ ವಧೋಪಾಯಂ ಲಂಘಯಿತ್ವಾಂಬುಧಿಂ ರಣೇ ।
ಬ್ರೂಹಿ ಮೇ ಮುನಿಶಾರ್ದೂಲ ತ್ವತ್ತೋ ನಾನ್ಯೋಽಸ್ತಿ ಮೇ ಗುರುಃ ॥ ೧೩ ॥

॥ ಅಗಸ್ತ್ಯ ಉವಾಚ ॥

ಏವಂ ಚೇಚ್ಛರಣಂ ಯಾಹಿ ಪಾರ್ವತೀಪತಿಮವ್ಯಯಂ ।
ಸ ಚೇತ್ಪ್ರಸನ್ನೋ ಭಗವಾನ್ ವಾಂಛಿತಾರ್ಥಂ ಪ್ರದಾಸ್ಯತಿ ॥ ೧೪ ॥

ದೇವೈರಜೇಯಶ್ಶಕ್ರಾದ್ಯೈರ್ಹರಿಣಾ ಬ್ರಹ್ಮಣಾಪಿ ವಾ ।
ಸ ತೇ ವಧ್ಯಃ ಕಥಂ ವಾ ಸ್ಯಾಚ್ಛಂಕರಾನುಗ್ರಹಂ ವಿನಾ ॥ ೧೫ ॥

---

ಗೊಡುವ ಮಾನವನು ನಿಜವಾಗಿಯೂ ಪುರುಷಾಧಮನೆನಿಸಿಯಾನು! ಮುನಿವರ್ಯನೇ, ನನಗೆ ಈಗ ತತ್ತ್ವೋಪದೇಶವು ಬೇಡ. ಸಮುದ್ರವನ್ನು ದಾಟಿಹೋಗಿ, ರಾವಣನನ್ನು ಕೊಲ್ಲುವ ಉದ್ಯಮದಲ್ಲಿ ಏನಾದರೂ ಉಪಾಯವಿದ್ದರೆ ನನಗೆ ಅದನ್ನು ಬೋಧಿಸುವವನಾಗು. ಗುರುವರ್ಯನೇ, ನೀನೇ ನನಗೆ ಪರಮಗುರುವು. ನಿನಗಿಂತ ಹಿತೈಷಿಯೂ, ಜ್ಞಾನಪ್ರದನೂ ಆದವರು ನನಗೆ ಮತ್ತಾರಿರುವರು?" ಎಂದು ಮತ್ತೆ ಪ್ರಾರ್ಥಿಸಿದನು.

೧೪–೧೭. ಆಗ ಮುನಿಯು "ರಾಘವನೇ, ಹಾಗಾದರೆ ಈಗ ನಿನಗೆ ವಿಜಯಪ್ರದವಾದ ಒಂದುಪಾಯವನ್ನು ಹೇಳುವೆನು ಕೇಳು. ನೀನು ಯಾರನ್ನೂ ಆಶ್ರಯಿಸದೆ ನಾಶರಹಿತನೂ, ಪಾರ್ವತೀಪತಿಯೂ ಆದ ಪರಶಿವನನ್ನು ಮೊರೆ ಹೊಗು. ಅವನನ್ನು ವ್ರತಾದಿಗಳಿಂದ ತೃಪ್ತಿಪಡಿಸು. ಪ್ರಸನ್ನನಾದ ಶಂಕರನು ಭಕ್ತರ ಇಷ್ಟಾರ್ಥಗಳನ್ನೆಲ್ಲಾ ಅನಾಯಾಸವಾಗಿ ನೆರವೇರಿಸುವನು. ಬ್ರಹ್ಮ, ವಿಷ್ಣು, ಇಂದ್ರ ಇವರೇ ಮೊದಲಾದ ಯಾವ ದೇವತೆಗಳಿಂದಲೂ ಜಯಿಸಲಸಾಧ್ಯನಾದ ದುಷ್ಟನಾದ ರಾವಣನನ್ನು ಶಂಕರಾನುಗ್ರಹವಿಲ್ಲದೆ ಕೊಲ್ಲಲು ಸಾಧ್ಯವಾದೀತೆ? ಆದಕ್ಕಾಗಿ ಈಶ್ವರಾನುಗ್ರಹವನ್ನು ಮೊದಲು ಸಂಪಾದಿಸಲು ಪ್ರಯತ್ನಪಡು. ಈಶ್ವರಪ್ರೀತಿಕರವಾದ ವಿರಜಾದೀಕ್ಷೆಯನ್ನು ನಿನಗೆ ಉಪದೇಶಿಸುವೆನು. ಆ ಉಪದೇಶ

ಅತಸ್ತ್ವಾಂ ದೀಕ್ಷಯಿಷ್ಯಾಮಿ ವಿರಜಾಗಮಮಾಶ್ರಿತಃ
ತೇನ ಮಾರ್ಗೇಣ ಮರ್ತ್ಯತ್ವಂ ಹಿತ್ವಾ ತೇಜೋಮಯೋ ಭವ || ೧೬ ||

ಯೇನ ಹತ್ವಾ ರಣೇ ಶತ್ರೂನ್ ಸರ್ವಾನ್ಕಾಮಾನವಾಪ್ಸ್ಯಸಿ |
ಭುಕ್ತ್ವಾ ಭೂಮಂಡಲಂ ಚಾಂತೇ ಶಿವಸಾಯುಜ್ಯಮಾಪ್ಸ್ಯಸಿ || ೧೭ ||

|| ಸೂತ ಉವಾಚ ||

ಅಥ ಪ್ರಣಮ್ಯ ರಾಮಸ್ತಂ ದಂಡವನ್ಮುನಿಸತ್ತಮಂ |
ಉವಾಚ ದುಃಖನಿರ್ಮುಕ್ತಃ ಪ್ರಹೃಷ್ಟೇನಾಂತರಾತ್ಮನಾ || ೧೮ ||

|| ಶ್ರೀರಾಮ ಉವಾಚ ||

ಕೃತಾರ್ಥೋಽಹಂ ಮುನೇ ಜಾತೋ ವಾಂಛಿತಾರ್ಥೋ ಮಮಾಗತಃ |
ಪೀತಾಂಬುಧಿಃ ಪ್ರಸನ್ನಸ್ತ್ವಂ ಯದಿ ಮೇ ಕಿಮು ದುರ್ಲಭಂ || ೧೯ ||

---

ದಿಂದ ನೀನು ಮನುಷ್ಯತ್ವವನ್ನು ದೂರಮಾಡಿ ದೇವತ್ವವನ್ನು ಪಡೆಯುವೆ ತೇಜೋಮಯನೆನಿಸುವೆ ಶೈವತೇಜಸ್ಸಿನ ಬಲದಿಂದ ರಣರಂಗದಲ್ಲಿ ಶತ್ರುಗಳ ಗುಂಪನ್ನೇ ನಿರ್ಮೂಲಗೊಳಿಸುವೆ ಭೂಮಂಡಲಾಧಿಪತಿಯಾಗಿ ಈ ಲೋಕದ ಸಕಲಸೌಖ್ಯವನ್ನೂ ಅನುಭವಿಸಿ, ಮುಂದೆ ಶಿವಸಾಯುಜ್ಯವನ್ನು ಪಡೆಯುವೆ ಇಷ್ಟು ಉಪಕಾರವನ್ನು ನಾನು ಮಾಡಬಲ್ಲೆನು " ಎಂದು ಶ್ರೀರಾಮನಿಗೆ ಆಶ್ವಾಸನ ವನ್ನಿತ್ತನು

೧೮–೨೦. ಶ್ರೀರಾಮಚಂದ್ರನಿಗೆ ಅಗಸ್ತ್ಯಮಹರ್ಷಿಗಳ ಈ ಮಾತು ಅತ್ಯಂತ ಹರ್ಷಪ್ರದವಾಯಿತು ಅವನ ಮನಸ್ಸಿನ ಉದ್ವೇಗವು ದೂರವಾಗುತ್ತ ಬಂತು ಸಂತೋಷಭರದಿಂದ ಕೂಡಲೇ ಅಗಸ್ತ್ಯಮುನಿಗೆ ದಂಡಪ್ರಣಾಮಮಾಡಿದನು ತಾನು ಕೃತಾರ್ಥನಾದೆನೆಂದು ಆನಂದಪಟ್ಟನು ತನ್ನ ಇಷ್ಟಾರ್ಥವೆಲ್ಲಾ ಸಿದ್ಧಿಸಿ ದಂತಾಯಿತೆಂದು ಉಬ್ಬಿಹೋದನು ಅಖಂಡ ಸಮುದ್ರವನ್ನೇ ಏಕಾಪೋಷನ

ಅತಸ್ತ್ವಂ ವಿರಜಾದೀಕ್ಷಾಂ ಬ್ರೂಹಿ ಮೇ ಮುನಿಸತ್ತಮ ।

॥ ಅಗಸ್ತ್ಯ ಉವಾಚ ॥

ಶುಕ್ಲಪಕ್ಷೇ ಚತುರ್ದಶ್ಯಾಮಷ್ಟಮ್ಯಾಂ ವಾ ವಿಶೇಷತಃ ॥ ೨೦ ॥

ಏಕಾದಶ್ಯಾಂ ಸೋಮವಾರೇ ಆದ್ರಾರ್ಯಾಂ ವಾ ಸಮಾರಭೇತ್ ।
ಯಂ ರಾಮಮಾಹುರ್ಯಂ ರುದ್ರಂ ಶಾಶ್ವತಂ ಪರಮೇಶ್ವರಂ ॥ ೨೧ ॥

ಪರಾತ್ಪರತರಂ ಚಾಹುಃ ಪರಾತ್ಪರತರಂ ಶಿವಂ ।
ಬ್ರಹ್ಮಣೋ ಜನಕಂ ವಿಷ್ಣೋರ್ವಹ್ನೇರ್ವಾಯೋಸ್ಸದಾಶಿವಂ ॥ ೨೨ ॥

---

ವನ್ನಾಗಿ ಮಾಡಿಕೊಂಡ ಮಹಾಮಹಿಮನಾದ ಅಗಸ್ತ್ಯಋಷಿಯು ಪ್ರಸನ್ನನಾದ ಮೇಲೆ ತನಗೆ ಭಯವೆಲ್ಲಿರುವುದೆಂದು ಹೇಳುತ್ತಾ ಆದಷ್ಟು ಶೀಘ್ರವಾಗಿ ಆ ವಿರಜಾ ದೀಕ್ಷೆಯನ್ನು ಉಪದೇಶಿಸಬೇಕೆಂದು ಪ್ರಾರ್ಥಿಸಲಾರಂಭಿಸಿದನು

೨೧–೨೨ ಶಿವಪ್ರಸಾದಜನಕವಾದ ವಿರಜಾದೀಕ್ಷಾಸ್ವೀಕಾರಕ್ರಮವನ್ನು ಅಗಸ್ತ್ಯಮಹರ್ಷಿಗಳು ಈ ರೀತಿ ಶ್ರೀರಾಮನಿಗೆ ತಿಳಿಯಪಡಿಸಿದರು

ವಿರಜಾದೀಕ್ಷೆಯನ್ನು ಸ್ವೀಕರಿಸಬೇಕಾದರೆ, ಯಾವ ತಿಂಗಳಿನಲ್ಲಾದರೂ ಶುಕ್ಲಪಕ್ಷದ ಚತುರ್ದಶೀ, ಅಷ್ಟಮೀ, ಏಕಾದಶೀ ಈ ತಿಥಿಗಳು ಪ್ರಶಸ್ತವಾದವುಗಳು. ವಾರಗಳಲ್ಲಿ ಸೋಮವಾರವೂ, ನಕ್ಷತ್ರಗಳಲ್ಲಿ ಆದ್ರಾರ್ನಕ್ಷತ್ರವೂ ಉತ್ತಮವೆನಿಸಿದೆ ದೀಕ್ಷಾರಂಭದಲ್ಲಿ ಮಹೇಶ್ವರನನ್ನು ಈ ರೀತಿ ಧ್ಯಾನಿಸಬೇಕು " ಮಹೇಶ್ವರನು ಆಕಾರದಿಂದ ಸುಂದರನಾದವನು ಗುಣಗಳಲ್ಲಿ ಶ್ರೇಷ್ಠನೆನಿಸಿದವನು ಸಂಸಾರ ದುಃಖದಲ್ಲಿ ಮಗ್ನರಾದವರನ್ನು ಉದ್ಧರಿಸುವನು ನಾಶವಿಲ್ಲದವನು ದೇವದೇವನು ಜಗತ್ತನ್ನು ತನ್ನ ಅಧೀನದಲ್ಲಿಟ್ಟುಕೊಂಡಿರುವನು ಬ್ರಹ್ಮಾದಿಗಳಿಂದಲೂ ವಂದಿತ ನಾದವನು ಜಗನ್ಮಂಗಳಕರನು ಬ್ರಹ್ಮ ವಿಷ್ಣು ಅಗ್ನಿ, ವಾಯು ಇವರೆಲ್ಲರಿಗೂ ಜನಕನೆನಿಸಿದವನು ಈ ವಿಷಯವನ್ನೇ " ಸೋಮಃ ಪವತೇ ಜನಿತಾ ಮತೀ ನಾಂ ಜನಿತಾ ದಿವೋ ಜನಿತಾ ಪೃಥಿವ್ಯಾಃ । ಜನಿತಾಗ್ನೇರ್ಜನಿತಾ ಸೂರ್ಯಸ್ಯ ಜನಿ ತೇಂದ್ರಸ್ಯ ಜನಿತೋತ ವಿಷ್ಣೋಃ" ಎಂಬ ಶ್ರುತಿಯು ಸಮರ್ಥಿಸುವುದು

ಧ್ಯಾತ್ವಾಗ್ನಿನಾಽಽವಸಥ್ಯಾಗ್ನಿಂ ವಿಶೋಧ್ಯ ಚ ಪೃಥಕ್ಪೃಥಕ್ ।
ಪಂಚ ಭೂತಾನಿ ಸಂಯಮ್ಯ ದಗ್ಧ್ವಾ ಗುಣವಿಧಿಕ್ರಮಾತ್ ॥ ೨೩ ॥

ಮಾತ್ರಾಃ ಪಂಚ ಚತಸ್ರಶ್ಚ ತ್ರಿಮಾತ್ರಾ ದ್ವಿಸ್ತತಃಪರಂ ।
ಏಕಮಾತ್ರಮಮಾತ್ರಂ ಹಿ ದ್ವಾದಶಾಂತಂ ವ್ಯವಸ್ಥಿತಂ ॥ ೨೪ ॥

---

೨೩—೨೪ ಹೀಗೆ ಪರಶಿವನನ್ನು ಧ್ಯಾನಮಾಡಿ ಭೂತಶುದ್ಧಿಯನ್ನು ಪಡೆಯಬೇಕು ಅದು ಹೇಗೆಂದರೆ —ವಿವೇಕವೆಂಬ ಒಂದು ಅಗ್ನಿಯಿಂದ ದೇಹಸ್ಥವಾದ ಜೀವನವೆಂಬ ಅಗ್ನಿಯನ್ನು ಶುದ್ಧಿಗೊಳಿಸಬೇಕು (ಇಲ್ಲಿ ಆವಸಥವೆಂದರೆ ದೇಹ ಎಂದರ್ಥ ಆವಸಥ್ಯಾಗ್ನಿಯನ್ನೇ ಜೀವನೆಂದು ತಿಳಿಯಬೇಕು) ಜೀವನು ಸ್ಥೂಲವಾದ ಮತ್ತು ಸೂಕ್ಷ್ಮವಾದ ಅನೇಕ ಭೂತಗಳಿಂದ ಆವೃತನಾಗಿರುವನು ಹಾಗೆ ಆವೃತಗಳಾಗಿರುವ ಭೂತಸ್ವರೂಪವನ್ನು ತಿಳಿದು ಅವುಗಳಿಂದ ಜೀವನವನ್ನು ಪ್ರತ್ಯೇಕಿಸಿದಂತೆ ಭಾವಿಸಬೇಕು ಅದಕ್ಕಾಗಿ ಪೃಥಿವೀ, ಅಪ್ಪು, ತೇಜಸ್ಸು, ವಾಯು, ಆಕಾಶ ಇವುಗಳ ಗುಣರೀತಿಗಳನ್ನು ಮನಸ್ಸಿನಲ್ಲಿ ಈರೀತಿ ಚಿಂತಿಸಬೇಕು ತ್ರಿಗುಣವಾದ ಮಾಯಾವಸ್ತುವಿನಿಂದ ಆಕಾಶಾದಿ ಪಂಚಭೂತಗಳ ಹುಟ್ಟುವುವು ಪಂಚೀಕರಣವೆಂಬ ಅವುಗಳ ಮಿಶ್ರಣವು ಆಗದಿರುವವರೆಗೆ ಅವುಗಳಿಗೆ ತನ್ಮಾತ್ರಗಳೆಂದು ಹೆಸರು ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು, ಆಕಾಶಾದಿಯಾಗಿ, ಒಂದು, ಎರಡು, ಮೂರು, ನಾಲ್ಕು, ಐದು ಈ ಕ್ರಮದಿಂದ ಇರುವುವು ಸತ್ತ್ವಗುಣಪ್ರಧಾನವಾದ ಪಂಚಭೂತಗಳಿಂದ ಕ್ರಮವಾಗಿ ಚಕ್ಷುರಾದಿ ಪಂಚಜ್ಞಾನೇಂದ್ರಿಯಗಳೂ, ರಜೋಗುಣಪ್ರಧಾನವಾದ ಪಂಚಭೂತಗಳಿಂದ ಹಸ್ತಾದಿ ಪಂಚ ಕರ್ಮೇಂದ್ರಿಯಗಳೂ, ರಜೋಗುಣಪ್ರಧಾನವಾದ ಪಂಚಭೂತಗಳಿಂದ ಪಂಚೀಕೃತ ಭೂತಗಳೂ ಹುಟ್ಟುವುವು ಪಂಚೀಕರಣವೆಂದರೆ, ಒಂದು ಭೂತದ ಅರ್ಧಭಾಗವೂ, ಇತರ ಭೂತಗಳ ಅಂಶಗಳಿಂದ ಅರ್ಧಭಾಗವೂ ಸೇರಿ ಶುದ್ಧ ಚಿನ್ನ ತಾಮ್ರದೊಡನೆ ಸೇರಿ ಕೆಲಸಕ್ಕೆ ಒರುವಂತೆ ಬ್ರಹ್ಮಾಂಡ ಸೃಷ್ಟಿಗೆ ಸಂಚಭೂತಗಳು ಸಹಾಯಕರಗಳಾಗುವುವು ಅಹಂಕಾರಮಹತ್ತತ್ತ್ವಮಾಯೆಯೆಂಬುದು ಅಮಾತ್ರವೆನಿಸುವುದು ಅದಕ್ಕೆ ರೂಪಾದಿ ತನ್ಮಾತ್ರಗಳಿರುವುದಿಲ್ಲ ಹೀಗೆ ಐದು ತನ್ಮಾತ್ರರೂಪಗಳಾದ

ಸ್ಥಿತ್ಯಾಂ ಸ್ಥಾಪ್ಯಾವ್ಯತೋ ಭೂತ್ವಾ ವ್ರತಂ ಪಾಶುಪತಂ ಚರೇತ್ ।
ಇದಂ ವ್ರತಂ ಪಾಶುಪತಂ ಕರಿಷ್ಯಾಮಿ ಸಮಾಹಿತಃ ॥ ೨೫ ॥

ಪ್ರಾತರೇವಂ ತು ಸಂಕಲ್ಪ್ಯ ನಿಧಾಯಾಗ್ನಿಂ ಸ್ವಶಾಖಯಾ ।
ಉಪೋಷಿತಶ್ಶುಚಿಸ್ಸ್ನಾತಃ ಶುಕ್ಲಾಂಬರಧರಸ್ಸ್ವಯಂ ॥ ೨೬ ॥

ಶುಕ್ಲಯಜ್ಞೋಪವೀತಶ್ಚ ಶುಕ್ಲಮಾಲ್ಯಾನುಲೇಪನಃ ।
ಜುಹುಯಾದ್ವಿರಜಾಮಂತ್ರೈಃ ಪ್ರಾಣಾಪಾನಾದಿಭಿಸ್ತಥಾ ॥ ೨೭ ॥

---

ಶಬ್ದ, ಸ್ಪರ್ಶ ರೂಪ, ರಸ, ಗಂಧಗಳೂ, ಹಾಗೆಯೇ ಪೃಥಿವ್ಯಪ್ತೇಜೋ ವಾಯ್ವಾಕಾಶಗಳೆಂಬ ಪಂಚಭೂತಗಳೂ, ಅಹಂಕಾರ ಮಹತ್ತತ್ತ್ವಮಾಯೆಯೆಂಬ ಆಮಾತ್ರವೆನಿಸಿದ ಒಂದು ತತ್ತ್ವ, ಇವೆಲ್ಲಕ್ಕೂ ಆಧಾರವಾದ ಪರಮಾತ್ಮ, ಈ ಹನ್ನೆರಡು ವಸ್ತುಗಳು ಪ್ರಲಯಪರ್ಯಂತ ಇರತಕ್ಕವುಗಳೆಂಬ ಮುಖ್ಯತತ್ತ್ವವನ್ನು ಮನಸಾ ಅನುಸಂಧಾನಮಾಡಬೇಕು ಹೀಗೆ ಪಂಚಭೂತಗಳ ಸೃಷ್ಟಿಯಿಂದ ಹಿಡಿದು ಪಂಚೀಕರಣ ದ್ವಾರಾ ದೇಹೋತ್ಪತ್ತಿಪರ್ಯಂತವಾದ ಮುಖ್ಯತತ್ತ್ವವನ್ನೆಲ್ಲಾ ಅರಿತು, ಆದರಿಂದ ತಾನು ದಿವ್ಯದೇಹಧಾರಿಯೆಂದೆನಿಸಿ ಪಶುಪತಿಪ್ರೀತಿಜನಕವಾದ ಪಾಶುಪತ ವ್ರತವನ್ನು ಆರಂಭಿಸಬೇಕು

೨೫–೨೭ ಈ ರೀತಿ ದೀಕ್ಷಾಸ್ವೀಕಾರ ಕಾಲದಲ್ಲಿ ಮೂರನೆಯ ದಿನ ಪ್ರಾತಃ ಕಾಲ ಸ್ಥಿರಮನಸ್ಸಿನಿಂದ ಕೂಡಿ, ಪಾಶುಪತವ್ರತ ಮಾಡುತ್ತೇನೆಂದು ಸಂಕಲ್ಪಿಸಿ, ಶುದ್ಧ ಉಪವಾಸದಿಂದ ಶೌಚಾದಿಗಳನ್ನು ನೆರವೇರಿಸಿಕೊಂಡು ವಿಧಿವತ್ತಾಗಿ ಸ್ನಾನ ಮಾಡಬೇಕು ಶುದ್ಧವಾದ ಮಡಿಒಟ್ಟೆಯುಟ್ಟು ಯಜ್ಞೋಪವೀತ, ರುದ್ರಾಕ್ಷ ಮಾಲೆ, ಭಸ್ಮತ್ರಿಪುಂಡ್ರ ಇವುಗಳಿಂದ ಅಲಂಕೃತನಾಗಿ ಸ್ವಶಾಖೋಕ್ತವಿಧಾನದಿಂದ ಅಗ್ನಿ ಪ್ರತಿಷ್ಠೆಮಾಡಬೇಕು ಅದರಲ್ಲಿ ಸಮಿತ್ತು, ಆಜ್ಯ, ಚರು ಈ ದ್ರವ್ಯಗಳಿಂದ "ಪ್ರಾಣಾಪಾನ ವ್ಯಾನೋದಾನ ಸಮಾನಾ ಮೇ ಶುಧ್ಯಂತಾಂ । ಜ್ಯೋತಿರಹಂ ವಿರಜಾ ವಿಪಾಪ್ಮಾ ಭೂಯಾಸಗ್ಂ ಸ್ವಾಹಾ" ಇತ್ಯಾದಿಯಾದ ವಿರಜಾ ಮಂತ್ರಗಳನ್ನುಚ್ಚರಿಸುತ್ತಾ ಅನುವಾಕಾಂತದಲ್ಲಿ ಹೋಮಮಾಡಬೇಕು ಹೋಮಾನಂತರ

ಅನುವಾಕಾಂತಮೇಕಾಗ್ರಃ ಸಮಿದಾಜ್ಯಚರೂನ್ ಪೃಥಕ್ ।
ಆತ್ಮನ್ಯಗ್ನಿಂ ಸಮಾರೋಪ್ಯ ಯಾ ತೇ ಅಗ್ನೇತಿ ಮಂತ್ರತಃ ॥ ೨೮ ॥

ಭಸ್ಮಾದಾಯಾಗ್ನಿರಿತ್ಯಾದ್ಯೈರ್ವಿಮೃಜ್ಯಾಂಗಾನಿ ಸಂಸ್ಪೃಶೇತ್ ।
ಭಸ್ಮಚ್ಛನ್ನೋ ದ್ವಿಜೋ ವಿದ್ವಾನ್ಮಹಾಪಾತಕಸಂಭವೈಃ ॥ ೨೯ ॥

ಪಾಪೈರ್ವಿಮುಚ್ಯತೇ ಸತ್ಯಂ ಮುಚ್ಯತೇ ಚ ನ ಸಂಶಯಃ ।
ಅಗ್ನಿವೀರ್ಯಂ ಯತೋ ಭಸ್ಮ ವೀರ್ಯವಾನ್ ಭಸ್ಮಸಂಯುತಃ ॥ ೩೦ ॥

ಭಸ್ಮಸ್ನಾನರತೋ ವಿಪ್ರೋ ಭಸ್ಮಶಾಯೀ ಜಿತೇಂದ್ರಿಯಃ ।
ಸರ್ವಪಾಪವಿನಿರ್ಮುಕ್ತಃ ಶಿವಸಾಯುಜ್ಯಮಾಪ್ನುಯಾತ್ ॥ ೩೧ ।

---

"ಯಾತೇ ಅಗ್ನೇ ಯಜ್ಞಿಯಾ ತನೂಃ" ಎಂಬ ಮಂತ್ರದಿಂದ ಆತ್ಮನಲ್ಲಿ ಅಗ್ನಿಯನ್ನು ಸಮಾರೋಪಗೊಳಿಸಬೇಕು ಅಂದರೆ ಹೃದಯಾಂತರಾಳಗತನಾಗಿರುವ ಆತ್ಮನೇ ಅಗ್ನಿಸ್ವರೂಪನೆಂಬ ಭಾವವನ್ನಿಡಬೇಕು

೨೯–೩೦ 'ಅಗ್ನಿರಿತಿ ಭಸ್ಮ' ಇತ್ಯಾದಿ ಮಂತ್ರೋಚ್ಚಾರಣಪೂರ್ವಕವಾಗಿ ಹೋಮಶೇಷವಾದ ಭಸ್ಮವನ್ನು ತೆಗೆದುಕೊಂಡು, ಅದನ್ನು ಲಲಾಟವೇ ಮೊದಲಾದ ಅಂಗಗಳಿಗೆ ಸ್ಪರ್ಶಮಾಡಿಕೊಳ್ಳಬೇಕು ಈ ಭಸ್ಮಧಾರಣೆಯನ್ನು ಸರ್ವಕರ್ಮಗಳಲ್ಲಿಯೂ ಮೊದಲು ಮುಖ್ಯವಾಗಿ ನಡೆಸಲೇಬೇಕು ಹೀಗೆ ಭಸ್ಮವನ್ನು ವಿಧಿವತ್ತಾಗಿ ಧರಿಸಿದವನು ಸಮಸ್ತ ಪಾಪರಾಶಿಗಳಿಂದಲೂ ಬಿಡುಗಡೆ ಹೊಂದುವನು ಇದರಲ್ಲಿ ಸಂಶಯವಿಲ್ಲ ಯಾವ ಕರ್ಮವೂ, ಭಸ್ಮಧಾರಣೆಯಿಲ್ಲದೆ ನಡೆಸಲ್ಪಟ್ಟರೆ ಅದು ಅಷ್ಟು ಫಲಕೊಡಲಾರದು "ನ ತದ್ಧ್ಯಾನಂ ನ ತದ್ದಾನಂ ನ ತಜ್ಜ್ಞಾನಂ ಜಪೋ ನ ಸಃ । ತ್ರಿಪುಂಡ್ರೇಣ ವಿನಾ ಯೇನ ವಿಪ್ರೇಣ ಯದನುಷ್ಠಿತಂ" ಇತ್ಯಾದಿಯಾದ ವಾಕ್ಯಗಳು ಭಸ್ಮಧಾರಣೆಯ ಪ್ರಾಶಸ್ತ್ಯವನ್ನು ಬಹಳವಾಗಿ ತಿಳಿಸುವುವು

೩೧–೩೨ ಭಸ್ಮಸ್ನಾನ, ಭಸ್ಮರಾಶಿಯಲ್ಲಿ ಶಯನ, ಇವುಗಳನ್ನು ವಿಧಿವತ್ತಾಗಿ ನೆರವೇರಿಸುತ್ತಾ ಜಿತೇಂದ್ರಿಯನಾಗಿದ್ದು ಶಿವಧ್ಯಾನಾಸಕ್ತನಾದವನು ಸರ್ವಪಾಪವಿನಿರ್ಮುಕ್ತನಾಗಿ ಶಿವಸಾಯುಜ್ಯವನ್ನು ಪಡೆಯುವನೆಂಬುದರಲ್ಲಿ ಸಂಶಯ

ಏವಂ ಕುರು ಮಹಾಭಾಗ ಶಿವನಾಮಸಹಸ್ರಕಂ ।
ಇದಂ ತು ಸಂಪ್ರದಾಸ್ಯಾಮಿ ತೇನ ಸರ್ವಾರ್ಥಮಾಪ್ಸ್ಯಸಿ ॥ ೩೨ ॥

॥ ಸೂತ ಉವಾಚ ॥

ಇತ್ಯುಕ್ತ್ವಾ ಪ್ರದದೌ ತಸ್ಮೈ ಶಿವನಾಮಸಹಸ್ರಕಂ ।
ವೇದಸಾರಾಭಿದಂ ನಿತ್ಯಂ ಶಿವಪ್ರತ್ಯಕ್ಷಕಾರಕಂ ॥ ೩೩ ॥

ಉಕ್ತಂ ಚ ತೇನ ರಾಮ ತ್ವಂ ಜಪ ನಿತ್ಯಂ ದಿವಾನಿಶಂ
ತತಃ ಪ್ರಸನ್ನೋ ಭಗವಾನ್ಮಹಾಪಾಶುಪತಾಸ್ತ್ರಕಂ ॥ ೩೪ ॥

---

ವಿಲ್ಲ ಶ್ರೀರಾಮಚಂದ್ರನೇ, ಆರೀತಿ ಭಸ್ಮಧಾರಣೆ ಮಾಡಿಕೊಂಡು ವೇದಸಾರ ಶಿವಸಹಸ್ರನಾಮ ಸ್ತೋತ್ರವನ್ನು ಭಕ್ತಿಪೂರ್ವಕವಾಗಿ ಪಠಿಸು ಇದೇ ವಿರಜಾದೀಕ್ಷೆ ಮತ್ತು ಪಾಶುಪತವ್ರತ ಈಗ ನಿನಗೆ ವೇದಸಾರ ಶಿವಸಹಸ್ರನಾಮಸ್ತೋತ್ರವನ್ನು ಉಪದೇಶಿಸುವೆನು ಅದರಿಂದ ನಿನಗೆ ಸರ್ವಾರ್ಥವೂ ಸಿದ್ಧಿಸುವುದರಲ್ಲಿ ಸಂಶಯ ವಿಲ್ಲ ಎಂದು ಅಗಸ್ತ್ಯಮಹರ್ಷಿಯು ಸೀತಾಪತಿಯಾದ ಶ್ರೀರಾಮನಿಗೆ ಮುಂದಿನ ಕರ್ತವ್ಯವನ್ನು ಬೋಧಿಸಿದನು

೩೩–೩೪ ಶಿಷ್ಯವಾತ್ಸಲ್ಯದಿಂದ ಅಗಸ್ತ್ಯಮಹಾಮುನಿಯು ಶಿವನನ್ನು ಪ್ರತ್ಯಕ್ಷಗೊಳಿಸಲು ಮುಖ್ಯಸಾಧಕವಾದ ವೇದಸಾರ ಶಿವಸಹಸ್ರನಾಮ ಸ್ತೋತ್ರವನ್ನು ಅರ್ಥಸಹಿತವಾಗಿ ಬೋಧಿಸಿ, ನಿತ್ಯವೂ ಈ ಸ್ತೋತ್ರವನ್ನು ತಪ್ಪದೆ, ಹಗಲು ರಾತ್ರಿ ಎರಡುವೇಳೆಯಲ್ಲಿಯೂ ಪಾರಾಯಣ ಮಾಡುವಂತೆ ಬೋಧಿಸಿದನು ಮತ್ತು ಈ ರೀತಿ ಶಿವಧ್ಯಾನ ಮಾಡುತ್ತಾ, ಪರಮೇಶ್ವರನನ್ನು ತೃಪ್ತಿಪಡಿಸಿದರೆ, ಮಹಾದೇವನು ಪ್ರಸನ್ನನಾಗಿ ಅತ್ಯುಗ್ರವೂ, ಶತ್ರುನಾಶಕವೂ ಆದ ಪಾಶುಪತಾಸ್ತ್ರವನ್ನು ಕರುಣಿಸುವನೆಂದೂ, ಅದರ ಮಹಿಮೆಯಿಂದ ಸಮುದ್ರವನ್ನೇ ಒಣಗಿಸಿ, ಅದನ್ನು ಭೂಮಿಯನ್ನಾಗಿ ಪರಿಣಾಮಗೊಳಿಸಿ ರಾವಣನನ್ನು ಕೊಲ್ಲಲು ಅನುಕೂಲವಾಗುವುದೆಂದೂ ಎಚ್ಚರಿಸಿದನು

ತುಭ್ಯಂ ದಾಸ್ಯತಿ ತೇನ ತ್ವಂ ಶತ್ರೂನ್ ಹತ್ವಾಪ್ಸ್ಯಸಿ ಪ್ರಿಯಾಂ ।
ತಸ್ಯೈವಾಸ್ತ್ರಸ್ಯ ಮಾಹಾತ್ಮ್ಯಾತ್ಸಮುದ್ರಂ ಶೋಷಯಿಷ್ಯಸಿ || ೩೫ ||

ಸಂಹಾರಕಂ ಚ ಜಗತಾಮಸ್ತ್ರಂ ತತ್ಪಾರ್ವತೀಪತೇಃ ।

ತದಲಾಭೇ ದಾನವಾನಾಂ ಜಯಸ್ತವ ಸುದುರ್ಲಭಃ || ೩೬ ||
ತಸ್ಮಾಲ್ಲಬ್ಧುಂ ತದೇವಾಸ್ತ್ರಂ ಶರಣಂ ಯಾಹಿ ಶಂಕರಂ ।

ಇತಿ ಶ್ರೀಪದ್ಮಪುರಾಣೇ ಶ್ರೀಶಿವಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಆಗಸ್ತ್ಯರಾಘವಸಂವಾದೇ ವಿರಜಾದೀಕ್ಷೋಪದೇಶ ಯೋಗೋ ನಾಮ

|| ತೃತೀಯೋಽಧ್ಯಾಯಃ ||

---

೩೫–೩೬ ಅಗಸ್ತ್ಯಮಹರ್ಷಿಯು ಪಾಶುಪತಾಸ್ತ್ರದ ಮಹಿಮೆಯನ್ನು ವಿವರಿಸುತ್ತಾ, ಅದು ಜಗತ್ಸಂಹಾರಕಾರಕವಾದ ಮಹಾಸ್ತ್ರವು ಅಂತಹ ಅಸ್ತ್ರದ ಸಹಾಯವು ನಿನಗ ದೊರೆಯದಿದ್ದರೆ ಶೂರನಾದ ರಾವಣನನ್ನು ಸಂಹರಿಸುವುದು ಅಸಾಧ್ಯವೆಂದು ತಿಳಿಯಪಡಿಸಿ, ಅಂತಹ ಶೈವಶಕ್ತಿಯನ್ನು ಸಂಪಾದಿಸಲು ಶೀಘ್ರವಾಗಿ ಶಂಕರನನ್ನು ಮೊರೆಹೊಗುವುದೇ ಮುಖ್ಯವಾದ ಉಪಾಯವೆಂದು ಹೇಳಿ ಮೌನತಾಳಿದನು.

ಇಲ್ಲಿಗೆ ಪದ್ಮಪುರಾಣದ ಶಿವಗೀತೋಪನಿಷತ್ತಿನಲ್ಲಿ ಅಗಸ್ತ್ಯರಾಘವ ಸಂವಾದ ರೂಪವಾಗಿ ವಿರಜಾದೀಕ್ಷೋಪಯೋಗವೆಂಬ ಮೂರನಯ ಅಧ್ಯಾಯವು ಸಮಾಪ್ತವಾದುದು



|| ಶ್ರೀಃ ||

# ಶ್ರೀ ಶಿವಗೀತಾ

---

## ಅಥ ಚತುರ್ಥೋಽಧ್ಯಾಯಃ

|| ಸೂತ ಉವಾಚ ||

ಏವಮುಕ್ತ್ವಾ ಮುನಿಶ್ರೇಷ್ಠೇ ಗತೇ ತಸ್ಮಿನ್ನಿಜಾಶ್ರಮಂ ।
ಅಥ ರಾಮಗಿರೌ ರಾಮಃ ಪುಣ್ಯೇ ಗೋದಾವರೀತಟೇ || ೧ ||

ಶಿವಲಿಂಗಂ ಪ್ರತಿಷ್ಠಾಪ್ಯ ಕೃತ್ವಾ ದೀಕ್ಷಾಂ ಯಥಾವಿಧಿ ।
ಭೂತಿಭೂಷಿತಸರ್ವಾಂಗೋ ರುದ್ರಾಕ್ಷಾಭರಣೈರ್ಯುತಃ || ೨ ||

ಅಭಿಷಿಚ್ಯ ಜಲೈಃ ಪುಣ್ಯೈರ್ಗೌತಮೀಸಿಂಧುಸಂಭವೈಃ ।
ಅರ್ಚಯಿತ್ವಾ ವನ್ಯಪುಷ್ಪೈಸ್ತದ್ವದ್ವನ್ಯಫಲೈರಪಿ || ೩ ||

---

## ನಾಲ್ಕನೆಯ ಅಧ್ಯಾಯವು

೧–೨ ಅಗಸ್ತ್ಯಮಹರ್ಷಿಯು ಶ್ರೀರಾಮನಿಗೆ ಪಾಶುಪತವ್ರತವಿಧಾನವನ್ನು ತಿಳಿಸಿ ಸಂತೋಷದಿಂದ ತನ್ನ ಆಶ್ರಮಕ್ಕೆ ಹಿಂದಿರುಗಿದನು ಇತ್ತ ಶ್ರೀರಾಮನು ಅದೇ ರಾಮಗಿರಿಯಲ್ಲಿಯೇ ಗೋದಾವರೀ ದಡದಲ್ಲಿ ಒಂದು ಶಿವಲಿಂಗವನ್ನು ಪ್ರತಿಷ್ಠೆ ಮಾಡಿದನು ಅಗಸ್ತ್ಯಪ್ರಣೀತವಾದ ವಿಧಿಯಂತೆ ದೀಕ್ಷಾಬದ್ಧನಾಗಿ, ವಿಭೂತಿ ರುದ್ರಾಕ್ಷಾದಿಗಳಿಂದ ತನ್ನ ದೇಹವನ್ನು ಅಲಂಕರಿಸಿಕೊಂಡು, ವಿಧಿವತ್ತಾಗಿ ಶಿವಪೂಜೆ ಮಾಡಲುಪಕ್ರಮಿಸಿದನು

೩–೪ ಗೋದಾವರೀನದಿಯಿಂದ ಶುದ್ಧೋದಕವನ್ನು ತಂದು ಶಿವಲಿಂಗಕ್ಕೆ ಅಭಿಷೇಕಮಾಡಿದನು ಆ ಕಾಡಿನಲ್ಲಿಯೇ ದೊರೆತ ಹೂವುಗಳಿಂದಲೂ, ಹಣ್ಣುಗಳಿಂದಲೂ ಪರಮೇಶ್ವರನನ್ನು ಆರಾಧಿಸಿದನು ಪೂಜಾನಂತರದಲ್ಲಿ ಶುದ್ಧವಾದ

ಭಸ್ಮಚ್ಛನ್ನೋ ಭಸ್ಮಶಾಯೀ ವ್ಯಾಘ್ರಚರ್ಮಾಸನೇ ಸ್ಥಿತಃ ।
ನಾಮ್ನಾಂ ಸಹಸ್ರಂ ಪ್ರಜಪನ್ನಕ್ತಂದಿವಮನನ್ಯಧೀಃ ॥ ೪ ॥

ಮಾಸಮೇಕಂ ಫಲಾಹಾರೋ ಮಾಸಂ ಪರ್ಣಾಶನಸ್ತಥಾ ।
ಮಾಸಮೇಕಂ ಜಲಾಹಾರೋ ಮಾಸಂ ಚ ಪವನಾಶನಃ ॥ ೫ ॥

ಶಾಂತೋ ದಾಂತಃ ಪ್ರಸನ್ನಾತ್ಮಾ ಧ್ಯಾಯನ್ನೇವಂ ಮಹೇಶ್ವರಂ ।
ಹೃತ್ಪಂಕಜೇ ಸಮಾಸೀನಮುಮಾದೇಹಾರ್ಧಧಾರಿಣಂ ॥ ೬ ॥

ಚತುರ್ಭುಜಂ ತ್ರಿಣಯನಂ ವಿದ್ಯುತ್ಪಿಂಗಜಟಾಧರಂ ।
ಕೋಟಿಸೂರ್ಯಪ್ರತೀಕಾಶಂ ಚಂದ್ರಕೋಟಿಸುಶೀತಲಂ ॥ ೭ ॥

---

ಭಸ್ಮರಾಶಿಯ ಮೇಲೆ ವ್ಯಾಘ್ರಾಜಿನವನ್ನು ಹಾಸಿಕೊಂಡು, ಅದರಲ್ಲಿ ಸ್ಥಿರಮನಸ್ಸಿನಿಂದ ಕುಳಿತು, ಹಗಲೂ ರಾತ್ರಿಯೂ ಅಗಸ್ತ್ಯಮಹಾಮುನಿಗಳು ಹೇಳಿದಂತೆ ವೇದಸಾರ ಶಿವಸಹಸ್ರನಾಮಸ್ತೋತ್ರವನ್ನು ಜಪಿಸುತ್ತಿದ್ದನು.

೫–೬ ಶ್ರೀರಾಮನು ಮೊದಲು ಒಂದು ತಿಂಗಳು ಕೇವಲ ಹಣ್ಣುಗಳನ್ನೇ ತಿಂದು ಶಿವಾರಾಧನೆಗೈದನು ಹಾಗೆಯೇ ಪರ್ಣಾಶನದಿಂದ ಒಂದು ತಿಂಗಳು, ಕೇವಲ ಜಲಾಹಾರದಿಂದ ಮೂರನೆಯ ತಿಂಗಳು, ಅನಿಲಾಹಾರದಿಂದ ಮತ್ತೊಂದು ಮಾಸ, ಹೀಗೆ ನಾಲ್ಕು ತಿಂಗಳು ಕಡುನಿಯಮದಿಂದ ಪಾಶುಪತವ್ರತವನ್ನು ಮುಂದುವರಿಸಿದನು ವ್ರತಾಚರಣೆಯ ಕಾಲದಲ್ಲಿ ಶಾಂತಸ್ವಭಾವದಿಂದ ಇಂದ್ರಿಯ ವ್ಯಾಪಾರಗಳೆಲ್ಲವನ್ನೂ ತಡೆದು ನಿಲ್ಲಿಸಿ, ತದೇಕಚಿತ್ತನಾಗಿ ಮಹೇಶ್ವರನನ್ನೇ ಧ್ಯಾನ ಮಾಡುತ್ತಾ, ತನ್ನ ಹೃದಯಕಮಲದಲ್ಲಿ ಅರ್ಧನಾರೀಶ್ವರನೆನಿಸಿದ ಚಂದ್ರಶೇಖರನ ಮೂರ್ತಿಯನ್ನೇ ನೆಲೆಗೊಳಿಸಿದನು

೭–೮ ಮತ್ತು ಪರಮೇಶ್ವರನ ಸೌಮ್ಯಮೂರ್ತಿಯನ್ನು ಈ ರೀತಿ ಮನಸಾ ಧ್ಯಾನಮಾಡತೊಡಗಿದನು—"ಪರಶಿವನು ನಾಲ್ಕು ಭುಜಗಳಿಂದಲೂ, ಮೂರು ಕಣ್ಣುಗಳಿಂದಲೂ ವಿರಾಜಿಸುವನು. ಅವನ ಜಟಾಕಲಾಪವು ಮಿಂಚಿನಂತೆ ಹೊಳೆ

ಸರ್ವಾಭರಣಸಂಯುಕ್ತಂ ನಾಗಯಜ್ಞೋಪವೀತಿನಂ ।
ವ್ಯಾಘ್ರಚರ್ಮಾಂಬರಧರಂ ವರದಾಭಯಪಾಣಿನಂ ॥ ೮ ॥

ವ್ಯಾಘ್ರಚರ್ಮೋತ್ತರೀಯಂ ಚ ಸುರಾಸುರನಮಸ್ಕೃತಂ ।
ಪಂಚವಕ್ತ್ರಂ ಚಂದ್ರಮೌಳಿಂ ತ್ರಿಶೂಲಡಮರೂಧರಂ ॥ ೯ ॥

ನಿತ್ಯಂ ಚ ಶಾಶ್ವತಂ ಶುದ್ಧಂ ಧ್ರುವಮಕ್ಷರಮವ್ಯಯಂ ।
ಏವಂ ನಿತ್ಯಂ ಪ್ರಜಪತೋ ಗತಂ ಮಾಸಚತುಷ್ಟಯಂ ॥ ೧೦ ॥

---

ಯುವ ಕಾಂತಿಯುಳ್ಳದ್ದು ದೇಹಸೌಂದರ್ಯವು ಕೋಟಿಸೂರ್ಯನಂತೆ ಬೆಳಗುತ್ತಿರುವುದು ಶಂಕರನು ಸರ್ಪವನ್ನೇ ಯಜ್ಞೋಪವೀತವನ್ನಾಗಿ ಮಾಡಿಕೊಂಡಿರುವನು ಬಣ್ಣ ಬಣ್ಣದಿಂದ ಹೊಳೆಯುವ ಹುಲಿಯ ಚರ್ಮವು ಶಂಕರನ ದೇಹವನ್ನು ಅಲಂಕರಿಸುತ್ತಿರುವುದು ವರದ ಮುದ್ರೆಯಿಂದಲೂ, ಅಭಯಮುದ್ರೆಯಿಂದಲೂ ಮಹಾದೇವನು ತನ್ನ ಭಕ್ತರನ್ನುದ್ಧರಿಸುತ್ತಿರುವನು

೯–೧೦ ವ್ಯಾಘ್ರಾಜಿನವೇ ಪಾರ್ವತೀಪತಿಗೆ ಹೊದಿಯುವ ಬಟ್ಟೆಯಾಗಿರುವುದು ದೇವರಾಕ್ಷಸರು ಸುತ್ತಲೂ ನಿಂತು ಪರಮೇಶ್ವರನನ್ನು ಸದಾ ಸ್ತುತಿಸುತ್ತಿರುವರು ಐದು ಮುಖಗಳು, ಮೌಳಿಯಲ್ಲಿ ಚಂದ್ರಕಲೆ, ಕೈಯ್ಯಲ್ಲಿ ತ್ರಿಶೂಲ, ಡಮರುಗ, ಇವು ಶಿವನ ದೇಹಸೌಂದರ್ಯವನ್ನು ಹೆಚ್ಚಿಸುತ್ತಿರುವುವು ಯಾವಾಗಲೂ ಮಹೇಶ್ವರನಿಗೆ ಅಳಿವಿಲ್ಲ ಯಾವ ದೋಷವೂ ಅವನನ್ನು ಸ್ಪರ್ಶಿಸಲಾರದು ಕ್ಷೀಣತೆಯಾಗಲಿ, ನಾಶವಾಗಲಿ ಅವನಲ್ಲಿಲ್ಲ ಶುದ್ಧ ಬುದ್ಧಸ್ವರೂಪನೇ ಅವನು " ಹೀಗೆ ಸರ್ವದಾ ಚಂದ್ರಶೇಖರನ ಗುಣವಿಶಿಷ್ಟವಾದ ಮೂರ್ತಿಸ್ವರೂಪವನ್ನೇ ಅನುಸಂಧಾನಮಾಡುತ್ತಾ ಶ್ರೀರಾಮನು ನಾಲ್ಕು ತಿಂಗಳು ಕಾಲ ಕಳೆದನು

ಅಥ ಜಾತೋ ಮಹಾನ್ನಾದಃ ಪ್ರಳಯಾಂಬುದಭೀಷಣಃ ।
ಸಮುದ್ರಮಥನೋದ್ಭೂತಮಂದರಾವನಿಭೃದ್ಧ್ವನಿಃ ॥ ೧೧ ॥

ರುದ್ರಬಾಣಾಗ್ನಿಸಂದೀಪ್ತಭೃಶತ್ರಿಪುರವಿಭ್ರಮಃ ।
ತಮಾಕರ್ಣ್ಯಾತಿಸಂಭ್ರಾಂತೋ ಯಾವತ್ಪಶ್ಯತಿ ಪುಷ್ಕರಂ ॥ ೧೨ ॥

ತಾವದೇವ ಮಹಾತೇಜೋ ರಾಮಸ್ಯಾಸೀತ್ಪುರೋ ದ್ವಿಜಾಃ ।
ತೇಜಸಾ ತೇನ ಸಂಭ್ರಾಂತೋ ನಾಪಶ್ಯತ್ಸ ದಿಶೋ ದಶ ॥ ೧೩ ॥

ಅಂಧೀಕೃತೇಕ್ಷಣಸ್ತೂರ್ಣಂ ಮೋಹಂ ಯಾತೋ ನೃಪಾತ್ಮಜಃ ।
ವಿಚಿಂತ್ಯ ತರ್ಕಯಾಮಾಸ ದೈತ್ಯಮಾಯಾಂ ದ್ವಿಜೇಶ್ವರಾಃ ॥ ॥ ೧೪ ॥

---

೧೧–೧೨ ಹೀಗಿರಲೊಂದು ದಿನ ಶ್ರೀರಾಮನು ಶಿವಧ್ಯಾನೈಕಚಿತ್ತನಾಗಿ ಶಿವಾರಾಧನೆಯಲ್ಲಿಯೇ ನಿರತನಾಗಿರುವಾಗ ಅಂತರಿಕ್ಷದಿಂದ ಒಂದು ಮಹಾಧ್ವನಿಯು ಕೇಳಬಂದಿತು ಅದು ಪ್ರಳಯಕಾಲದ ಮೇಘಗರ್ಜನೆಯಂತಿತ್ತು ದೇವಾಸುರರು ಮಂದರಪರ್ವತವನ್ನಿಟ್ಟು ಕ್ಷೀರಸಮುದ್ರವನ್ನು ಕಡೆಯುವಾಗ ಉಂಟಾದ ಶಬ್ದವನ್ನು ಅದು ಅನುಕರಿಸುತ್ತಿತ್ತು ತ್ರಿಪುರಾಸುರನನ್ನು ಸುಡುವ ಕಾಲದಲ್ಲಿ ಈಶ್ವರನು ಪ್ರಯೋಗಿಸಿದ ಬಾಣವು ಶಬ್ದಮಾಡಿದಂತೆ, ಭಯಂಕರನಾಗಿ ಮತ್ತು ಆಕಸ್ಮಿಕವಾಗಿ ಒದಗಿಸಿದ ಆ ಧ್ವನಿಯನ್ನು ಕೇಳಿ, ಶ್ರೀರಾಮನು ಸಂಭ್ರಾಂತನಾಗಿ ಅಂತರಿಕ್ಷದ ಕಡೆಗೆ ನೋಡಿದನು

೧೩–೧೪ ಆಗ ಅಂತರಿಕ್ಷದಲ್ಲಿ ದಿವ್ಯವಾದ ತೇಜೋರಾಶಿ ಶ್ರೀರಾಮನ ದೃಷ್ಟಿಗೆ ಗೋಚರವಾಯಿತು ವಾಚಾಮಗೋಚರವಾದ ಆ ತೇಜಸ್ಸು ಸರ್ವತ್ರ ವ್ಯಾಪಿಸಿ ಶ್ರೀರಾಮನ ಕಣ್ಣುಗಳನ್ನು ಕೋರೈಸಿಹೋಗುವಂತೆ ಮಾಡಿತು ಶ್ರೀರಾಮನು ಕ್ಷಣಕಾಲದಲ್ಲಿ ದಿಗ್ಭ್ರಾಂತನಾದನು ಅವನ ಕಣ್ಣುಗಳು ಕುರುಡಾದವು ಅಜ್ಞಾನವು ತೊಲಗಿತು. ಯೋಚನೆಗೆ ಆರಂಭವಾಯಿತು. ಸದಾ ರಾಕ್ಷಸರ ಜಯದಲ್ಲಿಯೇ ಮನಸ್ಸಿಟ್ಟಿದ್ದ ಶ್ರೀರಾಮನಿಗೆ ಆ ರೀತಿ ತೇಜೋರಾಶಿಯುದ್ಭವಿಸಿದುದು ರಾಕ್ಷಸರ ಮಾಯೆಯೋ ಎಂಬ ಶಂಕೆಗೆ ಕಾರಣವಾಯಿತು

ಅಥೋತ್ಥಾಯ ಮಹಾವೀರಃ ಸಜ್ಜಂ ಕೃತ್ವಾ ಧನುಸ್ಸ್ವಕಂ ।
ಅವಿಧ್ಯನ್ನಿಶಿತೈರ್ಬಾಣೈರ್ದಿವ್ಯಾಸ್ತ್ರೈರಭಿಮಂತ್ರಿತೈಃ ॥ ೧೫ ॥

ಆಗ್ನೇಯಂ ವಾರುಣಂ ಸೌಮ್ಯಂ ಮೋಹನಂ ಸೌರಪಾರ್ವತಂ
ರೌದ್ರಂ ಪಾಶುಪತಂ ಬ್ರಾಹ್ಮಂ ಕೌಬೇರಂ ಕುಲಿಶಾನಿಲಂ ॥ ೧೬ ॥

ವಿಷ್ಣುಚಕ್ರಂ ಮಹಾಚಕ್ರಂ ಕಾಲಚಕ್ರಂ ಚ ವೈಷ್ಣವಂ ।
ಭಾರ್ಗವಾದಿಬಹೂನ್ಯಸ್ತ್ರಾಣ್ಯಯಂ ಪ್ರಾಯುಙ್ಕ್ತ ರಾಘವಃ ॥ ೧೭ ॥

ತಸ್ಮಿಂಸ್ತೇಜಸಿ ಶಸ್ತ್ರಾಣಿ ಚಾಸ್ತ್ರಾಣ್ಯಸ್ಯ ಮಹೀಪತೇಃ ।
ವಿಲೀನಾನಿ ಮಹಾಭ್ರಸ್ಯ ಕರಕಾ ಇವ ನೀರಧೌ ॥ ೧೮ ॥

ತತಃ ಕ್ಷಣೇನ ಜಜ್ವಾಲ ಧನುಸ್ತಸ್ಯ ಕರಚ್ಯುತಂ ।
ತೂಣೀರಂ ಚಾಂಗುಳಿತ್ರಾಣಂ ಗೋಧಿಕಾಪಿ ಮಹೀಪತೇಃ ॥ ೧೯ ॥

---

೧೫–೧೭ ಕೊನೆಗೆ ಇದು ರಾಕ್ಷಸರ ಮಾಯೆಯೇ ಎಂದು ನಿಶ್ಚಯ ಮಾಡಿಕೊಂಡನು ಹಿಂದೆ ಮುಂದೆ ವಿಮರ್ಶೆಮಾಡದೆ ಶ್ರೀರಾಮನು ತನ್ನ ಧನುಸ್ಸನ್ನು ಕ್ರೂರಬಾಣಗಳಿಂದ ಸಜ್ಜುಗೊಳಿಸಿ ಮೇಲೆ ಮೇಲೆ ಹೊಡೆಯುವುದಲ್ಲದೆ ಮಂತ್ರಬಲದಿಂದ ಮುಂದುವರಿಯುವ ದಿವ್ಯಾಸ್ತ್ರಗಳನ್ನೂ ಪ್ರಯೋಗಿಸಲಾರಂಭಿಸಿದನು ಆಗ್ನೇಯಾಸ್ತ್ರ, ವರುಣಾಸ್ತ್ರ, ಸೌಮ್ಯಾಸ್ತ್ರ, ಮೋಹನಾಸ್ತ್ರ, ಸೌರಾಸ್ತ್ರ, ಪರ್ವತಾಸ್ತ್ರ, ರುದ್ರಾಸ್ತ್ರ, ಪಾಶುಪತಾಸ್ತ್ರ, ಬ್ರಹ್ಮಾಸ್ತ್ರ ಕುಬೇರಾಸ್ತ್ರ, ಕುಲಿಶ ಮತ್ತು ವಾಯುವಿನ ಅಸ್ತ್ರಗಳು, ವಿಷ್ಣುಚಕ್ರ, ಮಹಾಚಕ್ರ, ಕಾಲಚಕ್ರ, ಪರಶುರಾಮನು ಹಿಂದೆ ತನಗೆ ಕೊಟ್ಟಿದ್ದ ವೈಷ್ಣವಾಸ್ತ್ರ ಇವೆಲ್ಲವನ್ನೂ ಒಂದರ ಮೇಲೊಂದು ಬಿಡದೆ ಪ್ರಯೋಗಿಸಿಬಿಟ್ಟನು

೧೮–೨೦ ರಾಮಪ್ರೇರಿತವಾದ ಶಸ್ತ್ರಾಸ್ತ್ರಸಮೂಹವೆಲ್ಲವೂ ಆ ತೇಜೋರಾಶಿಯಲ್ಲಿ ಲೀನವಾಗಿ ಹೋಯಿತು ಮೇಘಮಂಡಲದಿಂದ ಸಮುದ್ರಕ್ಕೆ ಬಿದ್ದ ಮಂಜಿನ ಗೆಡ್ಡೆಯು ಜಲರಾಶಿಯಲ್ಲಿ ಅಡಗಿಹೋಗಿರುವಂತೆ ಈ ವೈಷ್ಣವಶಕ್ತಿ

ತದ್ದೃಷ್ಟ್ವಾ ಲಕ್ಷ್ಮಣೋ ಭೀತಃ ಪಪಾತ ಭುವಿ ಮೂರ್ಛಿತಃ ।
ಅಥಾಕಿಂಚಿತ್ಕರೋ ರಾಮೋ ಜಾನುಭ್ಯಾಮವನಿಂ ಗತಃ ॥ ೨೦ ॥

ನಿಮೀಲಿತಾಕ್ಷೋ ಭಯಾವಿಷ್ಟಃ ಶಂಕರಂ ಶರಣಂ ಗತಃ ।
ಸ್ವರೇಣಾಪ್ಯುಚ್ಚೈರನ್ನುಚ್ಚೈಃ ಶಂಭೋರ್ನಾಮಸಹಸ್ರಕಂ ॥ ೨೧ ॥

ಶಿವಂ ಚ ದಂಡವದ್ಭೂಮೌ ಪ್ರಣನಾಮ ಪುನಃ ಪುನಃ ।
ಪುನಶ್ಚ ಪೂರ್ವವಚ್ಚಾಸೀಚ್ಛಬ್ದೋ ದಿಙ್ಮಂಡಲಂ ಸ್ವನನ್ ॥ ೨೨ ॥

ಚಚಾಲ ವಸುಧಾ ಘೋರಂ ಪರ್ವತಾಶ್ಚ ಚಕಂಪಿರೇ ।
ಅಥ ಕ್ಷಣೇನ ಶೀತಾಂಶುಶೀತಲಂ ತೇಜ ಆದಧತ್ ॥ ೨೩ ॥

---

ಯೆಲ್ಲಾ ಶಿವತೇಜಸ್ಸಿನಲ್ಲಿ ಅಡಕವಾಗಿ ಹೋಯಿತು ಅದೂ ಅಲ್ಲದೆ ತನ್ನ ಕೈಯ್ಯಲ್ಲಿದ್ದ ಧನುಸ್ಸೂ, ಬೆನ್ನಿನಲ್ಲಿದ್ದ ಬತ್ತಳಿಕೆಯೂ, ಬೆರಳಿನ ದಕ್ಷಣೆಗೆ ಸೇರಿದ್ದ ಕೈಚೀಲವೂ, ಜಾರಿ ಕೆಳಗೆ ಬಿದ್ದು, ಅಗ್ನಿದಗ್ಧವಾದ ವಸ್ತುಗಳಂತೆ ಉರಿಯಲಾರಂಭಿಸಿದುವು ಆದರಿಂದ ರಾಘವನು ಭಯಚಕಿತನಾದನು ಪಕ್ಕದಲ್ಲಿಯೇ ಇದ್ದ ಅನುಜನಾದ ಲಕ್ಷ್ಮಣನು ಹೆದರಿ, ಮೂರ್ಛೆಹೊಂದಿದನು ಆಗ ಶ್ರೀರಾಮನು ಏನೂ ಮಾಡ ಲಾರದೆ ಹೋದನು ಉಪಾಯಾಂತರವನ್ನು ಕಾಣದೆ ದಶರಥಪುತ್ರನು ಮಂಡಿ ಯನ್ನೂರಿ, ಕೈಜೋಡಿಸಿ ಕರುಣಾಳುವಾದ ಶಂಕರನನ್ನೇ ಮೊರೆಹೊಗಲು, ಶಿವ ಸ್ವರೂಪವನ್ನು ಚಿಂತಿಸಲಾರಂಭಿಸಿದನು

೨೧–೨೩ ಕಣ್ಣುಮುಚ್ಚಿಕೊಂಡು, ಇತರ ವಿಷಯಗಳನ್ನೆಲ್ಲಾ ತೊರೆದು, ವೇದಸಾರಶಿವಸಹಸ್ರನಾಮವನ್ನೇ ಗಟ್ಟಿಯಾಗಿ ಉಚ್ಚರಿಸುತ್ತಾ, " ಮಹಾದೇವನೇ, ನೀನೇ ನನಗೆ ರಕ್ಷಕನು, ನಿನ್ನನ್ನೇ ಈಗ ಮೊರೆಹೊಕ್ಕಿರುವೆನು, ನನ್ನನ್ನು ರಕ್ಷಿಸು " ಎಂದು ಹೇಳುತ್ತಾ ದಂಡಪ್ರಣಾಮಮಾಡಿದನು ಮರುಕ್ಷಣದಲ್ಲಿಯೇ ಹಿಂದಿ ನಂತೆಯೇ ಭಯಂಕರವಾದ ಧ್ವನಿಯೊಂದು ಕೇಳಿ ಬಂದಿತು ಆ ಧ್ವನಿಯಿಂದ ದಿಙ್ಮಂಡ ಲವೇ ನಡುಗಿಹೋಯಿತು ಭೂಮಿಯು ಅಲುಗಿತು ಪರ್ವತಗಳು ತೂಗಾಡಿದುವು

ಉನ್ಮೀಲಿತಾಕ್ಷೋ ರಾಮಸ್ತು ಯಾವದೇತತ್ಪ್ರಪಶ್ಯತಿ ।
ತಾವದ್ದದರ್ಶ ವೃಷಭಂ ಸರ್ವಾಲಂಕಾರಸಂಯುತಂ ॥ ೨೪ ॥

ಪೀಯೂಷಮಥನೋದ್ಭೂತನವನೀತಸ್ಯ ಪಿಂಡವತ್ ।
ಶ್ವೇತವರ್ಣಂ ಮರಕತಚ್ಛಾಯಾಶೃಂಗದ್ವಯಾನ್ವಿತಂ ॥ ೨೫ ॥

ನೀಲರತ್ನೇಕ್ಷಣಂ ಹ್ರಸ್ವಕಂಠಕಂಬಳಭೂಷಿತಂ ।
ರತ್ನಪಲ್ಯಾಣಸಂಯುಕ್ತಂ ನಿಬದ್ಧಂ ಶ್ವೇತಚಾಮರೈಃ ॥ ೨೬ ॥

ಘಂಟಿಕಾಘರ್ಘರೀಶಬ್ದೈಃ ಪೂರಯಂತಂ ದಿಶೋ ದಶ ।
ತತ್ರಾಸೀನಂ ಮಹಾದೇವಂ ಶುದ್ಧಸ್ಫಟಿಕವಿಗ್ರಹಂ ॥ ೨೭ ॥

---

ಬೆಂಕಿಯಂತೆ ಎಲ್ಲವನ್ನೂ ಸುಡುತ್ತಿದ್ದ ಆ ಶೈವತೇಜಸ್ಸು ಮರುಕ್ಷಣದಲ್ಲಿಯೇ ಚಂದ್ರಕಿರಣಗಳಂತೆ ಶೀತಲವಾಗಿ ತೋರಿಬಂದುವು

೨೪–೨೭ ಶೀತಸ್ಪರ್ಶದಿಂದ ಆಶ್ಚರ್ಯಗೊಂಡಿದ ಶ್ರೀರಾಮನು ಕಣ್ದೆರೆದು ನೋಡಿದಾಗ ಭವ್ಯವಾದ ಪರಶಿವಮೂರ್ತಿಯು ಪ್ರತ್ಯಕ್ಷನಾಗಿ ಬಂದು ನಿಂತುದು ತಿಳಿಯಿತು ‘ ಎದುರಿನಲ್ಲಿ ಪಾರ್ವತೀಸತಿಯು ವೃಷಭಾರೂಢನಾಗಿ ನಿಂತಿದ್ದಾನೆ ಆ ಜಗದೊಡೆಯನನ್ನು ತನ್ನ ಬೆನ್ನಿನಮೇಲೆ ಕೂರಿಸಿಕೊಂಡಿದ್ದ ವೃಷಭನು ಸರ್ವಾಲಂಕಾರಭೂಷಿತನಾಗಿದ್ದಾನೆ ಕ್ಷೀರಸಮುದ್ರದ ಕಡೆತದಿಂದ ಹುಟ್ಟಿದ ಬೆಣ್ಣೆಮುದ್ದೆಯಂತೆ ವೃಷಭೇಶ್ವರನ ದೇಹವು ಶುಭ್ರವಾಗಿ ಕಂಗೊಳಿಸುತ್ತಿದೆ ಬಸವನ ಕೋಡುಗಳೆರಡು ಮರಕತಮಣಿಯಂತೆ ಹಸುರಾಗಿ ಸುಂದರವಾಗಿವೆ ಕಣ್ಣುಗಳು ಇಂದ್ರನೀಲರತ್ನಗಳಂತೆ ಹೊಳೆಯುತ್ತಿವೆ ಕಂಠವು ಕಿರಿದಾಗಿದ್ದು ರತ್ನಮಯವಾದ ಕತ್ತುಪಟ್ಟಿಯಿಂದ ಪ್ರಕಾಶಿಸುತ್ತಿದೆ ಮಣಿಮಯವಾದ ಪಲ್ಯಾಣವು (ಎತ್ತಿನಮೇಲೆ ಕುಳಿತುಕೊಳ್ಳುವುದಕ್ಕಾಗಿ ಹಾಕುವ ಚರ್ಮದ ಆಸನ) ವೃಷಭನ ಬೆನ್ನನ್ನು ಮುಚ್ಚಿರುವುದು ಎರಡು ಪಕ್ಕಗಳಲ್ಲಿಯೂ ಬಿಳಿಯ ಚಾಮರಗಳು ಚಲಿಸುತ್ತಿರುವುವು ... ಗಂಟೆಯು ‘ಘಣಘಣ’ ಧ್ವನಿಗೈಯುತ್ತಿರುವುದು ಆ ಧ್ವನಿಯ... ತವಿಶ್ರಾಂತ





ಕೋಟಿಸೂರ್ಯಪ್ರತೀಕಾಶಂ ಕೋಟಿಶೀತಾಂಶುಶೀತಲಂ ।
ವ್ಯಾಘ್ರಚರ್ಮಾಂಬರಧರಂ ನಾಗಯಜ್ಞೋಪವೀತಿನಂ ॥ ೨೮ ॥

ಸರ್ವಾಲಂಕಾರಸಂಯುಕ್ತಂ ವಿದ್ಯುತ್ಪಿಂಗಜಟಾಧರಂ ।
ನೀಲಕಂಠಂ ವ್ಯಾಘ್ರಚರ್ಮೋತ್ತರೀಯಂ ಚಂದ್ರಶೇಖರಂ ॥ ೨೯ ॥

ನಾನಾವಿಧಾಯುಧೋದ್ಭಾಸಿದಶಬಾಹುಂ ತ್ರಿಲೋಚನಂ ।
ಯುವಾನಂ ಪುರುಷಶ್ರೇಷ್ಠಂ ಸಚ್ಚಿದಾನಂದವಿಗ್ರಹಂ ॥ ೩೦ ॥

ತತ್ರೈವ ಚ ಸುಖಾಸೀನಾಂ ಪೂರ್ಣಚಂದ್ರನಿಭಾನನಾಂ ।
ನೀಲೇಂದೀವರದಾಮಾಭಾಮುದ್ಯನ್ಮರಕತಪ್ರಭಾಂ ॥ ೩೧ ॥

---

ವಾಗುತ್ತಿರುವುದು  ಇಂತಹ ವೃಷಭಮೂರ್ತಿಯಮೇಲೆ ಶುದ್ಧಸ್ಫಟಿಕದಂತೆ ಶುಭ್ರವಾಗಿ ಹೊಳೆಯುವ ಪಾರ್ವತೀರಮಣನು ಮಂಡಿಸಿದ್ದಾನೆ

೨೮-೩೦ ಕೋಟಿಸೂರ್ಯರಂತೆ ತೇಜಶ್ಶಾಲಿಯಾಗಿದ್ದರೂ ಈಶ್ವರನ ದೇಹವು ಕೋಟಿಚಂದ್ರರಂತೆ ಶೀತಲವಾಗಿರುವುದು ವ್ಯಾಘ್ರಚರ್ಮವು ಮಹಾದೇವನ ಶರೀರವನ್ನು ಪೂರ್ಣವಾಗಿ ಆವರಿಸಿರುವುದು ಸರ್ಪವೇ ಪರಶಿವನ ಯಜ್ಞೋಪವೀತವಾಗಿರುವುದು ಸರ್ವಾಲಂಕಾರಗಳಿಂದ ಮಹಾದೇವನ ಸರ್ವಾವಯವವೂ ಶೋಭಿಸುತ್ತಿರುವುದು ಮಿಂಚಿನಂತೆ ಹೊಳೆಯುವ ಜಟಾಕಲಾಪವೂ, ನೀಲವರ್ಣದ ಕಂಠವೂ, ಚಂದ್ರನಿಂದ ಹೊಳೆಯುವ ಶಿರೋಭಾಗವೂ, ವ್ಯಾಘ್ರಚರ್ಮದ ಉತ್ತರೀಯವೂ ವರ್ಣನೀಯವಾಗಿರುವುವು ಹತ್ತು ಭುಜಗಳಲ್ಲಿಯೂ ಮಹಾ ಭಯಂಕರಗಳಾದ ಹತ್ತು ಆಯುಧಗಳಿರುವುವು ಐದು ಶಿರಸ್ಸುಗಳಲ್ಲಿಯೂ ಮೂರು ಮೂರು ನೇತ್ರಗಳು ವಿರಾಜಿಸುತ್ತಿರುವುವು" ನಿತ್ಯಯುವಕನೆನಿಸಿ, ದೇಹಸೌಷ್ಠವದಿಂದ ಪ್ರಕಾಶಿಸುವ ಸಚ್ಚಿದಾನಂದರೂಪಿಯಾದ ಮಹಾದೇವನು ಹೀಗೆ ಶ್ರೀರಾಮನಿಗೆ ಪ್ರತ್ಯಕ್ಷನಾದನು

೩೧-೩೨ ಪರಮೇಶ್ವರನ ಪಕ್ಕದಲ್ಲಿಯೇ ಜಗನ್ಮಾತೆಯಾದ ಗೌರೀದೇವಿಯು ಕುಳಿತಿರುವಳು ಆ ದೇವಿಯ ಮುಖವು ಪೂರ್ಣಚಂದ್ರನಂತೆ ಪ್ರಕಾಶಮಾನವಾಗಿ

ಮುಕ್ತಾಭರಣಸಂಯುಕ್ತಾಂ ರಾತ್ರಿಂ ತಾರಾಂಚಿತಾಮಿವ ।
ವಿಂಧ್ಯಕ್ಷಿತಿಧರೋತ್ತುಂಗಕುಚಭಾರಭರಾಲಸಾಂ ॥ ೩೨ ॥

ಸಪಸತ್ಸಂಶಯಾವಿಷ್ಟಮಧ್ಯದೇಶಾಂತರಾಂ ವರಾಂ ।
ದಿವ್ಯಾಭರಣಸಂಯುಕ್ತಾಂ ದಿವ್ಯಗಂಧಾನುಲೇಪನಾಂ ॥ ೩೩ ॥

ದಿವ್ಯಮಾಲ್ಯಾಂಬರಧರಾಂ ನೀಲೇಂದೀವರಲೋಚನಾಂ ।
ಅಲಕೋದ್ಭಾಸಿವದನಾಂ ತಾಂಬೂಲಗ್ರಾಸಶೋಭಿತಾಂ ॥ ೩೪ ॥

ಶಿವಾಲಿಂಗನಸಂಜಾತಪುಲಕೋದ್ಭಾಸಿವಿಗ್ರಹಾಂ ।
ಸಚ್ಚಿದಾನಂದರೂಪಾಢ್ಯಾಂ ಜಗನ್ಮಾತರಮಂಬಿಕಾಂ ॥ ೩೫ ॥

---

ರುವುದು. ದೇಹವು ನೀಲೋತ್ಪಲದ ಮಾಲೆಯಂತೆ ಕೋಮಲವಾಗಿರುವುದು. ಪಚ್ಚೆಯ ಕಾಂತಿಯಂತೆ ಮನೋಹರವಾಗಿರುವ ದೇವಿಯ ದೇಹದಲ್ಲಿ ಮುತ್ತಿನ ಆಭರಣಗಳು, ರಾತ್ರಿಯನ್ನು ನಕ್ಷತ್ರಗಳು ಮೆರುಗುಗೊಳಿಸುವಂತೆ ಅಲಂಕರಿಸುತ್ತಿರುವುವು ಲೋಕಮಾತೆಯಾದ ಪಾರ್ವತಿಯ ದಪ್ಪವಾದ ಸ್ತನಗಳು ವಿಂಧ್ಯಪರ್ವತದಂತೆ ಸ್ಥೂಲವಾಗಿರುವುದರಿಂದ, ಅದರ ಭಾರಕ್ಕೆ ನಡುವು ಸ್ವಲ್ಪ ಬಾಗಿರುವುದು. ಅತ್ಯಂತ ಸೂಕ್ಷ್ಮವಾದ ಸೊಂಟದಿಂದ ರಂಜಿಸುತ್ತಾ ಮಹಾದೇವಿಯು ದಿವ್ಯಮಾಲ್ಯಗಳಿಂದಲೂ, ಅಮೂಲ್ಯವಾದ ವಸ್ತ್ರಗಳಿಂದಲೂ ಮನೋಹರಳಾಗಿರುವಳು

೩೪–೩೬ ಪಾರ್ವತಿಯ ಕಣ್ಣುಗಳು ನೀಲೋತ್ಪಲದಂತೆ ಹೊಳೆಯುತ್ತಿರುವುವು ಮುಂಗುರುಳು ಮುಖವನ್ನೂ, ತಾಂಬೂಲರಾಗವು ತುಟಿಯನ್ನೂ ಅಲಂಕರಿಸುತ್ತಿರುವುವು ಪರಶಿವನನ್ನು ಅಪ್ಪಿಕೊಂಡಿರುವುದರಿಂದ ದೇವಿಯ ದೇಹಾದ್ಯಂತವೂ ರೋಮಾಂಚಿತವಾಗಿರುವುದು ಸಚ್ಚಿದಾನಂದ ರೂಪಿಣಿಯೂ, ಲೋಕಮಾತೆಯೂ, ಅಂಬಿಕೆಯೂ, ಸೌಂದರ್ಯಸಾರ ಸರ್ವಸ್ವವೂ ಆಗಿರುವ ಪರಶಿವಶಕ್ತಿಯನ್ನು ಶ್ರೀರಾಮನು ಭಕ್ತಿಯಿಂದ ನೋಡಿದನು. ಪಾರ್ವತೀ ಪರಶಿವರ ಸುತ್ತಲೂ

ಸೌಂದರ್ಯಸಾರಸಂದೋಹಾಂ ದದರ್ಶ ರಘುನಂದನಃ ।
ಸ್ವಸ್ವವಾಹನಸಂಯುಕ್ತಾನ್ ನಾನಾಯುಧಲಸತ್ಕರಾನ್ || ೩೬ ||

ಬೃಹದ್ರಥಂತರಾದೀನಿ ಸಾಮಾನಿ ಪರಿಗಾಯತಃ ।
ಸ್ವಸ್ವಕಾಂತಾಸಮಾಯುಕ್ತಾನ್ ದಿಕ್ಪಾಲಾನ್ ಪರಿತಸ್ಥಿತಾನ್ || ೩೭

ಅಗ್ರಗಂ ಗರುಡಾರೂಢಂ ಶಂಖಚಕ್ರಗದಾಧರಂ ।
ಕಾಲಾಂಬುದಪ್ರತೀಕಾಶಂ ವಿದ್ಯುತ್ಕಾಂತ್ಯಾ ಶ್ರಿಯಾ ಯುತಂ || ೩೮ ||

ಜಪಂತಮೇಕಮನಸಾ ರುದ್ರಾಧ್ಯಾಯಂ ಜನಾರ್ದನಂ ।
ಪಶ್ಚಾಚ್ಚತುರ್ಮುಖಂ ದೇವಂ ಬ್ರಹ್ಮಾಣಂ ಹಂಸವಾಹನಂ || ೩೯ ||

ಚತುರ್ವಕ್ತ್ರೈಶ್ಚತುರ್ವೇದರುದ್ರಸೂಕ್ತೈರ್ಮಹೇಶ್ವರಂ ।
ಸ್ತುವಂತಂ ಭಾರತೀಯುಕ್ತಂ ದೀರ್ಘಕೂರ್ಚಂ ಜಟಾಧರಂ || ೪೦ ||

---

ಅಷ್ಟದಿಕ್ಪಾಲಕರು ಅವರವರ ವಾಹನಗಳನ್ನೇರಿ, ಆಯುಧಪಾಣಿಗಳಾಗಿ ಪರಶಿವ ಧ್ಯಾನದಿಂದ ಅಲ್ಲಿಗೆ ಬಂದಿದ್ದರು

೩೭–೩೮ ಆ ದಿಕ್ಪಾಲಕರು ಬೃಹದ್ರಥಂತರವೇ ಮೊದಲಾದ ಸಾಮವೇದ ಧ್ವನಿಯಿಂದ ಶಂಕರನನ್ನು ಸ್ತುತಿಸುತ್ತಿದ್ದರು ದಿಕ್ಪಾಲಕರ ಪತ್ನಿಯರೂ ಸಹ ತಮ್ಮ ತಮ್ಮ ಪತಿಗಳೊಡಗೂಡಿ ಶಂಕರನ ದರ್ಶನ ಲಾಲಸರಾಗಿ ನಿಂತಿದ್ದರು

೩೯–೪೦ ಮುಂಭಾಗದಲ್ಲಿ ಗರುಡಾರೂಢನಾಗಿ, ನಾರಾಯಣನು ಕೃಷ್ಣ ಮೇಘದಂತೆ ಕಪ್ಪಾದ ದೇಹದಿಂದ ರಂಜಿಸುತ್ತಾ, ಮಿಂಚಿನಂತೆ ಹೊಳೆಯುವ ಲಕ್ಷ್ಮಿ ಯೊಡಗೂಡಿ, ಶಂಖ, ಚಕ್ರ, ಗದೆ ಮುಂತಾದ ಆಯುಧಗಳನ್ನು ಹಿಡಿದು, ಶ್ರೀ ರುದ್ರಾಧ್ಯಾಯವನ್ನೇ ಜಪಿಸುತ್ತಾ ಇದ್ದನು ಹಿಂಭಾಗದಲ್ಲಿ ಚತುರ್ಮುಖಬ್ರಹ್ಮನು, ಪತ್ನಿಯಾದ ವಾಣಿಯೊಡಗೂಡಿ, ಹಂಸಾರೂಢನಾಗಿ, ತನ್ನ ನಾಲ್ಕು ಮುಖ ಗಳಿಂದಲೂ ನಾಲ್ಕು ವೇದಗಳನ್ನೂ, ರುದ್ರಸೂಕ್ತಗಳನ್ನೂ ಉಚ್ಚರಿಸುತ್ತಾ, ನೀಳ ವಾದ ಕೂರ್ಚ(ದಾಡಿ)ವನ್ನೂ, ಉದ್ದವಾದ ಜಟೆಯನ್ನೂ ಹೊಂದಿ ನಿಂತಿದ್ದನು

ಅಥರ್ವಶಿರಸಾ ದೇವಂ ಸ್ತುವಂತಂ ಮುನಿಮಂಡಲಂ ।
ಗಂಗಾದಿತಟಿನೀಯುಕ್ತಮಂಬುಧಿಂ ನೀಲವಿಗ್ರಹಂ ॥ ೪೧ ॥

ಶ್ವೇತಾಶ್ವತರಮಂತ್ರೇಣ ಸ್ತುವಂತಂ ಗಿರಿಜಾಪತಿಂ ।
ಅನಂತಾದಿಮಹಾನಾಗಾನ್ ಕೈಲಾಸಗಿರಿಸಂನಿಭಾನ್ ॥ ೪೨ ॥

ಕೈವಲ್ಯೋಪನಿಷತ್ಪಾರ್ರಾ ಮಣಿರತ್ನವಿಭೂಷಿತಾನ್ ।
ಸುವರ್ಣವೇತ್ರಹಸ್ತಾಢ್ಯಂ ನಂದಿನಂ ಪುರತಸ್ಸ್ಥಿತಂ ॥ ೪೩ ॥

ದಕ್ಷಿಣೇ ಮೂಷಿಕಾರೂಢಂ ಗಣೇಶಂ ಪರ್ವತೋಪಮಂ ।
ಮಯೂರವಾಹನಾರೂಢಮುತ್ತರೇ ಷಣ್ಮುಖಂ ತಥಾ ॥ ೪೪ ॥

ಮಹಾಕಾಳಂ ಚ ಚಂಡೀಶಂ ಪಾರ್ಶ್ವಯೋರ್ಭೀಷಣಾಕೃತೀ ।
ಕಾಲಾಗ್ನಿರುದ್ರಂ ದೂರಸ್ಥಂ ಜ್ವಲದ್ದಾವಾಗ್ನಿಸಂನಿಭಂ ॥ ೪೫ ॥

---

೪೧–೪೨ ಋಷಿಸಮೂಹವು ಅಥರ್ವಶೀರ್ಷೋಪನಿಷತ್ತನ್ನು ಪಾರಾಯಣ ಮಾಡುತ್ತಾ ಪರಶಿವನ ಸುತ್ತಲೂ ನೆರೆದಿದ್ದಿತು ಸಮುದ್ರರಾಜನು ಗಂಗಾ, ಸಿಂಧು ಮುಂತಾದ ದೇವನದಿಗಳೊಡಗೂಡಿ 'ಶ್ವೇತಾಶ್ವತರೋಪನಿಷತ್ಪಠನೆಯಿಂದ ಮಹೇಶ್ವರನನ್ನು ಓಲೈಸುತ್ತಿದ್ದನು ಕೈಲಾಸಗಿರಿಯಂತೆ ದೀರ್ಘಕಾಯರಾದ ಅನಂತನೇ ಮೊದಲಾದ ಮಹಾನಾಗಗಳು ಕೈವಲ್ಯೋಪನಿಷತ್ಪಠನದಿಂದ, ರತ್ನಾಭರಣಾಲಂಕೃತರಾಗಿ ಪರಶಿವನನ್ನು ಭಜಿಸುತ್ತಿದ್ದರು

೪೩–೪೪ ನಂದೀಶ್ವರನು ಎಲ್ಲರಿಗೂ ಮುಂದೆ, ಚಿನ್ನದ ಬೆತ್ತವನ್ನು ಹಿಡಿದು ನಿಂತಿದ್ದನು ಬಲಭಾಗದಲ್ಲಿ ವಿಘ್ನೇಶ್ವರನು ಪರ್ವತ ಸಮಗಾತ್ರನಾಗಿ ಮೂಷಕಾರೂಢನಾಗಿಯೂ, ಎಡಭಾಗದಲ್ಲಿ ಕುಮಾರಸ್ವಾಮಿಯು ಮಯೂರವಾಹನನಾಗಿಯೂ ನಿಂತಿದ್ದರು

೪೫–೪೬ ಮಹಾಕಾಲ ಮತ್ತು ಚಂಡೀಶ್ವರ ಇವರಿಬ್ಬರೂ ಅಕ್ಕಪಕ್ಕಗಳಲ್ಲಿ ಭೀಷಣಾಕಾರದಿಂದ ಶಿವನನ್ನು ಹಿಂಬಾಲಿಸಿದ್ದರು ದೂರದಲ್ಲಿ ಉರಿಯುವ ಜ್ವಾಲೆ

ತ್ರಿಪಾದಂ ಕುಟಿಲಾಕಾರಂ ನಟದ್ಭೃಂಗಿರಿಟಿಂ ಪುನಃ ।
ನಾನಾವಿಕಾರವದನಾನ್ ಕೋಟಿಶಃ ಪ್ರಮಥಾಧಿಪಾನ್ ॥ ೪೬ ॥

ನಾನಾವಾಹನಸಂಯುಕ್ತಂ ಪರಿತೋ ಮಾತೃಮಂಡಲಂ ।
ಪಂಚಾಕ್ಷರೀಜಪಾಸಕ್ತಾನ್ ಸಿದ್ಧವಿದ್ಯಾಧರಾದಿಕಾನ್ ॥ ೪೭ ॥

ದಿವ್ಯರುದ್ರಕಗೀತಾನಿ ಗಾಯತ್ಕಿನ್ನರಬೃಂದಕಂ ।
ತತಸ್ತ್ರ್ಯಯಂಬಕಂ ಮಂತ್ರಂ ಜಪದ್ದ್ವಿಜಕದಂಬಕಂ ॥ ೪೮ ॥

ಗಾಯಂತಂ ವೀಣಯಾ ಗೀತಂ ನೃತ್ಯಂತಂ ನಾರದಂ ದಿವಿ ।
ನೃತ್ಯತೋ ನಾಟ್ಯನೃತ್ತೇನ ರಂಭಾದೀನಪ್ಸರೋಗಣಾನ್ ॥ ೪೯ ॥

ಗಾಯಚ್ಚಿತ್ರರಥಾದೀನಾಂ ಗಂಧರ್ವಾಣಾಂ ಕದಂಬಕಂ ।
ಕಂಬಳಾಶ್ವತರೌ ಶಂಭೋಃ ಕರ್ಣಕುಂಡಲತಾಂ ಗತೌ ॥ ೫೦ ॥

---

ಯಂತೆ ತೋರುತ್ತಿದ್ದ ಕಾಲಾಗ್ನಿ ರುದ್ರನೂ, ಮೂರುಕಾಲುಗಳಿಂದ ಕೂಡಿ ವಿಕಾರ ರೂಪಿಯಾದ ಭೃಂಗಿಯೂ ನಾಟ್ಯವಾಡುತ್ತಿದ್ದರು ಕೋಟಿಸಂಖ್ಯೆಯಲ್ಲಿ ಪ್ರಮಥ ಗಣಗಳು ನಾನಾರೀತಿಯ ಮುಖವುಳ್ಳವರಾಗಿ ಶಂಕರನ ಕಿಂಕರರಾಗಿ ಕೈಗಟ್ಟಿ ನಿಂತಿದ್ದರು

೪೭–೪೮ ಸಪ್ತಮಾತೃಕೆಗಳು ಅವರವರ ವಾಹನವನ್ನೇರಿ ಬಂದಿದ್ದರು ಸಿದ್ಧರೂ, ವಿದ್ಯಾಧರರೂ ಶಿವಪಂಚಾಕ್ಷರೀಮಂತ್ರ ಜಪ ಮಾಡುತ್ತಲೂ, ಕಿನ್ನರರು ರುದ್ರಗೀತೆಗಳನ್ನು ಹಾಡುತ್ತಲೂ, ಬ್ರಾಹ್ಮಣರು ತ್ರ್ಯಂಬಕ ಮಂತ್ರವನ್ನು ಜಪ ಮಾಡುತ್ತಲೂ ಪರಮೇಶ್ವರನನ್ನು ನೇವಿಸುತ್ತಿದ್ದರು

೪೯–೫೦ ನಾರದಮುನಿಯು ಅಂತರಿಕ್ಷದಲ್ಲಿ ನಿಂತು ವೀಣಾವಾದನ ಮಾಡುತ್ತಾ ಶಂಕರನನ್ನು ಕೀರ್ತಿಸುತ್ತಿದ್ದನು ರಂಭೆಯೇ ಮೊದಲಾದ ಅಪ್ಸರ ಸ್ತ್ರೀಯರು ಚಿತ್ರರಥನೇ ಮೊದಲಾದ ಗಂಧರ್ವರೊಡನೆ ಗಾನಮಾಡುತ್ತಾ ನರ್ತಿಸು ತ್ತಿದ್ದರು ಕಂಬಳ, ಅಶ್ವತರಗಳೆಂಬ ಇಬ್ಬರು ನಾಗದೇವತೆಗಳು ಮಹೇಶ್ವರನಿಗೆ ಕರ್ಣಕುಂಡಲಗಳಂತೆ ಆಗಿದ್ದರು

ಗಾಯಂತೌ ಪನ್ನಗೌ ಗೀತಂ ಕಪಾಲಂ ಕುಂಡಲಂ ತಥಾ ।
ಏವಂ ದೇವಸಭಾಂ ದೃಷ್ಟ್ವಾ ಕೃತಾರ್ಥೋ ರಘುನಂದನಃ ॥ ೫೧ ॥

ಹರ್ಷಗದ್ಗದಯಾ ವಾಚಾ ಸ್ತುವನ್ ದೇವಂ ಮಹೇಶ್ವರಂ ।
ದಿವ್ಯನಾಮಸಹಸ್ರೇಣ ಪ್ರಣನಾಮ ಪುನಃ ಪುನಃ ॥ ೫೨ ॥

ಇತಿ ಶ್ರೀಪದ್ಮಪುರಾಣೇ ಶ್ರೀಶಿವಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀ ಶಿವಪ್ರಾದುರ್ಭಾವಯೋಗೋ ನಾಮ
॥ ಚತುರ್ಥೋಽಧ್ಯಾಯಃ ॥

---

೫೧–೫೨ ಹಾಗೆಯೇ ನಾಗದೇವತೆಗಳಿಬ್ಬರೂ ಕಪಾಲ, ಕುಂಡಲ ಇವುಗಳಂತೆ ಆಗಿ ಮಹಾದೇವನ ಸಮೀಪದಲ್ಲಿದ್ದು ಅವನನ್ನು ಭಜಿಸುತ್ತಿದ್ದರು. ಹೀಗೆ ದೇವಸಭೆಯಿಂದ ಪರಿವೃತನಾಗಿ ಮಹೇಶ್ವರನು ಪ್ರತ್ಯಕ್ಷನಾದುದನ್ನು ತಿಳಿದು ಶ್ರೀರಾಮನು ತಾನೇ ಧನ್ಯನೆಂದು ಭಾವಿಸಿಕೊಂಡನು ಭಯಂಕರ ಶಬ್ದಜನ್ಯವಾದ ಅವರ ಭೀತಿಯು ಆಗ ಶಾಂತವಾಯಿತು ಸಂತೋಷಾತಿಶಯದಿಂದ ಕೂಡಿ, ಶ್ರೀರಾಘವನು ಭಕ್ತಿಭಾರದಿಂದ ಅವನತನಾಗಿ ನಾನಾ ರೀತಿಯಿಂದ ಮಹೇಶ್ವರನನ್ನೇ ಸ್ತುತಿಸುತ್ತಾ, ವೇದಸಾರಶಿವಸಹಸ್ರನಾಮಗಳಿಂದ ಅರ್ಚಿಸುತ್ತಾ ಪದೇ ಪದೇ ಪ್ರಣಾಮಮಾಡುತ್ತಾ ಶ್ರೀ ಶಂಕರಾನುಗ್ರಹವನ್ನೇ ನಿರೀಕ್ಷಿಸುತ್ತಿದ್ದನು ತನ್ನ ಉಪಾಸ್ಯದೇವತೆಯು ದೃಗ್ಗೋಚರನಾದುದರಿಂದ ತನ್ನ ಇಷ್ಟಾರ್ಥವು ಸಂಪೂರ್ಣವಾಗಿ ಸಿದ್ಧಿಸುವುದೆಂಬ ಭರವಸೆಯಿಂದ ಆನಂದಭರಿತನಾದನು

ಇಲ್ಲಿಗೆ ಶ್ರೀ ಪದ್ಮಪುರಾಣಾಂತರ್ಗತವಾದ ಶ್ರೀ ಶಿವಗೀತೆಯೆಂಬ ಉಪನಿಷದ್ಭಾಗದಲ್ಲಿ
ಬ್ರಹ್ಮವಿದ್ಯಾವಿಷಯಕವಾದ ಯೋಗಶಾಸ್ತ್ರದಲ್ಲಿ ಶ್ರೀ ಶಿವಪ್ರತ್ಯಕ್ಷವಾದ
ವಿಷಯವನ್ನು ವಿವರಿಸುವ ನಾಲ್ಕನೆಯ ಅಧ್ಯಾಯವು
ಮುಗಿದುದು



॥ ಶ್ರೀಃ ॥

# ಶ್ರೀ ಶಿವಗೀತಾ

---

## ॥ ಅಥ ಪಂಚಮೋಽಧ್ಯಾಯಃ ॥

॥ ಶ್ರೀ ಸೂತ ಉವಾಚ ॥

ಅಥ ಪ್ರಾದುರಭೂತ್ತತ್ರ ಹಿರಣ್ಮಯರಥೋ ಮಹಾನ್ ।
ಅನೇಕದಿವ್ಯರತ್ನಾಂಶುಕಿಂಮಿರಿತದಿಗಂತರಃ ॥ ೧ ॥

ನಡ್ವಪಾಂತಿಕಪಂಕಾಢ್ಯಮಹಾಚಕ್ರಚತುಷ್ಟಯಃ ।
ಮುಕ್ತಾತೋರಣಸಂಯುಕ್ತಶ್ವೇತಚ್ಛತ್ರಶತಾವೃತಃ ॥ ೨ ॥

---

## ಐದನೆಯ ಅಧ್ಯಾಯ.

೧–೨ ವೇದಸಾರಶಿವಸಹಸ್ರನಾಮಸ್ತೋತ್ರದಿಂದ ಪರಮೇಶ್ವರನನ್ನು ಭಜಿಸಿದಮೇಲೆ ಶ್ರೀರಾಮನಿಗಾಗಿ ಮಹೇಶ್ವರಾನುಗ್ರಹದಿಂದ ಒಂದು ಹಿರಣ್ಮಯವಾದ ರಥವು ಸಿದ್ಧವಾಗಿ ಬಂದಿತು ಆ ರಥದಲ್ಲಿ ನಾನಾ ಜಾತಿಯ ಅಮೂಲ್ಯ ರತ್ನಗಳಿದ್ದುದರಿಂದ, ಅವುಗಳ ಬಣ್ಣಬಣ್ಣದ ಕಾಂತಿಯು ಸರ್ವತ್ರ ಹರಡಿ, ದಿಗಂತವೆಲ್ಲಾ ಚಿತ್ರವರ್ಣವುಳ್ಳದ್ದಾಯಿತು ಗೌತಮೀ ತೀರಕ್ಕೆ ಬಂದು ನಿಂತುದರಿಂದ ಆ ರಥದ ನಾಲ್ಕು ದೊಡ್ಡ ಚಕ್ರಗಳು ಅಲ್ಲಿನ ಕೆಸರಿನಿಂದ ಪಂಕಿಲವಾಗಿದ್ದುವು ಮುತ್ತಿನ ತೋರಣಗಳೂ, ಗೊಂಚಲುಗಳೂ, ಶ್ವೇತಚ್ಛತ್ರಿಯ ಸಾಲುಗಳೂ ರಥವನ್ನು ಮತ್ತಷ್ಟು ಅಲಂಕಾರಗೊಳಿಸಿದ್ದುವು

ಶುದ್ಧಹೇಮಖಲೀನಾಢ್ಯತುರಂಗಗಣಸಂಯುತಃ ।
ಮುಕ್ತಾವಿತಾನವಿಲಸದೂರ್ಧ್ವದಿವ್ಯವೃಷಧ್ವಜಃ ॥ ೩ ॥

ಮತ್ತವಾರಣಿಕಾಯುಕ್ತಪಟ್ಟತಲ್ಪೋಪಶೋಭಿತಃ ।
ಪಾರಿಜಾತತರೂದ್ಭೂತಪುಷ್ಪಮಾಲಾಭಿರಂಜಿತಃ ॥ ೪ ॥

ಮೃಗನಾಭಿಸಮುದ್ಭೂತಕಸ್ತೂರೀಮದಪಂಕಿಲಃ ।
ಕರ್ಪೂರಾಗರುಧೂಪೋತ್ಥಗಂಧಾಕೃಷ್ಟಮಧುವ್ರತಃ ॥ ೫ ॥

ಸಂವರ್ತಘನಘೋಷಾಢ್ಯನಾನಾವಾದ್ಯಸಮನ್ವಿತಃ ।
ವೀಣಾವೇಣುಸ್ವನಾಸಕ್ತಕಿನ್ನರೀಗಣಸಂಕುಲಃ ॥ ೬ ॥

---

೩–೪ ಸುವರ್ಣಮಯವಾದ ಕಡಿವಾಣದಿಂದ ಮುಂದುವರಿಯುವ ತುರಗಗಣಗಳು ರಥದ ಮುಂಭಾಗದಲ್ಲಿದ್ದುವು ಮುತ್ತಿನಿಂದ ನಿರ್ಮಿತವಾದ ಮೇಲ್ಕಟ್ಟುಗಳೂ, ವೃಷಭಾಂಕಿತವಾದ ಧ್ವಜವೂ ರಥದ ಮೇಲ್ಭಾಗವನ್ನು ಅಂದಗೊಳಿಸಿದ್ದುವು ರಥದ ಹಿಂಭಾಗದಲ್ಲಿ ಮದ್ದಾನೆಗಳಿದ್ದುವು ರೇಷ್ಮೆಯ ಮೆತ್ತೆಯಿಂದ ಆ ರಥವು ದಿವ್ಯಾಸನವನ್ನು ಹೊಂದಿದ್ದಿತು ದೇವಲೋಕದ ಪಾರಿಜಾತಕುಸುಮಗಳ ಮಾಲೆಗಳಿಂದ ರಥವೆ ಪುಷ್ಪಮಯವಾಗಿದ್ದಿತು

೫–೬ ಕಸ್ತೂರೀಮೃಗದಿಂದ ಉದ್ಭವಿಸಿದ ದಿವ್ಯವಾದ ಕಸ್ತೂರಿಯು ರಥವನ್ನೇ ಸುಗಂಧಮಯವನ್ನಾಗಿ ಮಾಡಿತ್ತು ಕರ್ಪೂರ, ಅಗುರು, ಧೂಪ ಇವೇ ಮೊದಲಾದ ಸುಗಂಧದ್ರವ್ಯಗಳಿಂದ ಹುಟ್ಟಿದ ಸುವಾಸನೆಯು ಮಕರಂದಕ್ಕಾಗಿ ಅಲೆದಾಡುವ ಭ್ರಮರಗಳನ್ನು ಆಕರ್ಷಿಸುತ್ತಿದ್ದಿತು ಪ್ರಳಯಕಾಲದ ಘನಗರ್ಜನೆಯನ್ನು ಅನುಕರಿಸುವ ವಾದ್ಯಘೋಷವು ಆ ರಥದಲ್ಲಿ ಕೇಳುತ್ತಿದ್ದಿತು ಕಿನ್ನರಿಯರು ಗುಂಪುಗುಂಪಾಗಿ ವೀಣೆ, ಕೊಳಲು ಇವೇ ಮುಂತಾದ ಇಂಪಾದ ವಾದ್ಯಧ್ವನಿಗೈಯ್ಯುತ್ತಾ ಅದರಲ್ಲಿ ನೆಲಸಿದ್ದರು

ಏನಂ ದೃಷ್ಟ್ವಾ ರಥಶ್ರೇಷ್ಠಂ ವೃಷಾದುತ್ತೀರ್ಯ ಶಂಕರಃ ।
ಅಂಬಯಾ ಸಹಿತಸ್ತತ್ರ ಪಟ್ಟತಲ್ಪೇಽವಿಶತ್ತದಾ ॥ ೭ ॥

ಸುರನೀರಜನೇತ್ರಾಣಾಂ ಶ್ವೇತಚಾಮರಚಾಲನೈಃ ।
ದಿವ್ಯವ್ಯಜನವಾತೈಶ್ಚ ಪ್ರಹೃಷ್ಟೋ ನೀಲಲೋಹಿತಃ ॥ ೮ ॥

ಕ್ವಣತ್ಕಿಂಕಿಣೀನಿಧ್ವಾನೈರ್ಮಂಜುಮಂಜೀರಶಿಂಜಿತೈಃ ।
ವೀಣಾವೇಣುಸ್ವನೈರ್ಗೀತೈಃ ಪೂರ್ಣಮಾಸೀಜ್ಜಗತ್ತ್ರಯಂ ॥ ೯ ॥

ಶುಕವಾಕ್ಯಕಲಾರಾವೈಃ ಶ್ವೇತಪಾರಾವತಸ್ವನೈಃ ।
ಉನ್ನಿದ್ರಭೂಷಾಫಣಿನಾಂ ದರ್ಶನಾದೇವ ಬರ್ಹಿಣಃ ॥ ೧೦ ॥

---

೭–೮ ಸೌಂದರ್ಯಸರ್ವಸ್ವವೆನಿಸಿದ್ದ ಈ ರಥವು ಅಲ್ಲಿ ಕಾಣಿಸಿಕಂಡೊಡನೆಯೇ ಪರಮೇಶ್ವರನು ಪಾರ್ವತಿಯೊಡನೆ ವೃಷಬದಿಂದಿಳಿದು ನಿಧಾನವಾಗಿ ರಥವನ್ನು ಹತ್ತಿ ಅಲ್ಲಿದ್ದ ಮೆತ್ತೆಯ ಆಸನದಲ್ಲಿ ಮಂಡಿಸಿದನು ದೇವತೆಗಳೆಲ್ಲಾ ಆಗ ತಮ್ಮ ನೇತ್ರಕಮಲಗಳನ್ನೇ ಪೂಜಾಪುಷ್ಪವನ್ನಾಗಿ ಸಮರ್ಪಿಸಿದರು ಬಿಳಿಯ ಚಾಮರಗಳೂ, ದಿವ್ಯವಾದ ಬೀಸಣಿಗೆಗಳೂ, ಶಿವನ ಉಪಚಾರಕ್ಕಾಗಿ ಏರ್ಪಟ್ಟು ಶಿವನ ಮನಸ್ಸನ್ನು ಆನಂದಗೊಳಿಸುತ್ತಿದ್ದುವು

೯–೧೦ ಶಿವನು ಪ್ರತ್ಯಕ್ಷವಾದ ಸಂತೋಷದಲ್ಲಿ ಅಪ್ಸರಸ್ತ್ರೀಯರು ವಿಶೇಷ ರೀತಿಯಿಂದ ನಾಟ್ಯವಾಡಿದಾಗ ಅವರ ಕಾಲಿನ ಕಿರುಗೆಜ್ಜೆಗಳ ಇಂಚರವೂ, ಇಂಪಾದ ಆಭರಣಗಳ ಧ್ವನಿಯೂ, ವೀಣಾವೇಣುಗಳ ಮಂಜುಲನಾದವೂ, ಜಗತ್ತ್ರಯವನ್ನೇ ಧ್ವನಿಮಯವನ್ನಾಗಿ ಮಾಡಿತು ಗಿಣಿಗಳು ಅವ್ಯಕ್ತಮಧುರವಾಗಿ ಮಾತನಾಡಿದುವು ಬಿಳಿಯ ಪಾರಿವಾಳಗಳು ಮನೋಹರವಾಗಿ ಧ್ವನಿಗೈದುವು ಪರಮೇಶ್ವರನ ಮುಖ್ಯ ಆಭರಣವೆನಿಸಿದ್ದ ಸರ್ಪಗಳನ್ನು ನೋಡಿದೊಡನೆಯೇ ಅಲ್ಲಿದ್ದ ನವಿಲುಗಳು ಅತ್ಯಂತ ಸಂತೋಷದಿಂದ ಅರ್ಧ ಚಂದ್ರಾಕಾರದ ಕಣ್ಣುಗಳನ್ನು ಹೊಂದಿದ್ದ ತಮ್ಮ ಗರಿಗಳನ್ನು ಕೆದರಿಕೊಂಡು ನರ್ತನಮಾಡಲಾರಂಭಿಸಿದುವು

ಸನ್ನತುರ್ದರ್ಶಯಂತಸ್ಸ್ವಾಂ ಚಂದ್ರಾರ್ಕಾ ಕೋಟಿಸಂಖ್ಯಯಾ ।
ಪ್ರಣಮಂತಂ ತತೋ ರಾಮಮುತ್ಥಾಪ್ಯ ವೃಷಭಧ್ವಜಃ ॥ ೧೧ ॥

ಆನಿನಾಯ ರಥಂ ದಿವ್ಯಂ ಪ್ರಹೃಷ್ಟೇನಾಂತರಾತ್ಮನಾ ।
ಕಮಂಡಲುಜಲೈಸ್ಸ್ವಚ್ಛೈಃ ಸ್ವಯಮಾಚಮ್ಯ ಯತ್ನತಃ ॥ ೧೨ ॥

ಸಮಾಚಮ್ಯಾಥ ಪುರತಃ ಸ್ವಾಂಕೇ ರಾಮಮುಪಾನಯೇತ್ ।
ಅಥ ದಿವ್ಯಂ ಧನುಸ್ತಸ್ಮೈ ದದೌ ತೂಣೀರಮಕ್ಷಯಂ ॥ ೧೩ ॥

ಮಹಾಪಾಶುಪತಂ ನಾಮ ದಿವ್ಯಮಸ್ತ್ರಂ ದದೌ ತತಃ ।
ಉಕ್ತಶ್ಚ ತೇನ ರಾಮೋಽಪಿ ಸಾದರಂ ಚಂದ್ರಮೌಳಿನಾ ॥ ೧೪ ॥

---

೧೧–೧೩ ಈ ವೈಭವದಲ್ಲಿ ಪರಮೇಶ್ವರನು ರಥಾರೂಢನಾಗಿರುವುದನ್ನು ಕಂಡು ಶ್ರೀರಾಮನು ಶ್ರವಭಕ್ತಿಯುತನಾಗಿ ದೀರ್ಘದಂಡನಮಸ್ಕಾರಮಾಡಿದನು ಪರಶಿವನು ಶ್ರೀರಾಮನ ಅಸದೃಶವಾದ ಭಕ್ತಿಗೆ ಮೆಚ್ಚಿ, ನಮಸ್ಕಾರಮಾಡಿ ತಲೆ ಬಗ್ಗಿಸಿದ್ದ ಅವನನ್ನು, ತಾನೇ ಕೈಹಿಡಿದು ಕರೆದು ತಂದು, ತನ್ನ ರಥದಮೇಲೆ ಕೂರಿಸಿ ಕೊಂಡನು ಅಲ್ಲಿಯೇ ಇದ್ದ ಕಮಂಡಲೂದಕದಿಂದ ತಾನು ಮೊದಲು ಆಚಮನ ಮಾಡಿ, ರಾಮನನ್ನೂ ಆಚಮನಮಾಡುವಂತೆ ಹೇಳಿ, ಶ್ರೀರಾಮನನ್ನು ಮುಂಭಾಗ ದಲ್ಲಿ ಕೂರಿಸಿಕೊಂಡು ವಿಧಿವತ್ತಾಗಿ, ದಿವ್ಯವಾದ ಧನುಸ್ಸನ್ನು ಅಕ್ಷಯಬತ್ತಳಿಕೆ ಯೊಡನೆ ಅವನಿಗೆ ದಾನವಾಗಿ ಅನುಗ್ರಹಿಸಿದನು

೧೪–೧೫ ಅನಂತರ ಮಹಾಪಾಶುಪತಾಸ್ತ್ರಮಂತ್ರವನ್ನು ಶ್ರೀರಾಮನಿಗೆ ಉಪದೇಶಮಾಡಿಕೊಡುತ್ತಾ ಪರಶಿವನು " ರಘುನೃಪನೇ, ಈಗ ನಾನು ನಿನಗುಪ ದೇಶಮಾಡಿರುವ ಅಸ್ತ್ರಮಂತ್ರವು ಅತ್ಯಂತ ಬಯಂಕರವಾದುದು ಜಗತ್ತನ್ನೇ ನಾಶಗೊಳಿಸುವ ಶಕ್ತಿಯು ಇದಕ್ಕಿದೆ ಇಂತಹ ಭಯಂಕರವಾದ ಅಸ್ತ್ರವನ್ನು ಸಾಮಾನ್ಯ ಶತ್ರುವಿನ ಮೇಲೆ ಪ್ರಯೋಗಿಸಬೇಡ ಸಣ್ಣಪುಟ್ಟ ಯುದ್ಧದಲ್ಲಿ ಇದನ್ನು

ಜಗನ್ನಾಶಕರಂ ರೌದ್ರಮುಗ್ರಮಸ್ತ್ರಮಿದಂ ನೃಪ ।
ಅತೋ ನೇದಂ ಪ್ರಯೋಕ್ತವ್ಯಂ ಸಾಮಾನ್ಯೈಸ್ಸಮರಾದಿಕೇ ॥ ೧೩

ಅನ್ಯೋ ನಾಸ್ತಿ ಪ್ರತೀಘಾತ ಏತಸ್ಯ ಭುವನತ್ರಯೇ ।
ತಸ್ಮಾತ್ಪ್ರಾಣಾತ್ಯಯೇ ರಾಮ ಪ್ರಯೋಕ್ತವ್ಯಮುಪಸ್ಥಿತೇ ॥ ೧೪

ಅನ್ಯದೈತತ್ಪ್ರಯುಕ್ತಂ ಚೇಜ್ಜಗತ್ಸಂಕ್ಷಯಕೃದ್ಭವೇತ್ ।
ಅಥಾಹೂಯ ಸುರಶ್ರೇಷ್ಠಾನ್ ಲೋಕಪಾಲಾನ್ಮಹೇಶ್ವರಃ ॥ ೧೫

ಉವಾಚ ಪರಮಪ್ರೀತಃ ಸ್ವಂ ಸ್ವಮಸ್ತ್ರಂ ಪ್ರಯಚ್ಛತ ।
ರಾಘವೋऽಯಂ ಚ ತೈರಸ್ತ್ರೈ ರಾವಣಂ ನಿಹನಿಷ್ಯತಿ ॥ ೧೬

---

ಬಳಸುವುದರಿಂದ ಲೋಕವೇ ನಾಶವಾದೀತು ಇದನ್ನು ತಡೆಗಟ್ಟುವ ಶಸ್ತ್ರ ಶಕ್ತಿಯೇ ಜಗತ್ತಿನಲ್ಲಿ ಕಾಣಲಾರದು

೧೩-೧೫ ಮೂರು ಲೋಕದಲ್ಲಿಯೂ ಈ ಅಸ್ತ್ರಕ್ಕೆ ಬಗ್ಗದ ವಸ್ತುವೇ ಇಲ್ಲ. ತನ್ನ ಪ್ರಾಣಾಪಾಯ ಒದಗಿದ ಸಮಯದಲ್ಲಿ, ಅಥವಾ ಮತ್ತಾವುದರಿಂದಲೂ ಕಾರ್ಯಸಾಧನೆಯಾಗದ ಸನ್ನಿವೇಶದಲ್ಲಿ ಮಾತ್ರ ಈ ಅಸ್ತ್ರವನ್ನು ಪ್ರಯೋಗಿಸು ಸಾಮಾನ್ಯವೇಳೆಯಲ್ಲಿ ಬಳಸುವುದರಿಂದ ಜಗತ್ತೇ ನಾಶವಾದೀತು ಎಚ್ಚರಿಕೆ ಎಂದು ತನ್ನ ಪಾಶುಪತಾಸ್ತ್ರದ ಮಹಿಮೆಯನ್ನು ವಿವರಿಸಿ ಹೇಳಿದನು.

೧೬-೧೯ ಮತ್ತು ಭಕ್ತವತ್ಸಲನಾದ ಮಹಾದೇವನು ಅಲ್ಲಿ ನೆರೆದಿದ್ದ ದಿಕ್ಪಾಲಕರನ್ನೂ ದೇವತಾಶ್ರೇಷ್ಠರನ್ನೂ ಕರೆದು ರಾವಣವಧಾರ್ಥವಾಗಿ ನೀವೆಲ್ಲರೂ ನಿಮ್ಮ ನಿಮ್ಮ ಬಲಿಷ್ಠವಾದ ಅಸ್ತ್ರಗಳನ್ನು ಕೊಡಿರಿ ಎಂದು ಆಜ್ಞಾಪಿಸಿದನು ಶೂರಾಗ್ರಣಿಯಾದ ಶ್ರೀ ರಾಮನು ದುಷ್ಟರಾವಣನನ್ನು ನಾಶಗೊಳಿಸಲಿ, ನಾನು ಮೊದಲು ರಾವಣನ ತಪಸ್ಸಿಗೆ ಮೆಚ್ಚಿ, ದೇವದಾನವರಿಂದ ಮರಣವಿಲ್ಲದಂತಹ ವರವನ್ನು ದಯಪಾಲಿಸಿರುವೆನು ಆದಕ್ಕಾಗಿ ಈ ಕೂಡಲೇ ನೀವೆಲ್ಲರೂ ಕಪಿಗಳ ವೇಷದಿಂದ ಭೂಲೋಕದಲ್ಲಿ ಜನಿಸಿ ರಾವಣನಾಶಕ್ಕೆ ಕಾರಣರಾಗಿರಿ, ರಾವಣನ ಸಂಹಾರದಿಂದ

ತಸ್ಮೈ ದೇವೈರವಧ್ಯಸ್ತ್ವಮಿತಿ ದತ್ತೋ ವರೋ ಮಯಾ ।
ತಸ್ಮಾದ್ಧಾನರತಾಮೇತ್ಯ ಭವಂತೋ ಯುಷ್ಟದುರ್ಮದಾಃ ॥ ೧೯ ॥

ಸಾಹಾಯ್ಯಮಸ್ಯ ಕುರ್ವಂತು ತೇನ ಸ್ವಸ್ಥಾ ಭವಿಷ್ಯಥ ।
ತದಾಜ್ಞಾಂ ಶಿರಸಾ ಗೃಹ್ಯ ಸುರಾಃ ಪ್ರಾಂಜಲಯಸ್ತಥಾ ॥ ೨೦ ॥

ಪ್ರಣಮ್ಯ ಚರಣೌ ಶಂಭೋಃ ಸ್ವಂ ಸ್ವಮಸ್ತ್ರಂ ದದುರ್ಮುದಾ ।
ನಾರಾಯಣಾಸ್ತ್ರಂ ದೈತ್ಯಾರಿರೈಂದ್ರಮಸ್ತ್ರಂ ಪುರಂದರಃ ॥ ೨೧ ॥

ಬ್ರಹ್ಮಾಪಿ ಬ್ರಹ್ಮದಂಡಾಸ್ತ್ರಮಾಗ್ನೇಯಾಸ್ತ್ರಂ ಧನಂಜಯಃ ।
ಯಾಮ್ಯಂ ಯಮೋಽಪಿ ಮೋಹಾಸ್ತ್ರಂ ರಕ್ಷೋರಾಜಸ್ತಥಾ ದದೌ ॥ ೨೨ ॥

ವರುಣೋ ವಾರುಣಂ ಪ್ರಾದಾದ್ವಾಯವ್ಯಾಸ್ತ್ರಂ ಪ್ರಭಂಜನಃ ।
ಕೌಬೇರಂ ಚ ಕುಬೇರೋಽಪಿ ರೌದ್ರಮೀಶಾನ ಏವ ಚ ॥ ೨೩ ॥

---

ನಿಮಗೂ ರಾಕ್ಷಸರ ಉಪದ್ರವವು ತಪ್ಪುವುದು ಎಂದು ಪರಮೇಶ್ವರನು ದೇವತೆಗಳಿಗೆ ಮುಂದಿನ ಕರ್ತವ್ಯವನ್ನು ವಿಧಿಸಿದನು

೨೦–೨೨ ಮಹೇಶ್ವರನು ಹಾಗೆ ಅಪ್ಪಣೆಮಾಡಿದುದನ್ನು ಕೇಳಿ ಸಕಲ ದೇವತೆಗಳೂ ಸಂತೋಷಗೊಂಡು ಅಂಜಲಿಬದ್ಧರಾಗಿ ಮಹಾದೇವನಿಗೆ ವಂದಿಸಿ, ಮೊದಲು ಶಿವಾಜ್ಞೆಯಂತೆ ತಮ್ಮ ತಮ್ಮ ಅಸ್ತ್ರಗಳನ್ನು ಶ್ರೀರಾಮನಿಗೆ ಕರುಣಿಸಿ ಕೊಟ್ಟರು ವಿಷ್ಣುವು ನಾರಾಯಣಾಸ್ತ್ರವನ್ನೂ, ಇಂದ್ರನು ಐಂದ್ರಾಸ್ತ್ರವನ್ನೂ, ಬ್ರಹ್ಮನು ಬ್ರಹ್ಮಾಸ್ತ್ರವನ್ನೂ, ಅಗ್ನಿಯು ಆಗ್ನೇಯಾಸ್ತ್ರವನ್ನೂ, ಯಮನು ಯಾಮ್ಯಾಸ್ತ್ರವನ್ನೂ, ನಿಋುತಿಯು ಮೋಹಾಸ್ತ್ರವನ್ನೂ ಅನುಗ್ರಹಿಸಿದರು

೨೩–೨೫ ವಾರುಣಾಸ್ತ್ರವನ್ನು ವರುಣನೂ, ವಾಯುವ್ಯಾಸ್ತ್ರವನ್ನು ವಾಯುವೂ ಕೌಬೇರಾಸ್ತ್ರವನ್ನು ಕುಬೇರನೂ, ಈಶಾನನು ರುದ್ರಾಸ್ತ್ರವನ್ನೂ, ಸೂರ್ಯದೇವನು ಸೌರಾಸ್ತ್ರವನ್ನೂ, ಸೋಮನು ಸೌಮ್ಯಾಸ್ತ್ರವನ್ನೂ, ವಿಶ್ವೇದೇವತೆಗಳು ಪರ್ವತಾಸ್ತ್ರವನ್ನೂ, ಅಷ್ಟವಸುಗಳು ವಾಸವಾಸ್ತ್ರವನ್ನೂ ಶ್ರೀರಾಮನ ವಶವರ್ತಿಗಳನ್ನಾಗಿ ಮಾಡಿ

ಸೌರಮಸ್ತ್ರಂ ದದೌ ಸೂರ್ಯಃ ಸೌಮ್ಯಂ ಸೋಮಶ್ಚ ಪಾರ್ವತೇಂ ।
ವಿಶ್ವೇದೇವಾ ದದುಸ್ತಸ್ಮೈ ವಸವೋ ವಾಸವಾಭಿಧಂ ॥ ೨೪ ॥

ಅಥ ತುಷ್ಟಃ ಪ್ರಣಮ್ಯೇಶಂ ರಾಮೋ ದಶರಥಾತ್ಮಜಃ ।
ಪ್ರಾಂಜಲಿಃ ಪ್ರಣತೋ ಭೂತ್ವಾ ಭಕ್ತಿಯುಕ್ತೋ ವ್ಯಜಿಜ್ಞಪತ್ ॥ ೨೫ ॥

॥ ಶ್ರೀರಾಮ ಉವಾಚ ॥

ಭಗವನ್ಮಾನುಷೇಣೈವ ನೋಲ್ಲಂಘ್ಯೋ ಲವಣಾಂಬುಧಿಃ ।
ತತ್ರ ಲಂಕಾಭಿಧಂ ದುರ್ಗಂ ದುರ್ಜಯಂ ದೇವದಾನವೈಃ ॥ ೨೬ ॥

ಅನೇಕಕೋಟಯಸ್ತತ್ರ ರಾಕ್ಷಸಾ ಬಲವತ್ತರಾಃ ।
ಸರ್ವೇ ಸ್ವಾಧ್ಯಾಯನಿರತಾಃ ಶಿವಭಕ್ತಾ ಜಿತೇಂದ್ರಿಯಾಃ ॥ ೨೭ ॥

ಅನೇಕಮಾಯಾಸಂಯುಕ್ತಾ ಬುದ್ಧಿಮಂತೋಽಗ್ನಿಹೋತ್ರಿಣಃ ।
ಕಥಮೇಕಾಕಿನಾ ಜೇಯಾಃ ಮಯಾ ಭ್ರಾತ್ರಾ ಚ ಸಂಯುಗೇ ॥ ೨೮ ॥

---

೨೫. ಹೀಗೆ ದಾಶರಥಿಯು ಈಶ್ವರಾನುಗ್ರಹದಿಂದ ಅಸ್ತ್ರಪೂರ್ಣನಾಗಿ ಮಹಾದೇವನನ್ನು ಬಾರಿಬಾರಿಗೂ ವಂದಿಸುತ್ತಾ, ಅಂಜಲಿಬದ್ಧನಾಗಿನಿಂತು ಈ ರೀತಿ ವಿಜ್ಞಾಪನೆ ಮಾಡಿದನು

೨೬-೨೮ "ಷಡ್ಗುಣೈಶ್ವರ್ಯಸಂಪನ್ನನಾದ ಪಾರ್ವತೀಪತಿಯೇ, ಅಗಾಧವಾದ ಲವಣ ಸಮುದ್ರವು ಲಂಕಾನಗರಿಯನ್ನು ತನ್ನ ಮಧ್ಯದಲ್ಲಿಟ್ಟುಕೊಂಡಿರುವುದು. ಆ ನಗರಿಯು ದುರ್ಗವಾದರೋ ದೇವದಾನವರಿಗೂ ಅಭೇದ್ಯವಾದುದೆಂದು ಕೇಳಿರುವೆನು ; ಲಂಕಾನಗರಿಗೆ ಹೋಗುವುದೂ, ಅದನ್ನು ಪ್ರವೇಶಿಸುವುದೂ ಇಷ್ಟು ಕಷ್ಟತಮವಾಗಿರುವಾಗ, ರಾವಣನ ಆಜ್ಞಾಪಾಲಕರಾಗಿ ಅತ್ಯಂತ ಶೂರರೆನಿಸಿದ ರಾಕ್ಷಸರನ್ನು ಗೆಲ್ಲುವುದು ಹೇಗೆ ಸಾಧ್ಯವಾದೀತು? ರಾವಣಾನುಚರರಾದ ರಾಕ್ಷಸರೋ, ವೇದಾಧ್ಯಯನಸಂಪನ್ನರಾಗಿ ಸದಾ ನಿನ್ನನ್ನು ಪೂಜಿಸುತ್ತಾ, ಜಿತೇಂದ್ರಿಯರೆನಿಸಿರುವರು. ಅವರು ಅನೇಕ ಮಾಯಾವಿಗಳೆನಿಸಿ, ಅಗ್ನಿಹೋತ್ರಾದಿ ಶ್ರೌತಸ್ಮಾರ್ತ

॥ ಶ್ರೀ ಮಹಾದೇವ ಉವಾಚ ॥

ರಾವಣಸ್ಯ ವಧೇ ರಾಮ ರಕ್ಷಸಾಮಪಿ ಮಾರಣೇ ।
ವಿಚಾರೋ ನ ತ್ವಯಾ ಕಾರ್ಯಸ್ತಸ್ಯ ಕಾಲೋಽಯಮಾಗತಃ ॥ ೨೯ ॥

ಅಧರ್ಮೇ ತು ಪ್ರವೃತ್ತಾಸ್ತೇ ದೇವಬ್ರಾಹ್ಮಣಪೀಡನೇ ।
ತಸ್ಮಾದಾಯುಃ ಕ್ಷಯಂ ಯಾತಂ ತೇಷಾಂ ಶ್ರೀರಪಿ ಸುವ್ರತ ॥ ೩೦ ॥

ರಾಜಸ್ತ್ರೀಲಂಘನಾಸಕ್ತಂ ರಾವಣಂ ನಿಹನಿಷ್ಯಸಿ ।
ಪಾನಾಸಕ್ತೋ ರಿಪುರ್ಜೇತುಂ ಸುಕರಸ್ಸಂಗರಾಂಗಣೇ ॥ ೩೧ ॥

---

ಕರ್ಮತತ್ಪರರಾಗಿಯೂ ಇರುವರು ಇಂತಹವರನ್ನು ಎದುರಿಸಿ, ಆ ದುರ್ಗಮವಾದ ಪ್ರದೇಶದಲ್ಲಿ ನಿಂತು, ಕೇವಲ ಒಬ್ಬ ತಮ್ಮನೊಡಗೂಡಿದ ನಾನು ಜಯವನ್ನು ಗಳಿಸುವುದು ಸಾಧ್ಯವೆ?" ಎಂದು ಶ್ರೀರಾಮನು ರಾವಣನನ್ನು ಎದುರಿಸುವ ಕಾರ್ಯದಲ್ಲಿ ಹಿಂಜರಿದು ಮಾತನಾಡಿದನು

೨೯-೩೦ ಆಗ ಶ್ರೀರಾಮನನ್ನು ಪ್ರೋತ್ಸಾಹಗೊಳಿಸಲು ಮಹಾದೇವನು ಈ ರೀತಿ ನುಡಿದನು "ವತ್ಸ, ರಾಮನೇ, ನೀನು ರಾವಣನ ಜಯದಲ್ಲಿ ಸಂಶಯ ಪಡಬೇಡ ರಾಕ್ಷಸರು ಅತಿಶೂರರೆಂಬ ಭಯವನ್ನು ಬಿಡು ಅವರಿಗೆ ಈಗ ನಾಶವಾಗುವ ಕಾಲವು ಸಮೀಪಿಸುತ್ತಿದೆ ಅವರು ದೇವಬ್ರಾಹ್ಮಣರನ್ನು ನಾನಾರೀತಿ ಪೀಡಿಸುತ್ತಾ ಅಧರ್ಮಮಾರ್ಗಗಾಮಿಗಳಾಗಿದ್ದಾರೆ ಅದರಿಂದಲೇ ಅವರ ಆಯುಸ್ಸು ಮತ್ತು ಐಶ್ವರ್ಯವು ಕ್ಷೀಣಿಸುತ್ತಿದೆ ಇಂತಹವರನ್ನು ನಾಶಗೊಳಿಸುವುದು ಬಹಳ ಸುಲಭ

೩೧-೩೨ ರಾಜಧರ್ಮವನ್ನೂ, ಸ್ತ್ರೀಯರಲ್ಲಿ ಮರ್ಯಾದೆಯನ್ನೂ ತ್ಯಜಿಸಿರುವ ರಾವಣನು ನಿನ್ನಿಂದ ಜಾಗ್ರತೆ ಹತನಾಗುವನು ಇದರಲ್ಲಿ ಸಂಶಯವಿಲ್ಲ ಮದ್ಯಪಾನದಲ್ಲಿ ಆಸಕ್ತನಾದ ಮನುಷ್ಯನನ್ನು ಯುದ್ಧದಲ್ಲಿ ಗೆಲ್ಲುವುದು ಬಹುಸುಲಭ ಅಧರ್ಮಮಾರ್ಗಗಾಮಿಯಾದ ಶತ್ರುವು ದೊರೆತರೆ ಜಯವು ಸಿದ್ಧವೆಂಬುದನ್ನು

ಅಧರ್ಮನಿರತಶ್ಚತ್ರಭಿರ್ಭಾಗ್ಯೈರ್ನೈವ ಹಿ ಲಭ್ಯತೇ ।
ಅಧೀತವೇದಶಾಸ್ತ್ರೋಽಪಿ ಸದಾ ಧರ್ಮರತೋಽಪಿ ವಾ ॥ ೩೨ ॥

ವಿನಾಶಕಾಲೇ ಸಂಪ್ರಾಪ್ತೇ ಧರ್ಮಮಾರ್ಗಾಚ್ಚ್ಯುತೋ ಭವೇತ್ ।
ಪೀಡ್ಯಂತೇ ದೇವತಾಸ್ಸರ್ವಾಃ ಸತತಂ ಯೇನ ಪಾಪಿನಾ ॥ ೩೩ ॥

ಬ್ರಾಹ್ಮಣಾ ಋಷಯಶ್ಚೈವ ತಸ್ಯ ನಾಶಸ್ಸ್ವಯಂ ಸ್ಥಿತಃ ।
ಕಿಷ್ಕಿಂಧಾನಗರೇ ರಾಮ ದೇವಾನಾಮಂಶಸಂಭವಾಃ ॥ ೩೪ ॥

ವಾನರಾ ಬಹವೋ ಜಾತಾ ದುರ್ಜಯಾ ಬಲವತ್ತರಾಃ ।
ಸಾಹಾಯ್ಯಂ ತೇ ಕರಿಷ್ಯಂತಿ ತೈರ್ಬಧ್ವಾ ಚ ಪಯೋನಿಧಿಂ ॥ ೩೫ ॥

ಅನೇಕಶೈಲಸಂಬದ್ಧೇ ಸೇತೌ ಯಾಂತು ವಲೀಮುಖಾಃ ।
ರಾವಣಂ ಸಗಣಂ ಹತ್ವಾ ತಾಮಾನಯ ನಿಜಪ್ರಿಯಾಂ ॥ ೩೬ ॥

---

ಧೈರ್ಯವಾಗಿ ತಿಳಿಯಬಹುದು ಆದರೆ ಎಷ್ಟೇ ವೇದಾಧ್ಯಯನಸಂಪನ್ನನಾಗಿದ್ದರೂ ಶಾಸ್ತ್ರಾರ್ಥವನ್ನು ತಿಳಿದಿದ್ದರೂ, ಧರ್ಮಮಾರ್ಗಗಾಮಿಯಾಗಿದ್ದರೂ, ವಿನಾಶಕಾಲ ವೊದಗಿದರೆ ಆತನು ಅಧರ್ಮದಲ್ಲಿ ಕಾಲಿಡುವುದು ಸಹಜ

೩೩–೩೫ ಯಾವ ಪಾಪಿಯು ದೇವತೆಗಳನ್ನೂ, ಬ್ರಾಹ್ಮಣರನ್ನೂ ಋಷಿಗಳನ್ನೂ ಬಹಳವಾಗಿ ಪೀಡಿಸುವನೋ, ಅವನು ಶೀಘ್ರವಾಗಿ ನಾಶವಾಗುವ ನೆಂಬುದರಲ್ಲಿ ಸಂಶಯವಿಲ್ಲ ಶ್ರೀರಾಮನೇ ನೀನು ರಾವಣನ ಸೈನ್ಯಕ್ಕೆ ಹೆದರಬೇಡ ಕಿಷ್ಕಿಂಧಾನಗರದಲ್ಲಿ ಅನೇಕ ಶೂರರಾದ ವಾನರರು ದೇವಾಂಶಸಂಭೂತರಾಗಿ ಅವ ತರಿಸುವರು ಅವರೆಲ್ಲರೂ ಅತ್ಯಂತ ಶೂರರಾಗಿ ಯಾರಿಗೂ ಸೋಲಲಾರರು ಅಂತಹ ವಾನರರು ನೀನು ಲಂಕಾನಗರಿಯನ್ನು ಸುಲಭವಾಗಿ ಸೇರಲು ಮಧ್ಯಾ ಸಮುದ್ರಕ್ಕೆ ಸೇತುವೆಯನ್ನು ಕಟ್ಟುವರು

೩೬–೩೭ ವಾನರ ಪಡೆಯು ದೊಡ್ಡ ದೊಡ್ಡ ಬೆಟ್ಟಗಳನ್ನೇ ತಂದ ಜೋಡಿಸಿ ಸಮುದ್ರಕ್ಕೆ ಸೇತುವೆಯನ್ನು ಕಟ್ಟುವುದು ಅವರ ಮೇಲೆ ನೀನು ವಾನ

ಶಸ್ತ್ರೈರ್ಯುದ್ಧೇ ಜಯೋ ಯತ್ರ ತತ್ರಾಸ್ತ್ರಾಣಿ ನ ಯೋಜಯೇತ್ ।
ನಿರಸ್ತ್ರೇಷ್ವಲ್ಪಶಸ್ತ್ರೇಷು ಪಲಾಯನಪರೇಷು ಚ ॥ ೩೭ ॥

ಅಸ್ತ್ರಾಣಿ ಮುಂಚತಸ್ ದಿವ್ಯಾನಿ ಸ್ವಯಮೇವ ವಿನಶ್ಯತಿ ।
ಅಥವಾ ಕಿಂ ಬಹೂಕ್ತೇನ ಮಯೈವೋತ್ಪಾದಿತಂ ಜಗತ್ ॥ ೩೮ ॥

ಮಯ್ಯೈವ ಪಾಲ್ಯತೇ ನಿತ್ಯಂ ಮಯಾ ಸಂಹ್ರಿಯತೇऽಪಿ ಚ ।
ಅಹಮೇಕೋ ಜಗನ್ಮೃತ್ಯುರ್ಮೃತ್ಯೋರಪಿ ಮಹೀಪತೇ ॥ ೩೯ ॥

---

ಸೈನ್ಯದೊಡನೆ ಹೋಗಿ, ಪರಿವಾರಸಮೇತನಾದ ರಾವಣನನ್ನು ಕೊಂದು ನಿನ್ನ ಪತ್ನಿಯಾದ ಸೀತೆಯನ್ನು ಸುರಕ್ಷಿತವಾಗಿ ತರುವೆ ಇದರಲ್ಲಿ ಅಧೈರ್ಯಪಡಬೇಡ ಆದರೆ ಶತ್ರುವನ್ನು ಕೇವಲ ಶಸ್ತ್ರಗಳಿಂದಲೇ (ಲೋಕದ ಆಯುಧಗಳು) ಗೆಲ್ಲಲು ಸಾಧ್ಯವಾದರೆ ಆಗ ಅಸ್ತ್ರಗಳನ್ನು ಅವರ ಮೇಲೆ ಪ್ರಯೋಗಿಸಬಾರದು ಯುದ್ಧದಲ್ಲಿ ಶಸ್ತ್ರಾಸ್ತ್ರರಹಿತರಾಗಿರುವವರೊಡನೆಯೂ ಸ್ವಲ್ಪವಾದ ಆಯುಧಸಂಪತ್ತುಳ್ಳವರೊಡನೆಯೂ, ಹೆದರಿ ಓಡುವವರೊಡನೆಯೂ ಕಾದಾಡಲು ಯತ್ನಿಸಬಾರದು ಅಂತಹವರ ಮೇಲೆ ಪ್ರಬಲ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸುವುದರಿಂದ, ಪ್ರಯೋಗಿಸಿದವನೇ ನಾಶಹೊಂದುವನು

೩೮–೪೦ ಅದಿರಲಿ ಈಗ ಯುದ್ಧದ ನಿಜಾಂಶವನ್ನು ತಿಳಿದುಕೋ ಈ ಚರಾಚರಾತ್ಮಕವಾದ ಪ್ರಪಂಚವನ್ನೆಲ್ಲಾ ನಾನೇ ಸೃಷ್ಟಿಸಿದವನು, ಸಂರಕ್ಷಿಸುವವನೂ ನಾನೇ, ಸರ್ವವನ್ನೂ ನಾಶಗೊಳಿಸುವವನೂ ನಾನೇ ಎಲ್ಲವನ್ನೂ ನಾಶಗೊಳಿಸುವ ಮೃತ್ಯುವಿಗೂ ನಿಜವಾದ ಮೃತ್ಯುವು ನಾನು ದುರ್ಮಾರ್ಗಪ್ರವರ್ತಕರಾಗಿರುವ ಈ ದುಷ್ಟದಾನವರೆಲ್ಲಾ ಈಗ ಮೃತ್ಯುಸ್ವರೂಪನಾದ ನನ್ನ ಬಾಯಿಗೆ ಸಿಕ್ಕಿರುವರು ಆದರೆ ನಿಮಿತ್ತಮಾತ್ರನಾಗಿ ನೀನು ರಾಕ್ಷಸಸಂಹಾರಕ್ಕೆ ನಿಲ್ಲು ರಾಕ್ಷಸನಾಶಕನೆಂಬ ಕೀರ್ತಿಯೂ ನಿನಗೆ ಸಲ್ಲುವುದು ಆದರೆ ನಿಜವಾಗಿ ಜಗತ್ತಿನ ಎಲ್ಲಾ ವರ್ಗದ

ಗ್ರಸೇಽಹಮೇವ ಸಕಲಂ ಜಗದೇತಚ್ಚರಾಚರಂ ।
ಮಮ ವಕ್ತ್ರಗತಾಸ್ಸರ್ವೇ ರಾಕ್ಷಸಾ ಯುದ್ಧದುರ್ಮದಾಃ ॥ ೪೦ ॥

ನಿಮಿತ್ತಮಾತ್ರಂ ತ್ವಂ ಭೂಯಾಃ ಕೀರ್ತಿಮಾಪ್ಸ್ಯಸಿ ಸಂಗರೇ ।

ಇತಿ ಶ್ರೀಪದ್ಮಪುರಾಣೇ ಶಿವಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀ ಶಿವರಾಘವಸಂವಾದೇ ರಾಮಾಯ
ಈಶ್ವರವರಪ್ರದಾನಯೋಗೋ ನಾಮ

॥ ಪಂಚಮೋಽಧ್ಯಾಯಃ ॥

---

ವಸ್ತುವಿನ ಉತ್ಪತ್ತಿಸ್ಥಿತಿ ನಾಶಗಳಿಗೆಲ್ಲಾ ನಾನೇ ಮೂಲಕಾರಣನೆಂಬುದನ್ನು ಯಾರೂ ಮರೆಯಬಾರದು ಹೀಗೆಂದು ರಾವಣನಿಗೆ ಹೆದರಿ ಶಂಕಿಸುತ್ತಿದ್ದ ಶ್ರೀ ರಾಮನಿಗೆ ಪರಮೇಶ್ವರನು ಅಭಯವಚನಗಳನ್ನಿತ್ತು ಯುದ್ಧಕ್ಕೆ ಪ್ರೋತ್ಸಾಹಿಸಿದನು.

ಇಲ್ಲಿಗೆ ಶ್ರೀ ಪದ್ಮಪುರಾಣದ ಶಿವಗೀತೋಪನಿಷತ್ತಿನಲ್ಲಿ ಈಶ್ವರ ವರ
ಪ್ರದಾನಯೋಗವೆಂಬ ಐದನೆಯ ಅಧ್ಯಾಯವು ಮುಗಿದುದು



|| ಶ್ರೀಃ ||

# ಶ್ರೀ ಶಿವಗೀತಾ

---

## || ಅಥ ಷಷ್ಠೋಽಧ್ಯಾಯಃ ||

### || ಶ್ರೀರಾಮ ಉವಾಚ ||

ಭಗವನ್ನತ್ರ ಮೇ ಚಿತ್ರಂ ಮಹದೇತತ್ಪ್ರಜಾಯತೇ ।
ಶುದ್ಧಸ್ಫಟಿಕಸಂಕಾಶಸ್ತ್ರಿಣೇತ್ರಶ್ಚಂದ್ರಶೇಖರಃ || ೧ ||

ಮೂರ್ತಸ್ತ್ವಂ ತು ಪರಿಚ್ಛಿನ್ನಾಕೃತಿಃ ಪುರುಷರೂಪಧೃಕ್ ।
ಅಂಬಯಾ ಸಹಿತೋಽತ್ರೈವ ರಮಸೇ ಪ್ರಮಥೈಸ್ಸಹ || ೨ ||

---

### ಆರನೆಯ ಅಧ್ಯಾಯ

೧-೩ ಪರಮೇಶ್ವರೋಕ್ತಿಯನ್ನು ಕೇಳಿದ ಶ್ರೀರಾಮನು ಆಶ್ಚರ್ಯಗೊಂಡು, ಮತ್ತೆ ಮಹಾದೇವನನ್ನು ಕುರಿತು "ಸ್ವಾಮಿ, ನಿನ್ನ ವಾಣಿಯನ್ನು ಕೇಳಿ ನನಗೆ ಈಗ ಒಂದು ಸಂಶಯವುಂಟಾಗಿದೆ ಮಹಾದೇವನೇ, ನೀನು ಶುದ್ಧ ಸ್ಫಟಿಕದಂತೆ ಶುಭ್ರವರ್ಣದಿಂದ ರಂಜಿಸುತ್ತಿರುವೆ ಮೂರು ಕಣ್ಣುಗಳಿಂದಲೂ, ಶಿರಸ್ಸಿನ ಚಂದ್ರ ಕಲೆಯಿಂದಲೂ ಕೂಡಿ, ಅಳತೆಗೆ ಸಿಕ್ಕುವ ಒಂದು ಆಕಾರವುಳ್ಳವನಾಗಿ ಕಾಣು ತ್ತಿರುವೆ ಸಾಮಾನ್ಯಪುರುಷನಂತೆ ನೀನೂ ಅಂಬಾ ಸಹಿತನಾಗಿದ್ದು ಸ್ತ್ರೀಸೌಖ್ಯ ವನ್ನು ಪಡೆದು ಪ್ರಮಥಗಣಗಳ ಸೇವೆಯಿಂದ ಸಂತುಷ್ಟನಾಗುತ್ತಿರುವೆ ಹೀಗಿರುವ ನೀನು ಈ ದೊಡ್ಡ ಚರಾಚರಾತ್ಮಕವಾದ ಪ್ರಪಂಚಕ್ಕೆ ಆದಿಭೂತನೆಂಬುದು ಹೇಗೆ? ನಿನ್ನ ನಿಜವಾದ ಸ್ವರೂಪವಾವುದು? ಒಂದು ನಿರ್ದಿಷ್ಟವಾದ ಆಕಾರಕ್ಕೆ ಸಿಕ್ಕಿದ

ತ್ವಂ ಕಥಂ ಪಂಚಭೂತಾದಿ ಜಗದೇತಚ್ಚರಾಚರಂ ।
ತದ್ಬ್ರೂಹಿ ಗಿರಿಜಾಕಾಂತ ಮಯಿ ತೇsನುಗ್ರಹೋ ಯದಿ ॥ ೩ ॥

॥ ಶ್ರೀ ಮಹಾದೇವ ಉವಾಚ ॥

ಶೃಣು ರಾಮ ಮಹಾಭಾಗ ದುಜ್ಞೇಯಮಮರ್ತ್ಯೈರಪಿ ।
ತತ್ಪ್ರವಕ್ಷ್ಯಾಮಿ ತೇ ಭಕ್ತ್ಯಾ ಬ್ರಹ್ಮಚರ್ಯೇಣ ಸುವ್ರತ ॥ ೪ ॥

ಪಾರಂ ಯಾಸ್ಯಸ್ಯನಾಯಾಸಾದ್ಯೇನ ಸಂಸಾರನೀರಧೇಃ ।
ದೃಶ್ಯಂತೇ ಪಂಚಭೂತಾನಿ ಯೇ ಚ ಲೋಕಾಶ್ಚತುರ್ದಶ ॥ ೫ ॥

ಸಮುದ್ರಾಃ ಪರ್ವತಾ ದೇವಾ ರಾಕ್ಷಸಾ ಋಷಯಸ್ತಥಾ ।
ದೃಶ್ಯಂತೇ ಯಾನಿ ಚಾನ್ಯಾನಿ ಸ್ಥಾವರಾಣಿ ಚರಾಣಿ ಚ ॥ ೬ ॥

---

ನೀನು ಅಪರಿಮಿತ ಪ್ರಪಂಚಾತ್ಮಕನಾಗಿ ಪ್ರಪಂಚವನ್ನು ರೂಪಿಸುವುದಾದರೂ ಹೇಗೆ ದಯೆಯಿಟ್ಟು ಈ ಸಂಶಯವನ್ನು ನಿವಾರಿಸು ?" ಎಂದು ಪ್ರಶ್ನಿಸಿದನು

೪-೬ ಆಗ ಶಂಕರನು ಶ್ರೀರಾಮನ ಅಜ್ಞಾನಕ್ಕೆ ಮನಸ್ಸಿನಲ್ಲಿಯೇ ನಗುತ್ತಾ ಪರಮಾತ್ಮಸ್ವರೂಪವನ್ನು ಸಂಕ್ಷೇಪವಾಗಿ ವಿವರಿಸತೊಡಗಿದನು "ಶ್ರೀರಾಮನೇ ನೀನು ಸಂಶಯಪಡುವಂತೆಯೇ ಸಮಸ್ತ ದೇವತೆಗಳೂ ಪರಮಾತ್ಮನೆನಿಸಿದ ನನ್ನ ಲೀಲೆಯಲ್ಲಿ ಸಂದೇಹಹೊಂದಿರುವರು ಆದರೆ ಆತ್ಮಸ್ವರೂಪವನ್ನು ಎಷ್ಟು ಹೇಳಿದರೂ ಸುಲಭವಾಗಿ ಅವರಿಗೂ ತಿಳಿಯಲಾರದು ಅದನ್ನೇ ಈಗ ನಿನಗೆ ಸುಲಭವಾಗಿ ತಿಳಿಸುವೆನು ಕೇಳು ಭಕ್ತಿಭಾವದಿಂದಲೂ ಬ್ರಹ್ಮಚರ್ಯೆಯಿಂದಲೂ, ಕೂಡಿರುವುದರಿಂದ, ಈ ಬ್ರಹ್ಮವಿದ್ಯೋಪದೇಶಕ್ಕೆ ನೀನು ಶ್ರೇಷ್ಠವಾದ ಅಧಿಕಾರಿಯೆನಿಸಿರುವೆ ಈಗ ನಾನು ಹೇಳಲಿರುವ ಬ್ರಹ್ಮಸ್ವರೂಪದ ಅರಿವಿನಿಂದ ನೀನು ಸಂಸಾರಸಾಗರದಿಂದ ಸುಲಭವಾಗಿ ಪಾರಾಗಬಹುದು ಲೋಕದಲ್ಲಿ ಸರ್ವರಿಗೂ ಗೋಚರಿಸುತ್ತಿರುವ ಪೃಥಿವ್ಯಾದಿಪಂಚ ಭೂತಗಳೂ, ಚತುರ್ದಶಲೋಕಗಳೂ, ಸಮುದ್ರಗಳೂ, ಪರ್ವತಗಳೂ, ದೇವ ರಾಕ್ಷಸರೂ,ಋಷಿಗಳೂ, ಇನ್ನೂ ಚರಸ್ಥಿರಾತ್ಮಕವಾದ, ಸಕಲ ಪ್ರಪಂಚವೂ ಗಂಧರ್ವ, ನಾಗ, ಪ್ರಮಥ ಮುಂತಾದ ಗಣವಿಶೇಷಗಳೂ ನನ್ನ ಅಂಶ ಸಂಭೂತವಾದವುಗಳೇ

ಗಂಧರ್ವಾಃ ಪ್ರಮುಖಾ ನಾಗಾಃ ಸರ್ವೇ ತೇ ಮದ್ವಿಭೂತಯಃ ।
ಪುರಾ ಬ್ರಹ್ಮಾದಯೋ ದೇವಾ ದ್ರಷ್ಟುಕಾಮಾ ಮಮಾಕೃತಿಂ ॥ ೭ ॥

ಮಂದರಂ ಪ್ರಯಯುಸ್ಸರ್ವೇ ಮಮ ಪ್ರಿಯತರಂ ಗಿರಿಂ ।
ಸ್ತುತ್ವಾ ಪ್ರಾಂಜಲಯೋ ದೇವಾ ಮಾಂ ತಥಾ ಪುರತಸ್ಸ್ಥಿತಾಃ ॥ ೮ ॥

ತಾನ್ ದೃಷ್ಟ್ವಾಥ ಮಯಾ ದೇವಾನ್ ಲೀಲಾಕುಲಿತಚೇತಸಃ ।
ತೇಷಾಮಪಹೃತಂ ಜ್ಞಾನಂ ಬ್ರಹ್ಮಾದೀನಾಂ ದಿವೌಕಸಾಂ ॥ ೯ ॥

ಅಥ ತೇಽಪಹೃತಜ್ಞಾನಾ ಮಾಮಾಹುಃ ಕೋ ಭವಾನಿತಿ ।
ಅಥಾಬ್ರುವಮಹಂ ದೇವಾನಹಮೇವ ಪುರಾತನಃ ॥ ೧೦ ॥

---

೭–೮ ಹಿಂದೆ ಒಂದು ಸಾರಿ ಬ್ರಹ್ಮಾದಿದೇವತೆಗಳು ನನ್ನ ನಿಜವಾದ ಆಕಾರವನ್ನು ತಿಳಿಯಬೇಕೆಂದು ನನಗೆ ಅತ್ಯಂತಪ್ರಿಯವಾದ ಮಂದರ ಪರ್ವತಕ್ಕೆ ಗುಂಪುಗುಂಪಾಗಿ ಬಂದರು ಅಲ್ಲಿ ಅಂಜಲಿಬದ್ಧರಾಗಿ ನಿಂತು ನನ್ನನ್ನು ನಾನಾರೀತಿ ಸ್ತೋತ್ರಮಾಡಿದರು ಮತ್ತು ತಮ್ಮ ಮನೋಭೀಷ್ಟವನ್ನೂ ನನ್ನ ಮುಂದೆ ವಿಜ್ಞಾಪಿಸಿಕೊಂಡರು

೯–೧೦ ಅವರು ಹಾಗೆ ಪ್ರಶ್ನೆ ಮಾಡಿದ್ದನ್ನು ಕೇಳಿ ಅವರಿಗೆ ಸರಿಯಾದ ರೀತಿಯಲ್ಲಿ ಉಪದೇಶಮಾಡಬೇಕೆಂದು ಬಯಸಿ, ಅವರ ಅಜ್ಞಾನವು ಸಂಪೂರ್ಣವಾಗಿ ಹೊರಬೀಳುವಂತೆ, ಅವರಲ್ಲಿದ್ದ ಜ್ಞಾನವೆಲ್ಲಾ ಅಜ್ಞಾನಾವೃತವಾಗುವಂತೆ ಮಾಡಿದೆನು ಹಾಗೆ ಅಜ್ಞಾನಿಗಳಾದ ಅವರು ಪ್ರಥಮದಲ್ಲಿಯೇ ನೀನು ಯಾರು ? ಎಂದು ಪ್ರಶ್ನೆಮಾಡಿದರು ಆಗ *ನಾನು, ನಾನೇ ಅನಾದಿಯೆನಿಸಿದ ಪರಬ್ರಹ್ಮನು ಎಂದು ಹೇಳಿದೆನು

---

*"ತೇ ದೇವಾ ರುದ್ರಮಪೃಚ್ಛನ್ । ಕೋ ಭವಾನಿತಿ । ಸೋಽಬ್ರವೀತ್ ।
ಅಹಮೇಕಃ ಪ್ರಥಮಮಾಸಂ ವರ್ತಾಮಿ ಚ ಭವಿಷ್ಯಾಮಿ ಚ ॥"
ಎಂಬ ಶ್ರುತಿಯೇ ಇದಕ್ಕೆ ಪ್ರಮಾಣವೆನಿಸಿದೆ

ಆಸಂ ಪ್ರಥಮಮೇವಾಹಂ ವರ್ತಾಮಿ ಚ ಸುರೇಶ್ವರಾಃ ।
ಭವಿಷ್ಯಾಮಿ ಚ ಲೋಕೇಽಸ್ಮಿನ್ಮತ್ತೋ ನಾನ್ಯೋಽಸ್ತಿ ಕಶ್ಚನ ॥ ೧೧ ॥

ವ್ಯತಿರಿಕ್ತಂ ಚ ಮತ್ತೋಽಸ್ತಿ ನಾನ್ಯತ್ಕಿಂಚಿತ್ಸುರೇಶ್ವರಾಃ
ನಿತ್ಯೋಽನಿತ್ಯೋಽಹಮನಘೋ ಬ್ರಹ್ಮಣಾಂ ಬ್ರಹ್ಮಣಸ್ಪತಿಃ ॥ ೧೨ ॥

ದಕ್ಷಿಣಾಂ ಚ ಉದಂಚೋಽಹಂ ಪ್ರಾಂಚಃ ಪ್ರತ್ಯಂಚ ಏವ ಚ ।
ಅಧಶ್ಚೋರ್ಧ್ವಂ ಚ ವಿದಿಶೋ ದಿಶಶ್ಚಾಹಂ ಸುರೇಶ್ವರಾಃ ॥ ೧೩ ॥

ಸಾವಿತ್ರೀ ಚಾಪಿ ಗಾಯತ್ರೀ ಸ್ತ್ರೀ ಪುಮಾನಪುಮಾನಪಿ ।
ತ್ರಿಷ್ಟುಬ್ಜಗತ್ಯನುಷ್ಟುಪ್ಚ ಪಂಕ್ತಿಶ್ಛಂದಸ್ತ್ರಯೀಮಯಃ ॥ ೧೪ ॥

---

೧೧–೧೨ ಹಾಗೆ ಬ್ರಹ್ಮಜ್ಞಾನಕುತೂಹಲಿಗಳಾದ ದೇವತೆಗಳನ್ನು ಕುರಿತು ಈರೀತಿ ಬ್ರಹ್ಮಸ್ವರೂಪವನ್ನು ಉಪದೇಶಿಸಿದೆನು "ಎಲೈ ದೇವತೆಗಳಿರಾ ಕೇಳಿರಿ ಸರ್ವಪ್ರಪಂಚಕ್ಕೂ ಮೂಲಕಾರಣನೆನಿಸಿ ಮೊದಲಿದ್ದವನು ನಾನು ಪ್ರಪಂಚವೆಲ್ಲಾ ಲೀನವಾಗುವುದೂ ನನ್ನಲ್ಲಿಯೇ ಮುಂದಿರುವವನೂ ನಾನೇ ನನಗಿಂತ ಬೇರೆಯಾದ (ಅವಿದ್ಯಾವಿಶಿಷ್ಟಪರಬ್ರಹ್ಮ) ವಸ್ತುವೇ ಮತ್ತೊಂದಿಲ್ಲ ಸ್ವಸ್ವರೂಪದಿಂದ ನಿತ್ಯನೂ ನಾನೇ ಘಟಾದಿತಾದಾತ್ಮ್ಯದಿಂದ ಅನಿತ್ಯನೂ ನಾನೇ ಅವಿದ್ಯಾರಾಹಿತ್ಯದಿಂದ ಪಾಪರಹಿತನೂ ನಾನೇ ನಾಲ್ಕು ವೇದಗಳಿಗೂ, ಚತುರ್ಮುಖಬ್ರಹ್ಮನಿಗೂ ನಾನೇ ಅಧಿಪತಿಯು

೧೩–೧೪ ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ ಎಂಬ ದಿಕ್ಕುಗಳ ಸ್ವರೂಪನೂ, ಆಯಾ ದಿಕ್ಕುಗಳಲ್ಲಿರುವ ಸಮಸ್ತವಸ್ತುಸ್ವರೂಪನೂ, ಊರ್ಧ್ವಾಧೋಭಾಗರೂಪನೂ, ವಿದಿಗ್ರೂಪದಲ್ಲಿ ತೋರುವವನೂ ನಾನೇ ಸಾವಿತ್ರಿ, ಗಾಯತ್ರೀ, ಸರಸ್ವತೀ ರೂಪದಿಂದ ವಿರಾಜಿಸುವವನೂ, ಸ್ತ್ರೀಪುರುಷನಪುಂಸಕರೂಪದಿಂದ ಪ್ರಪಂಚವನ್ನು ಆವರಿಸಿರುವವನೂ ನಾನೇ ತ್ರಿಷ್ಟುಪ್, ಜಗತೀ, ಅನುಷ್ಟುಪ್, ಪಂಕ್ತಿ, ವೇದತ್ರಯಗಳು ಇವೆಲ್ಲವೂ ನನ್ನ ಸ್ವರೂಪಗಳೇ

ಸತ್ಯೋಽಹಂ ಸರ್ವಗಶ್ಯಾಂತಸ್ತ್ರೇತಾಗ್ನಿಗೌರವಂ ಗುರುಃ ।
ಗೌರ್ಯಹಂ ಗಹ್ವರಂ ಚಾಹಂ ದ್ಯೌರಹಂ ಜಗತಾಂ ವಿಭುಃ ॥ ೧೫ ॥

ಜ್ಯೇಷ್ಠಸ್ಸರ್ವಸುರಶ್ರೇಷ್ಠೋ ವರ್ಷಿಷ್ಠೋಽಹಮಪಾಂ ಪತಿಃ ।
ಆದ್ಯೋಽಹಂ ಭಗವಾನೀಶಸ್ತೇಜೋಽಹಂ ಚಾದಿರಪ್ಯಹಂ ॥ ೧೬ ॥

ಋಗ್ವೇದೋಽಹಂ ಯಜುರ್ವೇದಃ ಸಾಮವೇದೋಽಹಮಾತ್ಮಭೂಃ ।
ಅಥರ್ವಣಶ್ಚ ಮಂತ್ರೋಽಹಂ ತಥಾ ಚಾಂಗಿರಸೋ ವರಃ ॥ ೧೭ ॥

ಇತಿಹಾಸಪುರಾಣಾನಿ ಕಲ್ಪೋಽಹಂ ಕಲ್ಪವಾನಹಂ ।
ನಾರಾಶಂಸೀ ಚ ಗಾಥಾಽಹಂ ವಿದ್ಯೋಪನಿಷದೋಽಸ್ಮ್ಯಹಂ ॥ ೧೮ ॥

---

೧೫–೧೬. ಪ್ರಾತಿಭಾಸಿಕವಾದ ಮತ್ತು ವ್ಯಾವಹಾರಿಕವಾದ ಸತ್ಯಕ್ಕಿಂತಲೂ ಬೇರೆಯಾದ ಪರಮಾರ್ಥಸತ್ಯಸ್ವರೂಪನೇ ನಾನು. ಸರ್ವವ್ಯಾಪಿಯಾದವನೂ ಅವಿದ್ಯಾಸಂಬಂಧವಾದ ಧರ್ಮಗಳಿಂದ ಕ್ಷೋಭೆಗೊಳ್ಳದವನೂ ನಾನೇ. ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿಗಳೆಂಬ ಅಗ್ನಿತ್ರಯಸ್ವರೂಪನೂ, ಗುರುವಿನ ಕರ್ಮವೆನಿಸಿದ ಅಧ್ಯಯನಾದಿಗಳಿಗೂ, ಗುರುಸ್ವರೂಪನೂ (ವಿದ್ಯೋಪದೇಶಕನೂ) ವಾಗ್ರೂಪನೂ, ರಹಸ್ಯರೂಪನೂ, ಸ್ವರ್ಗರೂಪಿಯೂ, ಜಗತ್ತಿನಲ್ಲೆಲ್ಲಾ ಸರ್ವ ವ್ಯಾಪಕನೂ ನಾನೇ ಎಂದು ತಿಳಿ.

೧೭–೧೮. ಜಗತ್ತಿಗೆ ಆದಿಭೂತನಾದುದರಿಂದ ನಾನು ಸರ್ವಜ್ಯೇಷ್ಠನು. ಸಮಸ್ತ ದೇವತೆಗಳೂ ನನ್ನ ಈ ಮಾಯಾಮೋಹಿತರಾಗಿರುವುದರಿಂದ ನಾನು ನಿಮ್ಮೆಲ್ಲರಿಗಿಂತ ಶ್ರೇಷ್ಠನೆನಿಸಿರುವೆನು. ಜ್ಞಾನಾಶ್ರಯನಾದ ನಾನು ವರ್ಷಿಷ್ಠನಾಗಿರುವೆನು. ಸಮುದ್ರಸ್ವರೂಪನೂ ನಾನೇ ಸರ್ವಕ್ಕೂ ಆದಿಯಾಗಿ ಮಾಯಾವಿಶಿಷ್ಟನೆನಿಸಿ ಷಡ್ಗುಣೈಶ್ವರ್ಯಪರಿಪೂರ್ಣನೆನಿಸಿರುವವನೂ ನಾನೇ. ಸರ್ವಕ್ಕೂ ಒಡೆಯನಾಗಿ ತೇಜೋರೂಪದಿಂದಿರುವವನೂ ನಾನೇ. ಋಗ್ವೇದ, ಯಜುರ್ವೇದ, ಸಾಮವೇದ, ಥರ್ವಣವೇದ, ಬ್ರಹ್ಮ, ಆಂಗಿರಸವೆಂಬ ಮಂತ್ರವೂ, ಇತಿಹಾಸ, ಪುರಾಣ,

ಶ್ಲೋಕಾಸ್ಸೂತ್ರಾಣಿ ಚೈವಾಹಮನುವ್ಯಾಖ್ಯಾನಮೇವ ಚ
ವ್ಯಾಖ್ಯಾನಾನಿ ತಥಾ ವಿದ್ಯಾ ಇಷ್ಟಂ ಹುತಮಥಾಹುತಿಃ || ೧೯ ||

ದತ್ತಾದತ್ತಮಯೋ ಲೋಕಃ ಪರಲೋಕೋಽಹಮಕ್ಷರಃ |
ಕ್ಷರಸ್ಸರ್ವಾಣಿ ಭೂತಾನಿ ದಾಂತಿಶ್ಶಾಂತಿರಹಂ ಖಗಃ || ೨೦ ||

ಗುಹ್ಯೋಽಹಂ ಸರ್ವದೇವೇಷು ಆರಣ್ಯೋಽಹಮಜೋಽಪ್ಯಹಂ |
ಪುಷ್ಕರಂ ಚ ಪವಿತ್ರಂ ಚ ಮಧ್ಯಂ ಚಾಹಂ ತತಃ ಪರಂ || ೨೧ ||

---

ಕಲ್ಪ, (ಪ್ರಯೋಗ) ಅವುಗಳನ್ನು ಪ್ರಕಾಶಕ್ಕೆ ತಂದ ಆಶ್ವಲಾಯನನೇ ಮೊದಲಾದ ಮಹರ್ಷಿಗಳು, ರುದ್ರಪ್ರತಿಪಾದಕವಾದ ನಾರಾಶಂಸೀ ಎಂಬ ಮಂತ್ರ, ಯಜ್ಞ ಪ್ರಶಂಸಾರೂಪವಾದ ಗಾಥಾಮಂತ್ರವೂ ಉಪಾಸನಾರೂಪವಾದ ವಿದ್ಯೆಯೂ,ಬ್ರಹ್ಮ ಪ್ರತಿಪಾದಕವಾದ ಉಪನಿಷತ್ಸ್ವರೂಪನೂ ನಾನೇ ಎಂಬುದನ್ನು ದೃಢವಾಗಿ ತಿಳಿಯಿರಿ

೧೯–೨೦ ಕೀರ್ತಿಸ್ವರೂಪನೆ, ನಾನು ಋಷಿಕೃತಗಳಾದ ಸರ್ವಸೂತ್ರಗಳೂ, ಅನುವ್ಯಾಖ್ಯಾನಗಳೆನಿಸಿದ ಶಾಸ್ತ್ರಗಳೂ, ವ್ಯಾಖ್ಯಾನಗಳೆನಿಸಿದ ಮಹಾ ಭಾಷ್ಯಾದಿ ಗಳೂ, ಗಾಂಧರ್ವವಿದ್ಯೆಯೇ ಮೊದಲಾದ ವಿದ್ಯೆಗಳೂ ಯಾಗಾದಿಗಳೂ, ಅದರಲ್ಲಿ ದೇವತೆಗಳಿಗೆ ಕೊಡುವ ಹವಿಸ್ಸೇ ಮೊದಲಾದುವುಗಳೂ, ದಾನವಾಗಿ ಕೊಡಲ್ಪಡುವ ಗವಾದಿವಸ್ತುಗಳೂ, ದಾನವಾಗಿ ಕೊಡಲಾಗದ ಪರ್ವತಾದಿಗಳೂ ಇವುಗಳಿಂದ ಕೂಡಿದ ಈ ಭೂಲೋಕವೂ, ಸ್ವರ್ಗಾದಿ ಬೇರೆ ಬೇರೆ ಲೋಕಗಳೂ, ನಾಶರಹಿತನಾ ದವನೂ, ನಾಶವಾಗುವ ಸಮಸ್ತ ವಸ್ತುಸ್ವರೂಪನೂ ಕರ್ಮಶಕ್ತಿಯೂ, ಶಾಂತ ಗುಣವೂ, ಅಂತರಿಕ್ಷ ಗಾಮಿಯಾದ ವಸ್ತುವೂ ನಾನೇ ಆಗಿರುವೆನು

೨೧–೨೨ ಸಮಸ್ತ ದೇವತೆಗಳಲ್ಲಿಯೂ ಅಡಗಿರುವವನು ನಾನು ಅರಣ್ಯಸ್ಥ ವಾದ ಸಮಸ್ತ ವಸ್ತುಜಾಲದಲ್ಲಿಯೂ ನಾನೇ ನೆಲಸಿರುವೆನು ನಾಶರಹಿತನು ನಾನು ಅಂತರಿಕ್ಷವೂ, ಮಧ್ಯಗತ ಭೂಲೋಕವೂ, ಪಾತಾಳಲೋಕವೂ ನಾನೇ ಆಗಿರುವೆ

ಬಹಿಶ್ಚಾಹಂ ತಥಾ ಚಾಂತಃ ಪುರಸ್ತಾದಹಮವ್ಯಯಃ ।
ಜ್ಯೋತಿಶ್ಚಾಹಂ ತಮಶ್ಚಾಹಂ ತನ್ಮಾತ್ರಾಣೀಂದ್ರಿಯಾಣ್ಯಹಂ ॥ ೨೨ ॥

ಬುದ್ಧಿಶ್ಚಾಹಮಹಂಕಾರೋ ವಿಷಯಾಣ್ಯಹಮೇವ ಚ ।
ಬ್ರಹ್ಮಾ ವಿಷ್ಣುರ್ಮಹೇಶೋಽಹಮುಮಾ ಸ್ಕಂದೋ ವಿನಾಯಕಃ ॥ ೨೩ ॥

ಇಂದ್ರೋಽಗ್ನಿಶ್ಚ ಯಮಶ್ಚಾಹಂ ನಿರ್ಋತಿರ್ವರುಣೋಽನಿಲಃ ।
ಕುಬೇರೋಽಹಂ ತಥೇಶಾನೋ ಭೂರ್ಭುವಸ್ಸ್ವರ್ಮಹರ್ಜನಃ ॥ ೨೪ ॥

ತಪಸ್ಸತ್ಯಂ ಚ ಪೃದಿವೀ ಚಾಪಸ್ತೇಜೋಽನಿಲೋಽಪ್ಯಹಂ ।
ಆಕಾಶೋಽಹಂ ರವಿಸ್ಸೋಮೋ ನಕ್ಷತ್ರಾಣಿ ಗ್ರಹಾಣ್ಯಹಂ ॥ ೨೫ ॥

ಪ್ರಾಣಃ ಕಾಲಸ್ತಥಾ ಮೃತ್ಯುರಮೃತಂ ಭೂತಮಪ್ಯಹಂ ।
ಭವ್ಯಂ ಭವಿಷ್ಯತ್ಕೃತ್ಸ್ನಂ ಚ ವಿಶ್ವಂ ಸರ್ವಾತ್ಮಕೋಽಪ್ಯಹಂ ॥ ೨೬ ॥

---

ಹೊರಭಾಗವೂ, ಒಳಭಾಗವೂ, ಮುಂಭಾಗವೂ ನಾನೇ ನಾಶರಹಿತನೆನಿಸಿ, ಜ್ಯೋತೀರೂಪದಿಂದಲೂ, ತಮೋರೂಪದಿಂದಲೂ, ಪಂಚತನ್ಮಾತ್ರಾದಿರೂಪದಿಂದಲೂ, ಇರುವವನು ನಾನು. ಬುದ್ಧಿ, ಅಹಂಕಾರ, ವಿಷಯಸುಖಗಳು ಬ್ರಹ್ಮ, ವಿಷ್ಣು, ಮಹೇಶ್ವರ, ಉಮಾ, ಸ್ಕಂದ, ವಿನಾಯಕ ಈ ಎಲ್ಲ ಆಕಾರಗಳೂ ನನ್ನ ರೂಪಗಳೇ

೨೪–೨೬ ಇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ ವಾಯು, ಕುಬೇರ, ಈಶಾನ, ಈ ಹೆಸರಿನ ಅಷ್ಟದಿಕ್ಪಾಲಕರೆಲ್ಲರೂ ನಾನೇ ಭೂಲೋಕ, ಭುವರ್ಲೋಕ, ಮಹೋಲೋಕ, ಜನಲೋಕ, ತಪೋಲೋಕ, ಸತ್ಯಲೋಕಗಳೆಂಬ ಏಳು ಲೋಕಗಳೂ ಪೃಥಿವಿ, ಅಪ್ಪು, ತೇಜಸ್ಸು ವಾಯು ಆಕಾಶಗಳೆಂಬ ಪಂಚಭೂತಗಳೂ, ಸೂರ್ಯಚಂದ್ರರೂ, ನಕ್ಷತ್ರಗಳೂ ಕುಜಾದಿ ಇತರ ಗ್ರಹಗಳೂ ನಾನೇ ಆಗಿರುವೆ ಪ್ರಾಣ, ಕಾಲ, ಮೃತ್ಯು, ಅಮೃತ, ಭೂತ ಭವಿಷ್ಯತ್ ವರ್ತಮಾನ, ಸಂಪೂರ್ಣ ವಿಶ್ವ, ಸರ್ವವ್ಯಾಪಿ, ಈ ಹೆಸರಿನ ಎಲ್ಲ ವಸ್ತುಗಳೂ, ಕ್ರಿಯೆಗಳೂ, ಕಾಲಗಳೂ ನನ್ನ ರೂಪಗಳೇ

ಓಮಾದೌ ಚ ತಥಾಮಧ್ಯೇ ಭೂರ್ಭುವಸ್ಸ್ವಸ್ತಥೈವ ಚ ।
ತತಃ ಪರಂ ಪರ್ಯತೇ ಯದ್ಗಾಯತ್ರ್ಯಪಿ ತಥೈವ ಚ ॥ ೨೭ ॥

ತತೋಽಹಂ ವಿಶ್ವರೂಪೋಽಸ್ಮಿ ಶೀರ್ಷಂ ಚ ಜಪತಾಂ ಸದಾ ।
ಅಶಿತಂ ಪಾಯಿತಂ ಚಾಹಂ ಕೃತಂ ಚಾಕೃತಮಪ್ಯಹಂ ॥ ೨೮ ॥

ಪರಂ ಚೈವಾಪರಂ ಚಾಹಮಹಂ ಸರ್ವಪರಾಯಣಃ ।
ಅಹಂ ಜಗದ್ಧಿತಂ ದಿವ್ಯಮಕ್ಷರಂ ಸೂಕ್ಷ್ಮಮಪ್ಯಹಂ ॥ ೨೯ ॥

ಪ್ರಾಜಾಪತ್ಯಂ ಪವಿತ್ರಂ ಚ ಸೌಮ್ಯಮಗ್ರಾಹ್ಯಮಗ್ರಿಯಂ ।
ಅಹಮೇವೋಪಸಂಹರ್ತಾ ಮಹಾಗ್ರಾಸೋ ಜಗನ್ನಿಧಿಃ ॥ ೩೦ ॥

---

೨೭–೨೯ ಓಂಕಾರವೆನಿಸಿದ ಪ್ರಣವವೂ ನಾನೇ ಪ್ರಣವಾದಿಯಾದ ಗಾಯತ್ರಿಯೂ ನಾನೇ ಗಾಯತ್ರೀ ಮಂತ್ರದ ಆದಿಯಲ್ಲಿರುವ ಭೂರ್ಭುವಸ್ಸ್ವಃ ಎಂಬುದೂ, ಗಾಯತ್ರೀ ಮಂತ್ರದ ಅನಂತರ ಬರುವ "ಓಮಾಪೋ ಜ್ಯೋತೀ ರಸೋ" ಎಂಬ ಗಾಯತ್ರೀ ಶೀರ್ಷವೂ ನಾನೇ ಜಪಕ್ಕೆ ಯೋಗ್ಯವೆನಿಸಿದ ಇತರ ಮಂತ್ರಗಳೂ ನಾನೇ ತಿನ್ನುವ ವಸ್ತು, ಕುಡಿಯುವ ಪಾನೀಯ, ಕೃತಕವಾದ ಕರ್ಮ, ಅಕೃತವಾದ ಕರ್ಮ ಇವೆಲ್ಲವೂ ನಾನೇ ಆಗಿರುವೆ ಎಲ್ಲಕ್ಕೂ ಶ್ರೇಷ್ಠನಾದವನು ನಾನು ಎಲ್ಲಕ್ಕೂ ಬೇರೆಯಾದವನು ನಾನು ಸರ್ವಕ್ಕೂ ಆಶ್ರಯ ಕೊಡುವವನು ನಾನು ಜಗತ್ತಿಗೆ ಹಿತಕಾರಿಯಾದವನು ನಾನು ದೇವಲೋಕದಲ್ಲಿರುವ ವಸ್ತುಜಾಲವೆಲ್ಲ ನಾನೇ ನಾಶರಹಿತನೂ, ಸೂಕ್ಷ್ಮರೂಪಿಯೂ ನಾನೇ

೩೦–೩೧ ಪ್ರಜಾಪತಿ ದೇವತಾಕವಾದ ಮಂತ್ರವೂ, ಪವಿತ್ರವಾದ ಇತರ ವಸ್ತುಗಳೂ ಸೌಮ್ಯವಸ್ತುವೂ, ಯಾರಿಗೂ ದೊರೆಯದ ಪದಾರ್ಥವೂ, ಎಲ್ಲ ವಸ್ತುಗಳಿಗೂ ಮುಂದಾಳಾಗಿರುವ ಪದಾರ್ಥವೂ ನಾನೇ ಸಕಲ ಕಾರ್ಯಗಳನ್ನೂ ಫಲರೂಪದಿಂದ ಪೂರ್ಣಗೊಳಿಸುವವನೂ, ಸರ್ವವನ್ನೂ ಆಹಾರವನ್ನಾಗಿ ನುಂಗುವ

ಹೃದಯೇ ದೇವತಾತ್ವೇನ ಪ್ರಾಣತ್ವೇನ ಪ್ರತಿಷ್ಠಿತಃ ।
ಶಿರಶ್ಚೋತ್ತರತೋ ಯಸ್ಯ ಪಾದೌ ದಕ್ಷಿಣತಸ್ತಥಾ ॥ ೩೧ ॥

ಯಶ್ಚ ಸರ್ವೋತ್ತರಸ್ಸಾಕ್ಷಾದೋಂಕಾರೋऽಹಂ ತ್ರಿಮಾತ್ರಕಃ ।
ಊರ್ಧ್ವಮುನ್ನಾಮಯೇ ಯಸ್ಮಾದಧಶ್ಚಾಪನಯಾಮ್ಯಹಂ ॥ ೩೨ ॥

ತಸ್ಮಾದೋಂಕಾರ ಏವಾಹಮೇಕೋ ನಿತ್ಯಸ್ಸನಾತನಃ ।
ಋಚೋ ಯಜೂಂಷಿ ಸಾಮಾನಿ ಯೋ ಬ್ರಹ್ಮಾ ಯಜ್ಞಕರ್ಮಣಿ ॥ ೩೩ ॥

---

ಪ್ರಳಯಾಗ್ನಿಯೂ ಜಗತ್ತಿಗೆ ನಿಧಿಯಂತಿರುವವನೂ ನಾನೇ ಆಗಿರುವೆ ಸಮಸ್ತ ಪ್ರಾಣಿಗಳ ಹೃದಯದಲ್ಲಿ ನಾನೇ ದೇವತಾತ್ವದಿಂದಲೂ ಪ್ರಾಣರೂಪದಿಂದಲೂ ನೆಲಸಿರುವೆನು.

೩೩–೩೪ ಅ ಉ ಮ್ ಎಂಬ ತ್ರಿಮಾತ್ರಾಕಾಲಿಕವಾದ ಅಕ್ಷರಗಳಿಂದ ಕೂಡಿದ ಪ್ರಣವವು ನಾನು ಅದರಲ್ಲಿ ಆಕಾರವು ಉತ್ತರಭಾಗದ ಪ್ರಣವದ ಶಿರವು ಉಕಾರವು ದಕ್ಷಿಣ ದಿಕ್ಕಿನ ಪಾದಗಳು ಮಕಾರವೇ ಪ್ರಣವದ ಸರ್ವರೂಪ ಇಂತಹ ಪ್ರಣವವೇ ನಾನು ಪ್ರಣವಮಂತ್ರವನ್ನು ಸ್ವಾಧೀನಗೊಳಿಸಿರುವ ಯೋಗಿಗಳನ್ನು ಸ್ವರ್ಗಾದಿಯಾದ ಊರ್ಧ್ವಲೋಕಗಳಿಗೆ ಕಳುಹಿಸುವೆನು ಪಾಪಿಷ್ಠರಾದವರನ್ನು ಸ್ವರ್ಗದಿಂದ ಕೆಳಕ್ಕೆ ಅಂದರೆ ಪಾಪಭೂಯಿಷ್ಠವಾದ ಲೋಕಗಳಿಗೆ ತಳ್ಳಿಸುವೆನು. ನಿತ್ಯವಾದ ಪ್ರಣವವೇ ನಾನು (ಓಂಕಾರವೇ ನಾನು) ನಾಶರಹಿತನೂ ನಿತ್ಯನೂ, ಅನಾದಿಪುರುಷನೂ ನಾನೇ ಎನಿಸಿರುವೆ ಯಜ್ಞಕರ್ಮದಲ್ಲಿ ಋಗ್ವೇದಿಯಾದ ಬ್ರಹ್ಮನಂತೆ ನಾನಿದ್ದು ಯಜುಸ್ಸು, ಸಾಮ ಮುಂತಾದ ವೇದಜ್ಞರನ್ನು ಆಯಾ ಸ್ಥಾನಗಳಲ್ಲಿ ನಿಲ್ಲಿಸುವೆನು ಅದರಿಂದಲೇ ನಾನು ಪ್ರಣವಸ್ವರೂಪನು ತುಪ್ಪವೇ ಮೊದಲಾದ ಜಿಡ್ಡು ಪದಾರ್ಥಗಳು ದೇಹಸ್ಥವಾದ ಮಾಂಸಖಂಡಗಳಲ್ಲಿ ಸೇರಿ ಮತ್ತು ಆ ಸ್ನಿಗ್ಧವಾದ ಮಾಂಸಖಂಡವನ್ನು ದೇಹಾದ್ಯಂತವೂ ಹರಡಿಸುವಂತೆ ನಾನು

ಪ್ರಣಾಮ್ಯಯೇ ಬ್ರಾಹ್ಮಣೇಭ್ಯಸ್ತೇನಾಹಂ ಪ್ರಣವೋ ಮತಃ ।
ಸ್ನೇಹೋ ಯಥಾ ಮಾಂಸಪಿಂಡಂ ವ್ಯಾಪ್ನೋತಿ ವ್ಯಾಪಯತ್ಯಪಿ ॥ ೩೪ ॥

ಸರ್ವಾನ್ ಲೋಕಾನಹಂ ತದ್ವತ್ಸರ್ವವ್ಯಾಪೀ ತತೋಽಸ್ಮ್ಯಹಂ ।
ಬ್ರಹ್ಮಾ ಹರಿಶ್ಚ ಭಗವಾನಾದ್ಯಂತಂ ನೋಪಲಬ್ಧವಾನ್ ॥ ೩೫ ॥

ತಥಾನ್ಯೇ ಚ ಸುರಾ ಯಸ್ಮಾದನಂತೋಽಹಮತೋ ಮತಃ ।
ಗರ್ಭಜನ್ಮಜರಾಮೃತ್ಯುಸಂಸಾರಭಯಸಾಗರಾತ್ ॥ ೩೬ ॥

ತಾರಯಾಮಿ ಯತೋ ಭಕ್ತಾನ್ ತಸ್ಮಾತ್ತಾರೋಽಹಮೀರಿತಃ ।
ಚತುರ್ವಿಧೇಷು ದೇಹೇಷು ಜೀವತ್ವೇನ ವಸಾಮ್ಯಹಂ ॥ ೩೭ ॥

---

ಸರ್ವಗುಣಕರ್ಮಗಳಿಗೂ ಅಧಿಷ್ಠಾತೃವೆನಿಸಿ ಅನುಸ್ಯೂತವಾಗಿ ಪ್ರಪಂಚಾತ್ಮನಾ ಪರಿಣಾಮಗೊಳ್ಳುವೆ ಆದ್ದರಿಂದಲೇ ನನ್ನನ್ನು ಸರ್ವವ್ಯಾಪಿಯೆನ್ನುವರು

೩೫–೩೭ ಬ್ರಹ್ಮನೂ, ವಿಷ್ಣುವೂ, ಇತರ ಮಹಾಮಹಿಮರೂ ನಾನೇ ಆದರೆ ನನಗೆ ಆದಿಯಾಗಲಿ, ಅಂತವಾಗಲಿ ಇರುವುದಿಲ್ಲ ಸಮಸ್ತ ದೇವತೆಗಳೂ ನನ್ನಿಂದಲೇ ಉತ್ಪನ್ನರಾದವರಾದ್ದರಿಂದ ಅವರಿಗೆ ಆದ್ಯಂತಗಳುಂಟು ನನ್ನನ್ನೇ ಭಕ್ತಿಯಿಂದ ಧ್ಯಾನಿಸುವವರನ್ನು ನಾನು, ಗರ್ಭಗತವಾದ ಮತ್ತು ಹುಟ್ಟು, ಮುಪ್ಪು, ಮರಣ, ಸಾಂಸಾರಿಕವಾದ ಇತರ ಕ್ಲೇಶ, ಇವಾವುವೂ ಪೀಡಿಸದಂತೆ ಅವರನ್ನು ರಕ್ಷಿಸಿ ಸರ್ವವಿಧವಾದ ಅಪಾಯಗಳಿಂದಲೂ ಉದ್ಧರಿಸುವನು ಆದ್ದರಿಂದಲೇ ನನ್ನನ್ನು ತಾರನೆನ್ನುವರು ಜರಾಯುಜ, ಅಂಡಜ ಸ್ವೇದಜ ಉದ್ಭಿಜ್ಜಗಳೆಂಬ ನಾಲ್ಕು ವಿಧಗಳಾದ ದೇಹದಲ್ಲಿಯೂ ನಾನು ಜೀವರೂಪದಿಂದ ನೆಲಸಿರುವೆನು

**ಸೂಕ್ಷ್ಮೋ ಭೂತ್ವಾ ಚ ಹೃದ್ದೇಶೇ ಯತ್ತತ್ಸೂಕ್ಷ್ಮಂ ಪ್ರಕೀರ್ತಿತಃ ।**
**ಮಹಾತಪಸಿ ಮಗ್ನೇಭ್ಯೋ ಭಕ್ತೇಭ್ಯೋ ಯತ್ಪ್ರಕಾಶಯೇ ॥ ೩೮ ॥**

**ವಿದ್ಯುದ್ವದತುಲಂ ರೂಪಂ ತಸ್ಮಾದ್ವೈದ್ಯುತಮಸ್ಮ್ಯಹಂ ।**
**ಏಕ ಏವ ಯತೋ ಲೋಕಾನ್ ವಿಸೃಜಾಮಿ ಸೃಜಾಮಿ ಚ ॥ ೩೯ ॥**

**ವಿನಾಶಯಾಮಿ ಗೃಹ್ಣಾಮಿ ತಸ್ಮಾದೇಕೋಽಹಮೀಶ್ವರಃ ।**
**ನ ದ್ವಿತೀಯೋ ಯತಸ್ತಸ್ಥೇ ತುರೀಯಂ ಬ್ರಹ್ಮ ಯತ್ಸ್ವಯಂ ॥ ೪೦ ॥**

---

೩೮–೩೯ ಸಮಸ್ತಪ್ರಾಣಿಗಳ ದೇಹದ ಹೃದಯದಲ್ಲಿಯೂ ನಾನು ಸೂಕ್ಷ್ಮ ರೂಪದಿಂದಿರುವೆ ನನಗೆ ನಿಜವಾದ ಸೂಕ್ಷ್ಮತ್ವಸ್ಥೂಲತ್ವರೂಪವಾದ ಯಾವ ಗುಣಗಳಿಲ್ಲದಿದ್ದರೂ, ಅಂತಃಕರಣೋಪಾಧಿಕವಾಗಿ ಸ್ಥೂಲಸೂಕ್ಷ್ಮತ್ವಾದಿಗಳುಂಟು. "ಏಷೋಽಣುರಾತ್ಮಾ । ಅಣೋರಣೀಯಾನ್ಮಹತೋ ಮಹೀಯಾನ್" ಇತ್ಯಾದಿ ಶ್ರುತಿಗಳಲ್ಲಿ ಹೇಳುವ ಅಣುತ್ವ ರೂಪವಾದ ಧರ್ಮವೂ ಔಪಾಧಿಕವಾದದ್ದೇ (ಇದರಿಂದಲೇ ಸ್ವಾಭಾವಿಕವಾದ ಅಣುತ್ವವನ್ನು ಜೀವನಿಗೆ ಹೇಳುವವರ ಮತವು ಖಂಡನೀಯವಾದುದೇ ಸರಿ) ಅಂಧಕಾರದಲ್ಲಿ ಮಿಂಚು ಬಂದು ಇತರ ವಸ್ತು ಸ್ವರೂಪವನ್ನು ಪ್ರಕಾಶಗೊಳಿಸುವಂತೆ, ಅಜ್ಞಾನಿಗಳಿಗೆ (ಅವಿದ್ಯೆಯಲ್ಲಿ) ಮಿಂಚಿನ ರೂಪದಲ್ಲಿ (ಜ್ಞಾನರೂಪದಲ್ಲಿ) ತೋರಿ ಇತರ ವಸ್ತುಪ್ರಕಾಶಕನೆನಿಸುವೆ ಮತ್ತು ವಸ್ತುಗಳ ನೈಜಸ್ವರೂಪ ದರ್ಶನಕ್ಕೆ ಕಾರಣನಾಗುವೆ ಆದ್ದರಿಂದಲೇ ಶ್ರುತಿಗಳು ನನ್ನನ್ನು ವೈದ್ಯುತನೆನ್ನುವರು ಸಮಸ್ತ ಲೋಕವನ್ನೂ ಸೃಷ್ಟಿಮಾಡುವುದರಲ್ಲಿ, ನಾಶಗೊಳಿಸುವುದರಲ್ಲಿ, ಭಕ್ತರನ್ನು ಲೋಕಾಂತರಗಳಿಗೆ ಕಳುಹಿಸುವುದರಲ್ಲಿ ಇಷ್ಟಾರ್ಥಗಳನ್ನು ಕರುಣಿಸಿ ಅವರನ್ನು ತೃಪ್ತಿಪಡಿಸುವುದರಲ್ಲಿ ನಾನೇ ಸ್ವತಂತ್ರನು ಆದ್ದರಿಂದಲೇ ನಾನು ದ್ವಿತೀಯವಸ್ತು ರಹಿತನೆನಿಸಿರುವೆ

೪೦–೪೧ ಬ್ರಹ್ಮವಸ್ತುವೆನಿಸಿದ ನನಗಿಂತ ಬೇರೆಯಾದ ವಸ್ತುವೇ ಇಲ್ಲ ಸತ್ತ್ವ, ರಜಸ್ಸು, ತಮಸ್ಸು, ಈ ಗುಣತ್ರಯೋಪಾಧಿ ರೂಪಗಳೆನಿಸಿರುವ ಬ್ರಹ್ಮ,

ಭೂತಾನ್ಯಾತ್ಮನಿ ಸಂಹೃತ್ಯ ಹ್ಯೇಕೋ ರುದ್ರೋ ವಸಾಮ್ಯಹಂ ।
ಸರ್ವಾನ್ಲೋಕಾನ್ಯದೀಶೇಽಹಮೀಶಿನೀಭಿಶ್ಚ ಶಕ್ತಿಭಿಃ ॥ ೪೧ ॥

ಈಶಾನಮಸ್ಯ ಜಗತಃ ಸ್ವರ್ದೃಶಂ ಚಕ್ಷುರೀಶ್ವರಂ ।
ಈಶಾನಮಿಂದ್ರಂ ತಸ್ಥುಷಃ ಸರ್ವೇಷಾಮಪಿ ಸರ್ವದಾ ॥ ೪೨ ॥

ಈಶಾನಸ್ಸರ್ವವಿದ್ಯಾನಾಂ ಯದೀಶಾನಸ್ತದಸ್ಮ್ಯಹಂ ।
ಸರ್ವಭಾವಾನ್ನಿರೀಕ್ಷೇಽಹಮಾತ್ಮಜ್ಞಾನಂ ನಿರೀಕ್ಷಯೇ ॥ ೪೩ ॥

---

ವಿಷ್ಣು, ರುದ್ರರೆಂಬ ತ್ರಿಮೂರ್ತಿಗಳಿಗಿಂತಲೂ ಬೇರೆಯಾಗಿ ನಿರ್ಗುಣನೆನಿಸಿರುವ ತುರೀಯನೇ (ನಾಲ್ಕನೆಯವನೇ) ನಾನು (ಆತ್ಮಾವಾ ಇದಮೇಕವಾಗ್ರ ಆಸೀತ್ ಎಂಬ ಶ್ರುತಿಯು ಪರಬ್ರಹ್ಮವಸ್ತುವೊಂದೇ ನಿತ್ಯವು ಎಂದು ತಿಳಿಸುವುದು) ಸಮಸ್ತ ಪ್ರಾಣಿಗಳನ್ನೂ ಪ್ರಳಯಕಾಲದಲ್ಲಿ ಲೀನಮಾಡಿಕೊಂಡು ಕೇವಲ ರುದ್ರರೂಪ ದಿಂದಿರುವವನೂ ನಾನೇ ಮತ್ತು ಸಮಸ್ತ ಪ್ರಪಂಚವನ್ನೂ ತನ್ನ ಸಾಮರ್ಥ್ಯದಿಂದ ನಿಯಮನ ಮಾಡುವ ಮಾಯಾಶಕ್ತಿಯಿಂದ ಸಮಸ್ತಲೋಕಗಳನ್ನೂ ಹಿಡಿದು ನಿಲ್ಲಿಸುವೆನು. ಇದರಿಂದಲೇ ನನ್ನನ್ನು ಈಶಾನನೆಂದೂ ಕರೆಯುವರು.

೪೨–೪೩ ಇದೇ ಅರ್ಥವನ್ನೇ ಋಗ್ವೇದದ "ಅಭಿತ್ವಾ ಶೂರ ನೋನುಮೋ ದುಗ್ಧಾ ಇವ ಧೇನವಃ । ಈಶಾನಮಸ್ಯ ಜಗತಃ ಸ್ವರ್ದೃಶಮೀಶಾನಮಿಂದ್ರ ತಸ್ಥುಷಃ" ಎಂಬ ಶ್ರುತಿವಾಕ್ಯವು ವಿಸ್ತರಿಸಿ ಹೇಳುವುದು "ಪರಮೈಶ್ವರ್ಯಪ್ರದ ನಾದ ಪರಮೇಶ್ವರನು ಈ ಸ್ಥಾವರಜಂಗಮಾತ್ಮಕವಾದ ಪ್ರಪಂಚಕ್ಕೆ ಕಣ್ಣೆನಂತಿರು ವವನು ಸರ್ವಲೋಕವನ್ನು ನೋಡುವವನು ಈತನು ಸರ್ವಲೋಕನಿಯಾಮಕನು ಇವನೇ, ಲೋಕಾಭಿವ್ಯಂಜಕನೂ ಈ ಪರಬ್ರಹ್ಮವಸ್ತುವೇ" ಎಂದು ಮೇಲಿನ ಶ್ರುತಿಯು ಬೋಧಿಸುವುದು ಹಾಗೆಯೇ ಯಜುರ್ವೇದದಲ್ಲಿ ಕಂಡುಬರುವ "ಈಶಾನ ಸ್ಸರ್ವವಿದ್ಯಾನಾಮೀಶ್ವರಸ್ಸರ್ವಭೂತಾನಾಂ" ಇತ್ಯಾದಿ ಶ್ರುತಿಗಳು ಸರ್ವವಿದ್ಯೆಗಳಿಗೂ, ಸರ್ವಪ್ರಾಣಿಗಳಿಗೂ, ಸಕಲ ವೇದಗಳಿಗೂ, ತ್ರಿಮೂರ್ತಿಗಳಿಗೂ ಪರಬ್ರಹ್ಮನೇ ಅಧಿಪತಿಯೆಂದು ಸಾರುತ್ತಿರುವುದು ಈ ನಿದರ್ಶನಗಳಿಂದಲೇ ನನ್ನನ್ನು ಸಕಲ

ಯೋಗಂ ಚ ಗಮಯೇ ಯಸ್ಮಾದ್ಭಗವೋಽಹಮತೋ ಮತಃ ।
ಅಜಸ್ರಂ ಯಚ್ಚ ಗೃಹ್ಣಾಮಿ ವಿಸೃಜಾಮಿ ಸೃಜಾಮಿ ಚ ॥ ೪೪ ॥

ಸರ್ವಾನ್ಲೋಕಾನ್ನಾಸಯಾಮಿ ತೇನಾಹಂ ವೈ ಮಹೇಶ್ವರಃ ॥
ಮಹತ್ಯಾತ್ಮಜ್ಞಾನಯೋಗೈಶ್ವರ್ಯೈರ್ಯಸ್ತು ಮಹೀಯತೇ ॥ ೪೫ ॥

ಸರ್ವಾನ್ಭಾವಾನ್ಪರಿತ್ಯಜ್ಯ ಮಹಾದೇವಶ್ಚ ಸೋಽಸ್ಮ್ಯಹಂ ।
ಏಷೋಽಸ್ಮಿ ದೇವಃ ಪ್ರದಿಶೋಽನು ಸರ್ವಾಃ
ಪೂರ್ವೋ ಹಿ ಜಾತೋಽಸ್ಮ್ಯಹಮೇವ ಗರ್ಭೇ ।
ಅಹಂ ಹಿ ಜಾತಶ್ಚ ಜನಿಷ್ಯಮಾಣಃ
ಪ್ರತ್ಯಙ್ಮುಖಾಸ್ತಿಷ್ಠತಿ ಸರ್ವತೋಮುಖಃ ॥ ೪೬ ॥

---

ಲೋಕನಿಯಾಮಕನೆಂದು ಅರಿಯಬಹುದು ಅದೂ ಅಲ್ಲದೆ ಅತೀತವಾದ ಮತ್ತು ಅನಾಗತವಾದ ಸಮಸ್ತ ಪದಾರ್ಥಗಳನ್ನೂ ನಾನು ನೋಡುತ್ತೇನೆ ಆತ್ಮ ಸಾಕ್ಷಾತ್ಕಾರಸಾಧಕವಾದ ಜ್ಞಾನಯೋಗವನ್ನೂ ನಾನು ಉಪದೇಶಮಾಡುವೆನು.

೪೪–೪೫ ಈ ವಿಧವಾದ ಸಕಲಮಹಿಮೆಗಳೂ ನನ್ನಲ್ಲಿರುವುದರಿಂದ ನನ್ನನ್ನೇ ಭಗವಂತನೆಂದೂ ಹೇಳುವರು ಶ್ರೀ, ಕಾಮ, ಮಹಿಮೆ, ವೀರ್ಯ, ಕೀರ್ತಿ ಇತ್ಯಾದಿ ಭಗಶಬ್ದವಾಚ್ಯವಾದ ಸಂಪೂರ್ಣಾರ್ಥವೂ ನನ್ನಲ್ಲಿರುವುದರಿಂದ ನನಗೆ ಆ ಹೆಸರು ಸಲ್ಲುವುದು ನನ್ನಿಂದ ಸೃಷ್ಟವಾದ ಸಕಲ ವಸ್ತು ಜಾಲವನ್ನೂ ನಾನೇ ರಕ್ಷಿಸುವೆನು ಮತ್ತು ಲಯಗೊಳಿಸುವೆನು ಸರ್ವಪ್ರಾಣಿಗಳ ಸೃಷ್ಟಿಸ್ಥಿತಿಲಯಗಳಿಗೂ ಕಾರಣನಾದ ನನ್ನನ್ನು ಮಹೇಶ್ವರನೆಂದೂ ಹೇಳುವರು ಬ್ರಹ್ಮವಿಷ್ಣ್ವಾದಿ ದೇವತಾಶ್ರೇಷ್ಠರಲ್ಲಿ ಆತ್ಮಜ್ಞಾನ, ಯೋಗಜ್ಞಾನ, ಐಶ್ವರ್ಯ ಇತ್ಯಾದಿ ಸೋಪಾಧಿಕವಾದ ಮತ್ತು ನಿರುಪಾಧಿಕವಾದ ಧರ್ಮಗಳಿಂದ ಮೆರೆಯುವ ನಾನೇ ಮಹಾದೇವನೆನಿಸಿರುವೆನು ನೀನು ಈಗ ನನ್ನ ಸ್ವರೂಪವನ್ನು ಆ ರೀತಿ ತಿಳಿಯುವನಾಗು.

೪೬ ಶ್ರೀರಾಮನೇ, ಕೇಳು ನಿನ್ನ ಮುಂದೆ ಸಗುಣನಾಗಿ ನಿಂತಿರುವ ನಾನೇ ನಿರ್ಗುಣಬ್ರಹ್ಮನು ಸರ್ವವ್ಯಾಪಕನು ಹಿಂದೆ ಉತ್ಪನ್ನನಾದ ...



ವಿಶ್ವತಶ್ಚಕ್ಷುರುತ ವಿಶ್ವತೋಮುಖೋ
ವಿಶ್ವತೋಬಾಹುರುತ ವಿಶ್ವತಸ್ಪಾತ್ ।
ಸಂಬಾಹುಭ್ಯಾಂ ನಮತಿ ಸಂಪತತ್ರೈ-
ದ್ಯಾರ್ವಾಭೂಮೀ ಜನಯನ್ದೇವ ಏಕಃ ॥ ೪೭ ॥

---

ಪ್ರಾಣಿಗಳೂ, ಈಗ ಗರ್ಭಗತವಾಗಿರುವ ಎಲ್ಲಾ ಜಂತುಗಳೂ, ಮುಂದೆ ಪುಟ್ಟವಾಗಲಿರುವ ಎಲ್ಲಾ ಪ್ರಾಣಿವರ್ಗವೂ ನಾನೇ ಆಗಿರುವೆನು ಅವಿದ್ಯಾಸಂಪರ್ಕದಿಂದ ಈ ರೀತಿ ನಾನಾ ಆಕಾರವನ್ನು ಪಡೆಯುವನಾದರೂ, ವಾಸ್ತವಿಕವಾಗಿ ಮಾಯಾ ಮತ್ತು ಅದರ ಕಾರ್ಯಗಳಿಗೆ ಸಂಪೂರ್ಣವಿಮುಖನೆನಿಸಿ, ಸತ್ಯಜ್ಞಾನಾನಂದ ರೂಪನಾಗಿ ಸ್ವಪ್ರಕಾಶಕನೆನಿಸಿರುವೆನು ಸರ್ವತೋ ಮುಖನೂ ಸರ್ವವ್ಯಾಪಿಯೂ ನಾನೆಂದು ತಿಳಿ (ಏಷ ಹಿ ದೇವಃ ಪ್ರದಿಶೋನುಸರ್ವಾಃ ಎಂಬ ಯಜುಃ ಶ್ರುತಿಯ ಅರ್ಥವನ್ನೇ ಈ ಶ್ಲೋಕವು ಪ್ರತಿಪಾದಿಸುತ್ತಿದೆ)

೪೭ ಮಾಯಾವಿಶಿಷ್ಟ ಬ್ರಹ್ಮವಸ್ತುವಿಗೆ ಪ್ರಪಂಚದ ತಾದಾತ್ಮ್ಯವನ್ನು ವಿವರಿಸುತ್ತಾ, ನನ್ನನ್ನು ಪ್ರಪಂಚದ ಕಣ್ಣೆಂದೂ, ನನ್ನನ್ನೇ ಪ್ರಪಂಚದ ಮುಖ, ಬಾಹು, ಕಾಲುಗಳು ಎಂದೂ ಹೇಳುವರು ಸರ್ವವ್ಯಾಪಿಯಾದ ನನಗೆ ಕೈಕಾಲು ಕಣ್ಣುಗಳ ವಿಭಾಗ ಕ್ರಮವು ಅಸದಳವಾಗಿರುವುದರಿಂದ ಈರೀತಿ ಶ್ರುತಿಯು ಪ್ರತಿಪಾದಿಸುತ್ತಿದೆ ನನಗೆ ಸರಿಸಮನಾದ ಮತ್ತೊಂದು ವಸ್ತುವೇ ಇಲ್ಲದಿರುವುದರಿಂದ ನನ್ನನ್ನೇ ದ್ವಿತೀಯ ವಸ್ತುರಹಿತನಾದ ಪರಬ್ರಹ್ಮನೆಂದೂ ಹೇಳುವರು ನಾನು ಎರಡು ಕೈಗಳಿಂದಲೂ, ಎರಡು ಕಾಲುಗಳಿಂದಲೂ ಅಂದರೆ ಜ್ಞಾನ ಮತ್ತು ಅಜ್ಞಾನಗಳೆಂಬ ಕೈಗಳಿಂದಲೂ, ಧರ್ಮ ಮತ್ತು ಅಧರ್ಮಗಳೆಂಬ ಕಾಲುಗಳಿಂದಲೂ, ಭೂಲೋಕ ಸ್ವರ್ಗಲೋಕಾದಿಗಳನ್ನು ಸೃಷ್ಟಿಸಿ ಸಕಲ ಲೋಕಕಾರಣನೆಂದೂ ಲೋಕರಕ್ಷಕನೆಂದೂ ಹೆಸರು ಪಡೆದಿರುವೆನು (ಈ ಶ್ಲೋಕ ಪೂರ್ತಿಯಾಗಿ ಒಂದು ಶ್ರುತಿ ವಾಕ್ಯವೇ ಆಗಿದೆ)

ವಾಲಾಗ್ರಮಾತ್ರಂ ಹೃದಯಸ್ಯ ಮಧ್ಯೇ
ವಿಶ್ವಂ ದೇವಂ ಜಾತವೇದಂ ವರೇಣ್ಯಂ ।
ಮಾಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾ-
ಸ್ತೇಷಾಂ ಶಾಂತಿಶ್ಶಾಶ್ವತೀ ನೇತರೇಷಾಂ ॥ ೪೮ ॥

ಅಹಂ ಯೋನಿಂ ಯೋನಿಮಧಿತಿಷ್ಠಾಮಿ ಚೈಕೋ
ಮಯೈವೇದಂ ಪೂರ್ಣಂ ಪಂಚವಿಧಂ ಚ ಸರ್ವಂ
ಮಾಮೀಶಾನಂ ಪುರುಷಂ ದೇವಮೀಡ್ಯಂ
ವಿಚಾರ್ಯಮಾಣಂ ಶಾಂತಿಮತ್ಯಂತಮೇತಿ ॥ ೪೯ ॥

---

೪೮ ನಾನು ಸರ್ವವ್ಯಾಪಕನಾದರೂ, ಉಪಾಧಿವಶದಿಂದ ನನಗೆ ಒಂದು ಪರಿಮಾಣವುಂಟು ಆ ಕ್ರಮದಿಂದ ನನ್ನನ್ನು ಕೇಶಾಗ್ರಪರಿಮಾಣದವನೆಂದು ಭಾವಿಸಿ ವಿಶ್ವಾಶ್ರಯನಾದರೂ ಸರ್ವರ ಹೃದಯ ಮಧ್ಯನಿವಾಸಿಯು ಎಂದರಿತು, ಸಮಸ್ತೈಶ್ವರ್ಯಕ್ಕೂ, ಇಷ್ಟಾರ್ಥಪ್ರಾಪ್ತಿರೂಪವಾದ ಸಂಪೂರ್ಣ ವರಪ್ರದಾನಕ್ಕೂ ಇವನೇ ಆಶ್ರಯನು ಎಂಬುದಾಗಿ ತಿಳಿಯುತ್ತಾ, ಯಾರು ಜೀವೇಶ್ವರರಿಗೆ ಭೇದವನ್ನು ಕಲ್ಪಿಸದೆ, ಸರ್ವ ಹೃದಯಗತನಾದ ನನ್ನನ್ನು ಶ್ರವಣಾದಿಸಾಧನದ್ವಾರಾ ಸಾಕ್ಷಾತ್ಕಾರ ಮಾಡಿಕೊಳ್ಳುವರೋ, ಅಂತಹವರಿಗೆ ನಿರುಪಾಧಿಕವಾದ ಮೋಕ್ಷಸುಖವು ಲಭಿಸುವುದು ಜೀವೇಶ್ವರರಿಗೆ ಔಪಾಧಿಕವಾಗಿರುವ ಭೇದವನ್ನೇ ಪರಮಾರ್ಥವನ್ನಾಗಿ ತಿಳಿದು, ನನ್ನ ಸ್ವರೂಪವನ್ನು ಅನ್ಯಥಾ ಭಾವಿಸಿ, ಅನುಸಂಧಾನ ಮಾಡುವವರಿಗೆ ಎಂದಿಗೂ ಮನಶ್ಶಾಂತಿಯು ಲಭಿಸಲಾರದು ಇದು ನಿಜ

೪೯ ನಾನು ಲೋಕದಲ್ಲಿ ಉತ್ಪತ್ತಿಯಾಗುವ ವಸ್ತುವಿನಲ್ಲಿಯೂ ಅಪಾರಮಾರ್ಥಿಕವಾಗಿ ಉತ್ಪತ್ತಿಯನ್ನು ತೋರ್ಪಡಿಸುವೆನು ಮುತ್ತಿನ ಚಿಪ್ಪಿನಲ್ಲಿ ಬೆಳ್ಳಿಯ ಭ್ರಾಂತಿಬರುವಂತೆ ಉತ್ಪತ್ತಿಕಾರಣವಲ್ಲದ ಯೋನಿಯಲ್ಲಿ ಉತ್ಪತ್ತ್ಯಾಶ್ರಯವನ್ನು ಕಲ್ಪಿಸುವುದೂ ಭ್ರಾಂತಿಯೇ ಏಕರೂಪನಾದ ನನ್ನಿಂದಲೇ ಈ ಪಂಚಭೂತಾತ್ಮಕವಾದ ಪ್ರಪಂಚವು ಪರಿಪೂರ್ಣವೆನಿಸಿರುವುದು ನಾನೇ ದೇ ದೇವನು, ಅನಾದಿ ಪುರುಷನು, ಸರ್ವಪೂಜ್ಯನು ಹೀಗೆಂದು ಯಾರು ನಿತ್ಯವೂ ನನ್ನನ್ನೇ ಧ್ಯಾನಿಸುತ್ತಿರು

ಪ್ರಾಣೇಷ್ವಂತರ್ಮನಸೋ ಲಿಂಗಮಾಹು-
ರ್ಯಸ್ಮಿನ್ನಶನಾಯಾ ಚ ತೃಷ್ಣಾ ಕ್ಷಮಾ ಚ ।
ತೃಷ್ಣಾಂ ಛಿತ್ವಾ ಹೇತುಜಾಲಸ್ಯ ಮೂಲಂ
ಬುದ್ಧ್ಯಾ ಚಿತ್ತಂ ಸ್ಥಾಪಯಿತ್ವಾ ಮಯಿಹ || ೫೦ ||
ಏವಂ ಯೋ ಮಾಂ ಧ್ಯಾಯಮಾನಾ ಭಜಂತೇ
ತೇಷಾಂ ಶಾಂತಿಶ್ಶಾಶ್ವತೀ ನೇತರೇಷಾಂ ||
ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ।
ಆನಂದಂ ಬ್ರಹ್ಮ ಮಾಂ ಜ್ಞಾತ್ವಾ ನ ಬಿಭೇತಿ ಕುತಶ್ಚನ || ೫೧ ||

---

ವರೋ ಅವರೇ ನಿಜವಾದ ಶಾಂತಿಯನ್ನು ಪಡೆಯುವರು ನನ್ನ ಸ್ವರೂಪವನ್ನು ಪೂರ್ಣವಾಗಿ ಅರಿಯದವರಿಗೆ ಎಂದಿಗೂ ಚಿತ್ತಶುದ್ಧಿಯು ಲಭಿಸಲಾರದು

೫೦ ಪ್ರಾಣವಾಯುಗಳಲ್ಲಿಯೂ ಬಹಿರಿಂದ್ರಿಯಗಳಲ್ಲಿಯೂ ಮನಸ್ಸು ಪ್ರವೇಶಿಸಿ, ಬೇಕಾದ ವಸ್ತುಗಳನ್ನು ತಿನ್ನುವಂತಹ ಹಸಿವನ್ನೂ, ಮಿತಿಮೀರಿದ ದುರಾಸೆಯನ್ನೂ ಕಲ್ಪಿಸುವುದು ಆಸಗೆ ವಶನಾಗಿ ಅದರ ವೇಗವನ್ನು ತಡೆಯಲಾರದೆ ಜೀವನ ಮಾರ್ಗವನ್ನೇ ಮುಖ್ಯಧ್ಯೇಯವನ್ನಾಗಿ ಭಾವಿಸಿ ಅದರಂತೆ ನಡೆಯುವವನಿಗೆ ಎಂದಿಗೂ ಮನಶ್ಶುದ್ಧಿಯೊದಗಲಾರದು ಅಂತಃಕರಣ ಪರಿಣಾಮರೂಪಗಳಾದ ಕಾಮಾದಿಗಳು ಬ್ರಹ್ಮಸಾಕ್ಷಾತ್ಕಾರಕ್ಕೆ ಅಡ್ಡಿಯನ್ನು ತರುವುವು ಆದ್ದರಿಂದ ಎಲ್ಲಕ್ಕೂ ಮೊದಲು ಮನೋನಿಗ್ರಹವನ್ನು ಮಾಡಬೇಕು ಆಸೆಯೆಂಬುದು ಶುಭಾಶುಭ ಫಲಗಳಿಗೆ ಕಾರಣಭೂತವಾದ ಧರ್ಮಾಧರ್ಮಗಳನ್ನು ತಡೆಯುವ ಶಕ್ತಿಯುಳ್ಳದ್ದು ಆದ್ದರಿಂದಲೇ ಮೊದಲು ಆಶಾಭಾವನೆಯನ್ನು ದೂರಮಾಡಬೇಕು ಅನಂತರ ವ್ಯವಸಾಯಾತ್ಮಿಕವಾದ ಬುದ್ಧಿಶಕ್ತಿಯಿಂದ ನನ್ನ ಸ್ವರೂಪವನ್ನು ಪಾರಮಾರ್ಥಿಕವಾಗಿ ತಿಳಿದು, ಅದನ್ನೇ ಅನುಸಂಧಾನ ಮಾಡುವವನು ನಿಜವಾದ ಶಾಂತಿಯನ್ನು ಪಡೆಯುವನು

೫೧ ಯಾರು ಈರೀತಿ ಇಂದ್ರಿಯನಿಗ್ರಹಮಾಡಿ ಆತ್ಮಧ್ಯಾನಾಸಕ್ತರಾಗುವುದಿಲ್ಲವೋ, ಅಂತಹವರಿಗೆ ಎಂದಿಗೂ ಶಾಂತಿಯು ಲಭಿಸಲಾರದು ತತ್ತ್ವಯುಕ್ತ

ಶ್ರುತ್ವೇತಿ ದೇವಾ ಮದ್ವಾಕ್ಯಂ ಕೈವಲ್ಯಜ್ಞಾನಮುತ್ತಮಂ ।
ಜಪಂತೋ ಮಮ ನಾಮಾನಿ ಮಮ ಧ್ಯಾನಪರಾಯಣಾಃ ॥ ೫೨ ॥

ಸರ್ವೇ ತೇ ಸ್ವಸ್ವದೇಹಾಂತೇ ಮತ್ಸಾಯುಜ್ಯಂ ಗತಾಃ ಪುರಾ ।
ತತೋ ಯೇ ಪರಿದೃಶ್ಯಂತೇ ಪದಾರ್ಥಾ ಮದ್ವಿಭೂತಯಃ ॥ ೫೩ ॥

ಮಯ್ಯೇವ ಸಕಲಂ ಜಾತಂ ಮಯಿ ಸರ್ವಂ ಪ್ರತಿಷ್ಠಿತಂ ।
ಮಯಿ ಸರ್ವಂ ಲಯಂ ಯಾತಿ ತದ್ಬ್ರಹ್ಮಾಸ್ಮ್ಯಹಮವ್ಯಯಂ ॥ ೫೪ ॥

---

ವಾದ ಬ್ರಹ್ಮಾನಂದವನ್ನು ಅವರು ಎಂದೂ ಅನುಭವಿಸಲಾರರು ಏಕೆಂದರೆ ಪರಬ್ರಹ್ಮವಸ್ತು ಸ್ವರೂಪವನ್ನು ಕೇವಲ ಅಭಿಧಾವೃತ್ತಿಯಿಂದ ಅಂದರೆ ಬಾಯಿಮಾತಿನಿಂದ ವರ್ಣಿಸಲು ಸಾಧ್ಯವಿಲ್ಲ ಪರಿಪಕ್ವವಲ್ಲದ ಮನಸ್ಸಿನಿಂದ ಊಹಿಸಲು, ಅದು ಆಗಲಾರದು "ಮನಸೈವಾನುದ್ರಷ್ಟವ್ಯಂ'' ಎಂಬ ಶ್ರುತಿಯಲ್ಲಿ ಪರಿಪಕ್ವವಾದ ಮನಸ್ಸಿನಿಂದ ಆತ್ಮಸಾಕ್ಷಾತ್ಕಾರವು ಲಭಿಸುವುದು ಎಂಬರ್ಥವು ತೋರುತ್ತಿದೆ ಗುರೂಪದೇಶ, ಚಿತ್ತಶುದ್ಧಿ, ಇಂದ್ರಿಯನಿಗ್ರಹ ಇತ್ಯಾದಿ ಸಾಧನೆಗಳಿಂದ ಯಾರು ಸಚ್ಚಿದಾನಂದ ಸ್ವರೂಪನಾದ ನನ್ನನ್ನು ಅರಿಯುವರೋ, ಅವರು ಮತ್ತಾರಿಗೂ ಹೆದರಬೇಕಾಗಿಲ್ಲ ಆತ್ಮಜ್ಞಾನಿಗಳಿಗೆ ಭಯವೆಂಬುದೇ ಎಂದೂ ಇರಲಾರದು ಕೇವಲ ಆನಂದಾನುಭವವೇ ಬ್ರಹ್ಮಜ್ಞಾನದ ಫಲ

೫೨–೫೪ ಶ್ರೀರಾಮನೇ ಕೇಳು, ಈ ರೀತಿ ನಾನು ದೇವತೆಗಳಿಗೆ ಆತ್ಮಸ್ವರೂಪವನ್ನು ವಿವರಿಸಿದ ಮೇಲೆ, ಅವರು ಇತರ ವಿಷಯಸುಖಗಳಿಗೆ ಮನಗೊಡದೆ ನನ್ನ ಪವಿತ್ರನಾದ ನಾಮಗಳನ್ನೇ ಧ್ಯಾನಿಸಿ ಪಾರಾಯಣ ಮಾಡುತ್ತಾ, ನನ್ನ ಅನುಗ್ರಹಬಲದಿಂದ ಅವರು ಪಾಂಚಭೌತಿಕವಾದ ದೇಹತ್ಯಾಗ ಮಾಡಿ ಶಿವಸಾಯುಜ್ಯವನ್ನು ಪಡೆದರು ಆದ್ದರಿಂದ ಪ್ರಪಂಚದಲ್ಲಿ ಯಾವ ಯಾವ ವಸ್ತುಗಳು ಇಂದ್ರಿಯಗೋಚರಗಳಾಗಿರುತ್ತವೆಯೋ, ಅವೆಲ್ಲವೂ ನನ್ನ (ಪರಬ್ರಹ್ಮ) ಪರಿಣಾಮಗಳೆಂದು ತಿಳಿ ನನ್ನಿಂದಲೇ ಅವು ವಸ್ತುರೂಪಗಳಾಗಿ ಪ್ರತಿಫಲಿಸಿ ಕೊನೆಗೆ ನನ್ನಲ್ಲಿಯೇ ಲಯಹೊಂದತಕ್ಕವುಗಳೆಂಬುದನ್ನೂ ಎಂದೂ ಮರೆಯಬೇಡ ಪ್ರಪಂಚ

ಅಣೋರಣೀಯಾನಹಮೇವ ತದ್ವ-
ನ್ಮಹಾನಹಂ ವಿಶ್ವಮಹಂ ವಿಶುದ್ಧಃ ।
ಪುರಾತನೋಽಹಂ ಪುರುಷೋಽಹಮೀಶೋ
ಹಿರಣ್ಮಯೋಽಹಂ ಶಿವರೂಪಮಸ್ಮಿ ॥ ೨೫ ॥

ಅಪಾಣಿಪಾದೋಽಹಮಚಿಂತ್ಯಶಕ್ತಿಃ
ಪಶ್ಯಾಮ್ಯಚಕ್ಷುಸ್ಸ ಶೃಣೋಮ್ಯಕರ್ಣಃ ।
ಅಹಂ ವಿಜಾನಾಮಿ ವಿವಿಕ್ತರೂಪೋ
ನ ಚಾಸ್ತಿ ವೇತ್ತಾ ಮಮ ಚಿತ್ಸದಾಹಂ ॥ ೨೬ ॥

---

ದಲ್ಲಿ ಆವಿರ್ಭವಿಸಿರುವ ಸಕಲವಸ್ತುಗಳೂ ನನ್ನಿಂದಲೇ ಪ್ರಕಾಶಕ್ಕೆ ಬರುವುವು ಇದುವರೆಗೂ ಅವುಗಳನ್ನು ರಕ್ಷಿಸಿದವನೂ ನಾನೇ ಕೊನೆಗೆ ಅವು ನನ್ನಲ್ಲಿಯೇ ಲೀನವಾಗುವುವು ಹೀಗೆ ವಿಶ್ವದ ಸೃಷ್ಟಿಸ್ಥಿತಿಲಯಗಳಿಗೆ ಮೂಲಕಾರಣನಾದ ನನ್ನನ್ನು ಸರಿಯಾಗಿ ಅರಿಯುವುದೇ ಬ್ರಹ್ಮಜ್ಞಾನವು ಅದೇ ಕೈವಲ್ಯಜ್ಞಾನ ಅಂದರೆ ಶುದ್ಧಬ್ರಹ್ಮಪ್ರಾಪ್ತಿಸಾಧನಭೂತವಾದ ತಿಳುವಳಿಕೆ (ಇದು ಉಪನಿಷತ್ತಿನ ವಾಕ್ಯದಿಂದ ತಿಳಿದು ಬರುವ ಅರ್ಥ)

೨೫ ನಿಜವಾಗಿಯೂ ನಾನು ಅಪರಿಚ್ಛಿನ್ನನು ಅಂದರೆ ಯಾವ ವಿಧವಾದ ಅಳತೆ ಪ್ರಮಾಣವಿಲ್ಲದವನು ಆದರೂ ಉಪಾಧಿವಶದಿಂದ ಸೂಕ್ಷ್ಮವಸ್ತುಗಳೆಲ್ಲಕ್ಕಿಂತಲೂ ಸೂಕ್ಷ್ಮನಾಗಿಯೂ ಕಾಣುವೆನು ಮಹತ್ಪರಿಮಾಣ ವಸ್ತುಗಳಿಗಿಂತ ದೊಡ್ಡವನಾಗಿಯೂ ತೋರುವೆನು ಮಿಥ್ಯಾಜಾತವಾದ ಈ ಪ್ರಪಂಚದ ಸಂಬಂಧವೇ ನನಗಿಲ್ಲದಿರುವುದರಿಂದ ನಾನು ವಿಶುದ್ಧನೆನಿಸಿರುವೆ ಆದರೆ ನನ್ನನ್ನು ಅನಾದಿ ಪುರುಷನು, ಈಶ್ವರನು, ಹಿರಣ್ಮಯ ಶರೀರಿಯು, ಶಿವರೂಪನು ಎಂಬ ನಾಮಾಂತರಗಳಿಂದ ವ್ಯವಹರಿಸುವರು ವಸ್ತುತಃ ನನಗೆ ಯಾವ ರೂಪ ಗುಣಾದಿಗಳೂ ಇಲ್ಲ

೨೬ ನನಗೆ ಕೈಕಾಲುಗಳಿಲ್ಲ ಆದರೂ ಅವುಗಳ ಕಾರ್ಯವನ್ನು ನಡೆಸುವೆನು ಕಣ್ಣಿಲ್ಲದಿದ್ದರೂ ವಸ್ತುಗಳನ್ನು ನೋಡುವೆನು. ಕಿವಿಯಿಲ್ಲದಿದ್ದರೂ ಕೇಳು

ವೇದೈರನೇಕೈರಹಮೇವ ವೇದ್ಯೋ
ವೇದಾಂತಕೃದ್ವೇದವಿದೇವ ಚಾಹಂ
ನ ಪುಣ್ಯಪಾಪೇ ಮಮ ನಾಸ್ತಿ ನಾಶೋ
ನ ಜನ್ಮದೇಹೇಂದ್ರಿಯಬುದ್ಧಿರಸ್ತಿ || ೫೭ ||

ನ ಭೂಮಿರಾಪೋ ನ ಚ ವಹ್ನಿರಸ್ತಿ
ನ ಚಾನಿಲೋ ಮೇಽಸ್ತಿ ನ ಚಾಂಬರಂ ಚ ।
ಏವಂ ವಿದಿತ್ವಾ ಪರಮಾತ್ಮರೂಪಂ
ಗುಹಾಶಯಂ ನಿಷ್ಕಲಮದ್ವಿತೀಯಂ || ೫೮ ||

---

ವೆನು ನಿರ್ದಿಷ್ಟವಾದ ಯಾವ ಆಕಾರವಿಲ್ಲದಿದ್ದರೂ, ನಾನು ಜಗತ್ಸ್ವರೂಪ ವನ್ನೆಲ್ಲಾ ಅರಿಯುವೆನು ಕಾರಣವಿಲ್ಲದೆ ಕಾರ್ಯವನ್ನು ನಡೆಸುವ ವಿಚಿತ್ರಶಕ್ತಿಯು ನನ್ನಲ್ಲಿರುವುದು ಇಷ್ಟಾದರೂ ನನ್ನನ್ನು ಮಾತ್ರ ಯಾರೂ ಸರಿಯಾಗಿ ಅರಿಯ ಲಾರರು ಏಕೆಂದರೆ ನಾನು ನಿರ್ಮಲ ಜ್ಞಾನಸ್ವರೂಪನು ಅದು ಸುಲಭವಾಗಿ ಎಲ್ಲರಿಗೂ ಗೋಚರವಾಗಲಾರದು

೫೭ ನಾನು ಸಗುಣನೆನಿಸಿ ವೇದವಚನಗಳಿಂದ ಇಂದ್ರಾದಿ ರೂಪಗಳಲ್ಲಿ ವ್ಯವಹರಿಸಲ್ಪಡುವೆನು ಹಾಗೆಯೇ ವೇದಾಂತಗಳಿಗೆ ಕರ್ತೃವೂ ಆಗಿರುವೆನು ವೇದ ವೇದ್ಯನೂ, ವೇದಕರ್ತೃವೂ, ವೇದವೇತ್ತೃನೂ ನಾನೇ ಎಂದು " ಯಸ್ಯ ನಿಶ್ವಸಿತಂ ವೇದಾ ಋಚಸ್ಸಾಮಾನಿ ಜಜ್ಞಿರೇ " ಇತ್ಯಾದಿ ಶ್ರುತಿಗಳು ಸದಾ ಉದ್ಘೋಷಿಸುತ್ತಿವೆ. ನಿರ್ಗುಣನೆನಿಸಿ ವೇದಾಂತಜನ್ಯ ಜ್ಞಾನಕ್ಕೆ ವಿಷಯನೆನಿಸಿರುವೆನು ನನಗೆ ಅವಿದ್ಯಾ ಜನ್ಯವಾದ ಪುಣ್ಯಪಾಪಗಳಾಗಲಿ, ಜನನಮರಣಗಳಾಗಲಿ, ಇಂದ್ರಿಯ ವ್ಯಾಪಾರ ಗಳಾಗಲಿ ಇರುವುದಿಲ್ಲ ನಿತ್ಯಶುದ್ಧ ಬುದ್ಧಸ್ವರೂಪನು ನಾನು

೫೮ ಭೂಮಿ, ನೀರು, ಅಗ್ನಿ, ವಾಯು, ಆಕಾಶಗಳೆಂಬ ಈ ಪಂಚಭೂತ ಗಳೂ ವಾಸ್ತವಿಕವಾದುವುಗಳಲ್ಲ ಅವು ನಾನಲ್ಲ ಮಾಯಾ ವಿಶಿಷ್ಟ ಬ್ರಹ್ಮವಸ್ತುವಿನ ಪರಿಣಾಮಗಳು ಅವು ಆದ್ದರಿಂದಲೇ ನನ್ನನ್ನು ಗುಹಾಶಯನೆನ್ನುವರು ಗುಹೆ

ಸಮಸ್ತಸಾಕ್ಷಿಂ ಸದಸದ್ವಿಹೀನಂ
ಪ್ರಯಾತಿ ಶುದ್ಧಂ ಪರಮಾತ್ಮರೂಪಂ ।

ಏವಂ ಮಾಂ ತತ್ತ್ವತೋ ವೇತ್ತಿ ಯಸ್ತು ರಾಮ ಮಹಾಮತೇ
ಸ ಏವ ನಾನ್ಯೋ ಲೋಕೇಷು ಕೈವಲ್ಯಂ ಫಲಮಶ್ನುತೇ || ೫೯ ||

ಇತಿ ಶ್ರೀಪದ್ಮಪುರಾಣೇ ಶ್ರೀಶಿವಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಶಿವರಾಘವಸಂವಾದೇ ವಿಭೂತಿವಿಸ್ತರ-
ಯೋಗೋ ನಾಮ

|| ಷಷ್ಠೋಽಧ್ಯಾಯಃ ||

---

ಯೆಂದರೆ ಇಲ್ಲಿ ಅಜ್ಞಾನ, ಅವಿದ್ಯೆಯೆಂದರ್ಥ ವಾಸ್ತವಿಕವಾಗಿ ನಾನು ನಿರ್ವಿಕಾರ ಸ್ವರೂಪನು ಸಜಾತೀಯ ವಿಜಾತೀಯ ಸ್ವಗತಭೇದ ರಹಿತನಾದವನು, ಹೀಗೆಂದು ಪರಮಾತ್ಮಸ್ವರೂಪವನ್ನು ಮನಸಾ ಧ್ಯಾನಿಸಿ ತನ್ಮೂಲಕ ಜ್ಞಾನಿಯೆನಿಸಬೇಕು

೬೦ ನಾನು ಪ್ರಪಂಚ ವ್ಯಾಪಾರವನ್ನೆಲ್ಲಾ ನೋಡುವವನು ಮತ್ತು ತಿಳಿಯುವವನ ಕಾರ್ಯಕಾರಣಗಳಿಂದ ವಿರಹಿತನಾದವನು ದೋಷರಹಿತನು ಶುದ್ಧ ಸ್ವರೂಪನು ಹೀಗೆಂದು ಪರಬ್ರಹ್ಮಸ್ವರೂಪವನ್ನು ಮನನಮಾಡುತ್ತಾ ಯಾರು ಸರ್ವದಾ ಆತ್ಮಧ್ಯಾನಾಸಕ್ತರಾಗುವರೋ, ಅವರು ಕೈವಲ್ಯವನ್ನು ಅಂದರೆ ಜನನ ಮರಣಾದಿ ರಹಿತವಾದ ಕೇವಲ ಆನಂದ ಸ್ವರೂಪವನ್ನು ಪಡೆಯುವರು ಮಹಾ ಪ್ರಾಜ್ಞನಾದ ಶ್ರೀರಾಮನೇ, ತಾತ್ತ್ವಿಕವಾದ ಈ ನನ್ನ ಸ್ವರೂಪವನ್ನು ಯಾರು ಗುರೂಪದೇಶಾದಿಗಳಿಂದ ಅರಿಯುವರೋ, ಅವರಿಗೆ ಪರಮಪದವಿಯು ದೊರೆಯುವುದು ಎಂದು ಪರಮೇಶ್ವರನು ಶ್ರೀರಾಮನಿಗೆ ಆತ್ಮಸ್ವರೂಪವನ್ನು ವಿವರವಾಗಿ ಉಪದೇಶಿಸಿದನು

ಇಲ್ಲಿಗೆ ಪದ್ಮಪುರಾಣದ ಶ್ರೀ ಶಿವಗೀತೋಪನಿಷತ್ತಿನಲ್ಲಿ ವಿಭೂತಿ ವಿಸ್ತಾರಯೋಗವೆಂಬ ಆರನೆಯ ಅಧ್ಯಾಯವು ಸಮಾಪ್ತವಾದ ದು

॥ ಶ್ರೀಃ ॥

# ಶ್ರೀ ಶಿವಗೀತಾ

## ॥ ಸಪ್ತಮೋಽಧ್ಯಾಯಃ ॥

॥ ಶ್ರೀರಾಮ ಉವಾಚ ॥

ಭಗವನ್ ಯನ್ಮಯಾ ಪೃಷ್ಟಂ ತತ್ತಥೈವ ಸ್ಥಿತಂ ವಿಭೋ ।
ಅತ್ರೋತ್ತರಂ ಮಯಾ ಲಬ್ಧಂ ತ್ವತ್ತೋ ನೈವ ಮಹೇಶ್ವರ ॥ ೧ ॥

ಪರಿಚ್ಛಿನ್ನಪರೀಮಾಣೇ ದೇಹೇ ಭಗವತಸ್ತವ ।
ಉತ್ಪತ್ತಿಃ ಪಂಚಭೂತಾನಾಂ ಸ್ಥಿತಿರ್ವಾ ವಿಲಯಃ ಕಥಂ ॥ ೨ ॥

---

## ಏಳನೆಯ ಅಧ್ಯಾಯ

೧-೨ ಮಹೇಶ್ವರನಿಂದ ಪ್ರೋಕ್ತವಾದ (ಸಮಸ್ತ) ವಿಭೂತಿವಿಸ್ತರ ಯೋಗವನ್ನು ಕೇಳಿ ಶ್ರೀರಾಮನು ತೃಪ್ತನಾಗದೆ ಮತ್ತೆ ಮಹಾದೇವನನ್ನು ಕುರಿತು, "ಸರ್ವವ್ಯಾಪಿಯಾದ ಪರಶಿವನೇ, ಪರಿಚ್ಛಿನ್ನಪ್ರಮಾಣನಾಗಿ ಕಂಡುಬರುವ ನೀನು ಈ ಅಪರಿಮಿತವಾದ ಜಗತ್ತಿಗೆ ಕಾರಣನು ಹೇಗಾಗುವೆ? ಈ ಪಂಚಭೂತಗಳು ನಿನ್ನಿಂದ ಹುಟ್ಟಿದುದು ಹೇಗೆ?" ಎಂದು ಮೊದಲೇ ಪ್ರಾರ್ಥಿಸಿದ್ದೆನು ಇಲ್ಲಿನವರೆಗೂ ಅದಕ್ಕೆ ನಿನ್ನಿಂದ ಉತ್ತರ ಬರಲಿಲ್ಲ ಅಳತೆಗೆ ಸಿಕ್ಕುವಂತಹ ದೇಹಧಾರಿಯಾಗಿ ನಿಂತಿರುವ ನಿನ್ನ ಈ ಆಕಾರದಿಂದ ಪಂಚಭೂತಗಳು ಉತ್ಪತ್ತಿಯಾಗುವುದು ಹೇಗೆ? ಜಗತ್ತೆಲ್ಲಾ ನನ್ನಲ್ಲಿಯೇ ಅಡಗುವುದೆಂದು ಹೇಳಿದೆಯಲ್ಲವೆ? ಅದನ್ನು ನಾನು ಹೇಗೆ ನಂಬಲಿ?

ಸ್ವಸ್ವಾಧಿಕಾರಸಂಬದ್ಧಾಃ ಕಥಂ ನಾಮ ಸ್ಥಿತಾಸ್ಸುರಾಃ ।
ತೇ ಸರ್ವೇ ತ್ವಂ ಕಥಂ ದೇವ ಭುವನಾನಿ ಚತುರ್ದಶ ॥ ೩ ॥

ತ್ವತ್ತಶ್ಶ್ರುತ್ವಾಪಿ ದೇವಾತ್ರ ಸಂದೇಹೋ ಮೇ ಮಹಾನಭೂತ್ ।
ಅಪ್ರತ್ಯಾಯಿತಚಿತ್ತಸ್ಯ ಸಂಶಯಂ ಛೇತ್ತುಮರ್ಹಸಿ ॥ ೪ ॥

॥ ಶ್ರೀ ಮಹಾದೇವ ಉವಾಚ ॥

ವಟಬೀಜೇಽತಿಸೂಕ್ಷ್ಮೇಽಪಿ ಮಹಾವಟತರುರ್ಯಥಾ ।
ಸರ್ವದಾಸ್ತೇಽನ್ಯಥಾ ವೃಕ್ಷಃ ಕುತ ಆಯಾತಿ ತದ್ವದ ॥ ೫ ॥

ತದ್ವನ್ಮಮ ತನೌ ರಾಮ ಭೂತಾನಾಮಾಗತಿರ್ಲಯಃ ।
ಮಹಾಸೈಂಧವಪಿಂಡೋಽಪಿ ಜಲೇ ಕ್ಷಿಪ್ತೋ ವಿಲೀಯತೇ ॥ ೬ ॥

---

೩–೪ ಒಂದೊಂದು ಅಧಿಕಾರದಲ್ಲಿ ನಿಂತು, ಆಯಾ ಕಾರ್ಯಗಳನ್ನು ಭಯಭಕ್ತಿಯಿಂದ ನಡೆಸುತ್ತಿರುವ ಇಂದ್ರಾದಿ ದೇವತೆಗಳೆಲ್ಲರೂ ನನ್ನ ಪ್ರತಿಬಿಂಬಗಳೆಂದು ಹೇಳಿದೆಯಲ್ಲವೆ? ಆಗ ಚತುರ್ದಶಲೋಕಾತ್ಮಕವಾದ ಈ ಬ್ರಹ್ಮಾಂಡವೇ ನಾನು ಎಂದು ಹೇಳಿದ ಮಾತು ಹೇಗೆ ಸಮಂಜಸವಾದೀತು? ಜಡಾತ್ಮಕವಾದ ಪ್ರಪಂಚಕ್ಕೂ ಚೈತನ್ಯಸ್ವರೂಪನಾದ ನಿನಗೂ ಅಭೇದವು ಹೇಗೆ ಸಲ್ಲುವುದು? ಇಲ್ಲಿನವರೆಗೂ ನಿನ್ನ ಮಹಿಮೆಯನ್ನೆಲ್ಲಾ ಕೇಳಿದರೂ, ಈ ಸೃಷ್ಟಿಸ್ಥಿತಿ ಲಯಕಾರ್ಯಗಳು ಹೇಗೆ ನಡೆಯುವುವೆಂಬುದನ್ನು ಮಾತ್ರ ನಾನು ಸರಿಯಾಗಿ ಅರಿಯಲಿಲ್ಲ ಆ ವಿಷಯದಲ್ಲಿ ನನಗೆ ಬಹಳ ಸಂದೇಹವಿದೆ ನಂಬಿಕೆಯಿಲ್ಲದ ನನ್ನ ಮನಸ್ಸಿಗೆ ನಿಶ್ಚಯಜ್ಞಾನ ಹುಟ್ಟುವಂತೆ ನಿನ್ನ ಉಪದೇಶಾಮೃತವನ್ನು ನನಗೆ ನೀಡು ಎಂದು ಬೇಡಿಕೊಂಡನು

೫–೬ ಶ್ರೀರಾಮನ ಆ ಸಂದೇಹವನ್ನು ಪರಿಹರಿಸಲೋಸುಗ ಮಹಾದೇವನು ಕೆಲವು ಲೌಕಿಕ ದೃಷ್ಟಾಂತಗಳನ್ನು ಕೇಳಿ ಸ್ವಸ್ವರೂಪವನ್ನು ವಿವರಿಸತೊಡಗಿದನು "ಪ್ರಿಯ ವತ್ಸನೇ, ಕೇಳು ಲೋಕದಲ್ಲಿ ಎಂತಹ ಮಹಾವಸ್ತುವಿಗೂ ಉತ್ಪತ್ತಿ

**ದೃಶ್ಯತೇ ಚ ಪುನಃ ಪಾಕಾತ್ತತ ಆಯಾತಿ ಪೂರ್ವವತ್ ।**
**ಪ್ರಾತಃ ಪ್ರಾತರ್ಯಥಾ ಲೋಕೋ ಜಾಯತೇ ಸೂರ್ಯಮಂಡಲಾತ್ ॥ ೭ ॥**

**ಏವಂ ಮತ್ತೋ ಜಗತ್ಸರ್ವಂ ಜಾಯತೇಽಸ್ತಿ ವಿಲೀಯತೇ**
**ಮಯ್ಯೇವ ಸಕಲಂ ರಾಮ ತದ್ವಿಜಾನೀಹಿ ಸುವ್ರತ ॥ ೮ ॥**

---

ಕಾರಣವಾಗತಕ್ಕದ್ದು ಅಲ್ಪಪರಿಮಾಣವುಳ್ಳ ವಸ್ತುವೆಂಬುವನ್ನು ನೀನರಿಯೆಯಾ! ವಿಶಾಲವಾಗಿ ಬೆಳೆದು ಬಹುಕಾಲವಿರುವ ಆಲದ ಮರದ ಬೀಜವು ಎಷ್ಟು ಅಲ್ಪವಾದದ್ದು ನೋಡು! ಅಂತಹ ಬೀಜವೊಂದಿಲ್ಲದಿದ್ದರೆ ಮಹಾವೃಕ್ಷವು ಬೆಳೆದೀತೆ? ಯಾವಾಗಲೂ ಸದ್ವಸ್ತುವಿನಿಂದಲೇ ಅಸದ್ವಸ್ತುಗಳ ಉತ್ಪತ್ತಿ, ಅಸದ್ವಸ್ತುವಿನಿಂದ ಏನೂ ಉದ್ಭವಿಸಲಾರದು ಹಾಗೆ ಅಸದ್ವಸ್ತುವಿನಿಂದ ವಸ್ತ್ವಂತರಗಳು ಹುಟ್ಟುವ ಪಕ್ಷಕ್ಕೆ ಶಶಶೃಂಗಾದಿಗಳೂ (ಮೊಲದ ಕೊಂಬು) ಉತ್ಪತ್ತಿಸ್ಥಾನಗಳಾಗಬೇಕಾಗುತ್ತವೆ "ನಾಸತೋ ವಿದ್ಯತೇ ಭಾವೋ ನಾ ಭಾವೋ ವಿದ್ಯತೇ ಸತಃ" ಎಂದು ಸ್ಮೃತಿಯಿರುವುದರಿಂದ ಸಕಲ ಜಗದುತ್ಪತ್ತಿಗೆ ಸದ್ವಸ್ತುವೊಂದು ಬೇಕು ಅದು ರೂಪಾಂತರವನ್ನು ಉಪಾಧಿ ಭೇದದಿಂದ ಪಡೆದರೂ ಸ್ವಸ್ವರೂಪವನ್ನು ಎಂದಿಗೂ ಬಿಡುವುದಿಲ್ಲ ದೊಡ್ಡದಾದ ಉಪ್ಪಿನ ಹರಳು ನೀರಿನ ಸಂಪರ್ಕದಿಂದ ಸ್ವಲ್ಪ ಹೊತ್ತಿನಲ್ಲಿಯೇ ಅದೂ ನೀರೇ ಆಗುವುದು ಪಾಕಕ್ರಮದಲ್ಲಿ ಅದೇ ನೀರನ್ನು ಪೂರ್ವದ ಉಪ್ಪಿನ ಸ್ಥಿತಿಗೆ ತರಬಹುದು ಅದೇ ರೀತಿ ಸಮಸ್ತ ಜಗತ್ತೂ ಸತ್ಪದಾರ್ಥವೊಂದರಿಂದಲೇ ಉದ್ಭವಿಸುವುದು ಅಥವಾ ಆ ಸದ್ವಸ್ತುವೇ ಜಗದಾತ್ಮನಾ ಪರಿಣತಿಗೊಳ್ಳುವುದು ಕಾಲಾಂತರದಲ್ಲಿ ಅಲ್ಲಿ ಉತ್ಪನ್ನವಾದ ಜಗತ್ತು ಅದರಲ್ಲಿಯೇ ಲೀನವಾಗಿ ಕೊನೆಯಲ್ಲಿ ಉಳಿಯುವುದು ಮೂಲಭೂತವಾದ ಸದ್ವಸ್ತುವೊಂದೇ ಎಂಬುದನ್ನು ಗಮನಿಸಬೇಕು ಮತ್ತು ಪ್ರತಿದಿನವೂ ಪ್ರಾತಃಕಾಲ ಸೂರ್ಯನಿಂದ ಬೆಳಕು ಬಂದು ರಾತ್ರಿಯಲ್ಲಿ ಅದೇ ಬೆಳಕು ಸೂರ್ಯನಲ್ಲಿಯೇ ಲಯಹೊಂದುವಂತೆ, ಈ ಜಡವಾದ ಜಗತ್ತೆಲ್ಲವೂ ನನ್ನಿಂದಲೇ ಪ್ರಕಾಶಿತವಾಗಿ ಕೊನೆಗೆ ನನ್ನಲ್ಲಿಯೇ ಲೀನವಾಗುವುದು."

॥ ಶ್ರೀರಾಮ ಉವಾಚ ॥

ಕಥಿತೇಽಪಿ ಮಹಾಭಾಗ ದಿಗ್ಜಡಸ್ಯ ಯಥಾ ದಿಶಿ ।
ನಿವರ್ತತೇ ಭ್ರಮೋ ನೈವ ತದ್ವನ್ಮಮ ಕರೋಮಿ ಕಿಂ ॥ ೯

॥ ಶ್ರೀ ಮಹಾದೇವ ಉವಾಚ ॥

ಮಯಿ ಸರ್ವಂ ಯಥಾ ರಾಮ ಜಗದೇತಚ್ಚರಾಚರಂ ।
ವರ್ತತೇ ತದ್ದರ್ಶಯಾಮಿ ನ ದ್ರಷ್ಟುಂ ಕ್ಷಮತೇ ಭವಾನ್ ॥ ೧೦ ॥

ದಿವ್ಯಂ ಚಕ್ಷುಃ ಪ್ರದಾಸ್ಯಾಮಿ ತುಭ್ಯಂ ದಶರಥಾತ್ಮಜ ।
ತೇನ ಪಶ್ಯ ಭಯಂ ತ್ಯಕ್ತ್ವಾ ಮತ್ತೇಜೋಮಂಡಲಂ ಧ್ರುವಂ ॥ ೧೧ ॥

---

೯–೧೦ ಹೀಗೆ ದೃಷ್ಟಾಂತಪೂರ್ವಕವಾಗಿ ಹೇಳುತ್ತಿದ್ದರೂ ಶ್ರೀರಾಮನಿಗೆ, ಜಗತ್ತಿಗೆ ಪರಶಿವನು ಅಧಿಷ್ಠಾನನು ಎಂಬ ಮಾತಿನಲ್ಲಿ ನಂಬಿಕೆ ಬರಲಿಲ್ಲ ಅದಕ್ಕಾಗಿ ಪುನಃ ಮಹಾದೇವನನ್ನು ಕುರಿತು ಶ್ರೀರಾಮನು "ಮಹಾಮಹಿಮನೇ ನಾನು ಕೇವಲ ದಿಗ್ಭ್ರಮೆಯುಳ್ಳ ಮೂಢನು ಎಷ್ಟೇ ವಿಶದವಾಗಿ ನಿನ್ನಿಂದ ಹೇಳಲ್ಪಟ್ಟರೂ ಅದು ನನಗೆ ಅರ್ಥವಾಗದು ಇಂತಹ ಭ್ರಾಂತಿಯು ನನ್ನಿಂದ ತೊಲಗುವಂತೆ ನನಗೆ ಉಪದೇಶಮಾಡು" ಎಂದು ಪುನಃ ಕೇಳಿಕೊಂಡನು ಆಗ ಜಗನ್ನಿಯಾಮಕನೂ, ಲೀಲಾಮೂರ್ತಿಯೂ ಆದ ಮಹೇಶ್ವರನು ಹೀಗೆಂದನು "ಶ್ರೀರಾಮನೇ, ಈ ಚರಾಚರಾತ್ಮಕವಾದ ಜಗತ್ತೆಲ್ಲವೂ ನನ್ನಲ್ಲಿಯೇ ಇದಯೆಂದು ಹೇಳಿದೆನಲ್ಲವೆ ! ಅದನ್ನು ಈಗ ಪ್ರತ್ಯಕ್ಷವಾಗಿ ನಿನಗೆ ತೋರ್ಪಡಿಸುವೆನು ಆದರೆ ಅದನ್ನು ಈ ನಿನ್ನ ಚರ್ಮಚಕ್ಷುಸ್ಸಿನಿಂದ ನೋಡಲಾರೆ ಅದಕ್ಕಾಗಿ ಪರೋಕ್ಷಾಪರೋಕ್ಷವಿಷಯ ದರ್ಶನಸಾಮರ್ಥ್ಯವುಳ್ಳ ದಿವ್ಯ ಚಕ್ಷುಸ್ಸನ್ನು ನಿನಗೆ ಕರುಣಿಸುವೆನು ಅದರ ಸಹಾಯದಿಂದ ಆ ವಿಶ್ವರೂಪವನ್ನು ನೀನು ನೋಡಬಹುದು ಹೆದರಬೇಡ

೧೧–೧೨ ನನ್ನ ದೇಹವು ತೇಜೋಮಂಡಲದಂತಿರುವುದು ಅದನ್ನು ಚರ್ಮಚಕ್ಷುಸ್ಸಿನಿಂದ ಎಂದಿಗೂ ನೋಡಲಾಗುವುದಿಲ್ಲ ದಿವ್ಯಚಕ್ಷುಸ್ಸಾದರೋ

ನ ಚರ್ಮಚಕ್ಷುಷಾ ದ್ರಷ್ಟುಂ ಶಕ್ಯತೇ ಮಾಮಕಂ ಮಹಃ ।
ನರೇಣ ವಾ ಸುರೇಣಾಪಿ ತನ್ಮದನುಗ್ರಹಂ ವಿನಾ ॥ ೧೨ ॥

॥ ಸೂತ ಉವಾಚ ॥

ಇತ್ಯುಕ್ತ್ವಾ ಪ್ರದದೌ ತಸ್ಮೈ ದಿವ್ಯಂ ಚಕ್ಷುರ್ಮಹೇಶ್ವರಃ ।
ಅಥ ಪ್ರಾದರ್ಶಯತ್ತಸ್ಮೈ ವಕ್ತ್ರಂ ಪಾತಾಳಸನ್ನಿಭಂ ॥ ೧೩ ॥

ವಿದ್ಯುತ್ಕೋಟಿಪ್ರಭಂ ದೀಪ್ತಮತಿಭೀಮಂ ಭಯಾವಹಂ ।
ತದ್ದೃಷ್ಟ್ವೈವ ಭಯಾದ್ರಾಮೋ ಜಾನುಭ್ಯಾಮವನಿಂ ಗತಃ ॥ ೧೪ ॥

ಪ್ರಣಮ್ಯ ದಂಡವದ್ಭೂಮೌ ತುಷ್ಟಾವ ಚ ಪುನಃ ಪುನಃ ।
ಅಥೋತ್ಥಾಯ ಮಹಾವೀರೋ ಯಾವದೇವ ಪ್ರಪಶ್ಯತಿ ॥ ೧೫ ॥

ವಕ್ತ್ರಂ ಪುರಭಿದಸ್ತಾವದಂತರ್ಬ್ರಹ್ಮಾಂಡಕೋಟಯಃ ।
ಚಟಕಾ ಇವ ಲಕ್ಷ್ಯಂತೇ ಜ್ವಾಲಾಮಾಲಾಭಯಾಕುಲಾಃ ॥ ೧೬ ॥

---

ನನ್ನನುಗ್ರಹವಿಲ್ಲದೆ ಯಾರಿಗೂ ಲಭಿಸದು ಆದ್ದರಿಂದಲೇ ಈ ನನ್ನ ವಿಶ್ವರೂಪವು ಯಾವ ದೇವತೆಗಳಿಗೂ ಎಂತಹ ಮಾನವರಿಗೂ ಗೋಚರವಾಗಲಾರದು ಅಂತಹ ಅಪೂರ್ವ ಲಭ್ಯವಾದ ವಿಶ್ವರೂಪ ದರ್ಶನವು ನಿನಗೆ ಲಭಿಸುವಂತೆ ಈಗ ಕರುಣಿಸುವೆನು "

೧೩–೧೪ ಹೀಗೆಂದು ಕೂಡಲೇ ಶ್ರೀರಾಮನಿಗೆ ದಿವ್ಯಚಕ್ಷುಸ್ಸನ್ನು ಕರುಣಿಸಿ ಪಾತಾಳಲೋಕದಂತೆ ವಿಶಾಲವಾದ ತನ್ನ ಬಾಯನ್ನು ತೆರೆದನು ಆ ಕೋಟಿದ ಮಿಂಚುಗಳ ಕಾಂತಿಯನ್ನು ಎರಚುತ್ತಾ ನೋಡುವುದಕ್ಕೆ ಅತಿಭಯಂಕರವಾಗಿತ್ತು ಅಂತಹ ಘೋರ ತೇಜಸ್ಸನ್ನು ಕಂಡೊಡನೆಯೇ ಶ್ರೀರಾಮನು ಹೆದರಿಹೋದನು ಮಂಡಿಯೂರಿ ಕೆಳಕ್ಕೆ ಕುಳಿತು ನಮಸ್ಕರಿಸಿಬಿಟ್ಟನು

೧೫–೧೬ ಪದೇ ಪದೇ ದೀರ್ಘದಂಡ ನಮಸ್ಕಾರಮಾಡಿದನು. ಶಿವಾನುಗ್ರಹ ಬಲದಿಂದ ಮತ್ತೆ ಧೈರ್ಯತಂದುಕೊಂಡು ಎದ್ದು ನಿಂತು ತ್ರಿಪುರಾರಿಯಾದ ಪರಶಿವನ

ಮೇರುಮಂದರವಿಂಧ್ಯಾದ್ಯಾ ಗಿರಯಸ್ಸಪ್ತಸಾಗರಾಃ ।
ದೃಶ್ಯಂತೇ ಚಂದ್ರಸೂರ್ಯಾದ್ಯಾಃ ಪಂಚಭೂತಾನಿ ತೇ ಸುರಾಃ ॥ ೧೭ ॥

ಅರಣ್ಯಾನಿ ಮಹಾನಾಗಾ ಭುವನಾನಿ ಚತುರ್ದಶ ।
ಪ್ರತಿಬ್ರಹ್ಮಾಂಡಮೇವಂ ತದ್ದೃಷ್ಟ್ವಾ ದಶರಥಾತ್ಮಜಃ ॥ ೧೮ ॥

ಸುರಾಸುರಾಣಾಂ ಸಂಗ್ರಾಮಾನ್ ತತ್ರ ಪೂರ್ವಾಪರಾನಪಿ ।
ವಿಷ್ಣೋರ್ದಶಾವತಾರಾಂಶ್ಚ ತತ್ಕರ್ತವ್ಯಾನಿ ಚ ದ್ವಿಜಾಃ ॥ ೧೯ ॥

ಪರಾಭವಾಂಶ್ಚ ದೇವಾನಾಂ ಪುರದಾಹಂ ಮಹೇಶಿತುಃ ।
ಉತ್ಪದ್ಯಮಾನಾನುತ್ಪನ್ನಾನ್ ಸರ್ವಾನಪಿ ವಿನಶ್ಯತಃ ॥ ೨೦ ॥

---

ಬಾಯನ್ನು ನೋಡುತ್ತಾನೆ! ಅದರಲ್ಲಿ ಅನೇಕ ಬ್ರಹ್ಮಾಂಡಕೋಟಿಗಳು ಒಂದೊಂದು ಗುಬ್ಬಚ್ಚಿಯಂತೆ ಕಂಡು ಬಂದುವು ಅವೂ ಸಹ ತೇಜೋಮಯಗಳಾಗಿ ಅತ್ಯಂತ ಭಯಪ್ರದಗಳಾಗಿದ್ದುವು

೧೭–೧೮ ಮೇರು, ಮಂದರ, ವಿಂಧ್ಯ, ಮುಂತಾದ ಮಹಾ ಮಹಾ ಪರ್ವತಗಳೂ, ವಿಶಾಲವಾದ ಸಪ್ತಸಮುದ್ರಗಳೂ, ಚಂದ್ರಸೂರ್ಯರೂ, ಪೃಥಿವ್ಯಾದಿ ಪಂಚಮಹಾಭೂತಗಳೂ ಶ್ರೀರಾಮನಿಗೆ ಅಲ್ಲಿ ತೋರಿಬಂದುವು ಮಹಾರಣ್ಯಗಳೂ, ಅಷ್ಟದಿಗ್ಗಜಗಳೂ, ಹದಿನಾಲ್ಕು ಲೋಕಗಳೂ ಒಂದೊಂದು ಬ್ರಹ್ಮಾಂಡದಲ್ಲಿ ಬೇರೆ ಬೇರೆಯಾಗಿ ಕಾಣತೊಡಗಿದುವು

೧೯–೨೦ ಹಿಂದೆ ನಡೆದ ದೇವಾಸುರ ಯುದ್ಧವೂ, ಮುಂದೆ ನಡೆಯಬಹುದಾದ ರಾಮಾಯಣದ ಯುದ್ಧವೂ ಅಲ್ಲಿ ಕಂಡುಬಂದಿತು ವಿಷ್ಣುವಿನ ಮತ್ಸ್ಯಾದಿ ದಶಾವತಾರಗಳೂ, ಅವುಗಳಿಂದ ನಡೆಯುವ ಕಾರ್ಯವಿಶೇಷಗಳೂ ಕಾಣುತ್ತಿದ್ದುವು ದೇವತೆಗಳು ರಾಕ್ಷಸರಿಂದ ಸೋತು ಪರಾಭವ ಹೊಂದುತ್ತಿದ್ದುದೂ, ಮಹೇಶ್ವರನೇ ಸಾಕ್ಷಾತ್ತಾಗಿ ತ್ರಿಪುರಗಳನ್ನು ಧ್ವಂಸಮಾಡಿದುದೂ, ಮತ್ತು ಹಿಂದೆ ನಡೆದ ಮುಂದೆ ನಡೆಯುವ ಎಲ್ಲ ವಿನಾಶಕಾರಕ ಸನ್ನಿವೇಶಗಳು ಆ ಪರಶಿವನ ಮುಖದಲ್ಲಿ ಶ್ರೀರಾಮನಿಗೆ ತೋರಿಬರುತ್ತಿದ್ದುವು

ದೃಷ್ಟ್ವಾ ರಾಮೋ ಭಯಾವಿಷ್ಟಃ ಪ್ರಣನಾಮ ಮುಹುರ್ಮುಹುಃ ।
ಉತ್ಪನ್ನತತ್ತ್ವಜ್ಞಾನೋಽಪಿ ಬಭೂವ ರಘುನಂದನಃ || ೨೧ ||

ಅಥೋಪನಿಷದಾಂ ಸಾರೈರರ್ಥೈಃಸ್ತುಷ್ಟಾವ ಶಂಕರಂ ||

|| ಶ್ರೀರಾಮ ಉವಾಚ ||

ದೇವ ಪ್ರಪನ್ನಾರ್ತಿಹರ ಪ್ರಸೀದ
ಪ್ರಸೀದ ವಿಶ್ವೇಶ್ವರ ವಿಶ್ವರೂಪ ।
ಪ್ರಸೀದ ಗಂಗಾಧರ ಚಂದ್ರಮೌಳೀ
ಮಾಂ ತ್ರಾಹಿ ಸಂಸಾರಭಯಾದನಾಥಂ || ೨೨ ||

---

೨೧ ಈ ದೃಶ್ಯವನ್ನು ನೋಡಿದ ಶ್ರೀರಾಮನಿಗೆ ಮರುಕ್ಷಣದಲ್ಲಿಯೇ ತತ್ತ್ವ ಜ್ಞಾನವು-ಟಾಯಿತು ಕಣ್ಣಿಗೆ ಕಾಣುವ ಸಮಸ್ತ ಪ್ರಪಂಚವೂ ಪರಮಾತ್ಮನ ಹೃದಯಾಕಾಶದಲ್ಲಿ ಲೀನವಾಗುವುದೆಂದೂ, ಜಗತ್ತು ಎಂದಿಗೂ ಮಿಥ್ಯಾಭೂತವಾದದ್ದೆಂದೂ, ಬ್ರಹ್ಮನು ನಿರ್ಗುಣನೆಂದೂ ಆಗ ಶ್ರೀರಾಮನಿಗೆ ತಿಳಿವಳಿಕೆಯುಂಟಾಯಿತು ಅವನ ಅಜ್ಞಾನವು ದೂರವಾಯಿತು ಕೂಡಲೆ ಭಯಾವಿಷ್ಟನಾಗಿ ಉಪನಿಷದರ್ಥ ಪ್ರತಿಪಾದ್ಯವಾದ ಶ್ಲೋಕಸಮೂಹದಿಂದ ಮಹಾದೇವನನ್ನು ಈ ರೀತಿ ಸ್ತುತಿಸತೊಡಗಿದನು

೨೨ ಮಹೇಶ್ವರನೇ, ನೀನು ಕಷ್ಟಕ್ಕೆ ಸಿಕ್ಕಿದ ನಿನ್ನ ಭಕ್ತವೃಂದದ ಕಷ್ಟವನ್ನು ನಿವಾರಿಸುವವನು ಸಮಸ್ತ ಲೋಕಕ್ಕೂ ಒಡೆಯನೆನಿಸಿದವನು ಪ್ರಪಂಚವೇ ನಿನ್ನ ರೂಪವಾಗಿರುವುದು ದೇವ ಗಂಗೆಯನ್ನೂ, ಜಗತ್ತನ್ನೇ ಆಹ್ಲಾದಗೊಳಿಸುವ ಚಂದ್ರಕಲೆಯನ್ನೂ ಶಿರಸ್ಸಿನಲ್ಲಿ ಧರಿಸಿರುವ ಪರಮೇಶ್ವರನೇ, ಸಂಸಾರ ದುಃಖದಲ್ಲಿ ಮುಳುಗಿ ನರಳುತ್ತಿರುವ ಅನಾಥನೆನಿಸಿದ ನನ್ನನ್ನು ಸಲಹು ನನ್ನಲ್ಲಿ ಪ್ರಸನ್ನನಾಗು ಅನುಗ್ರಹವಿಟ್ಟು ನನ್ನನ್ನು ಉದ್ಧರಿಸು.

ತ್ವತ್ತೋ ಹಿ ಜಾತಂ ಜಗದೇತದೀಶ
ತ್ವಯ್ಯೇವ ಭೂತಾನಿ ವಸಂತಿ ನಿತ್ಯಂ ।
ತ್ವಯ್ಯೇವ ಶಂಭೋ ವಿಲಯಂ ಪ್ರಯಾಂತಿ
ಭೂಮೌ ಯಥಾ ವೃಕ್ಷಲತಾದಯೋಽಪಿ ॥ ೨೩ ॥

ಬ್ರಹ್ಮೇಂದ್ರರುದ್ರಾಗ್ನಿಮರುದ್ಗಣಾಶ್ಚ
ಗಂಧರ್ವಯಕ್ಷಾಸುರಸಿದ್ಧಸಂಘಾಃ ।
ಗಂಗಾದಿನದ್ಯೋ ವರುಣಾಲಯಾಶ್ಚ
ವಿಶಂತಿ ಶೂಲಿನ್ ತವ ವಕ್ತ್ರಮಂತೇ ॥ ೨೪ ॥

ತ್ವನ್ಮಾಯಯಾ ಕಲ್ಪಿತಮಿಂದುಮೌಳೇ
ತ್ವಯ್ಯೇವ ದೃಶ್ಯತ್ವಮುಪೈತಿ ವಿಶ್ವಂ ।

---

೨೩ ಪರಮೇಶ್ವರನೇ, ನಿಜವಾಗಿಯೂ ಈ ಸಮಸ್ತ ಲೋಕವೆಲ್ಲವೂ ನಿನ್ನ ದೆಸೆಯಿಂದಲೇ ಪ್ರಕಾಶಕ್ಕೆ ಬಂದಿರುವುದು ಸಮಸ್ತ ಪ್ರಾಣಿಗಳೂ ನಿನ್ನಲ್ಲಿಯೇ ರಕ್ಷಣೆ ಪಡೆಯುತ್ತಿರುವುವು ಹಾಗೆ ರಕ್ಷಿತವಾದ ಸಕಲ ವಸ್ತುಗಳೂ ಪ್ರಲಯಕಾಲದಲ್ಲಿ ನಿನ್ನಲ್ಲಿಯೇ ಲಯಹೊಂದುವುವು ಭೂಮಿಯಲ್ಲಿ ಹುಟ್ಟಿದ ಮರಗಿಡಗಳು ಹೇಗೆ ಭೂಸಾರದಿಂದಲೇ ಬೆಳೆದು ಕೊನೆಗೆ ಭೂಮಿಯ ಮೇಲೆಯೇ ಬಿದ್ದು ಮೃಣ್ಮಯವಾಗುವುವೋ ಅದರಂತೆ ಸಮಸ್ತ ಪ್ರಪಂಚವೂ ಪರಮಾತ್ಮನಿಂದಲೇ ಪ್ರಕಾಶಿತವಾಗಿ ಪರಮಾತ್ಮತಾದಾತ್ಮ್ಯವನ್ನು ಪಡೆಯುವುವು ಇದು ನಿಜ

೨೪ ಬ್ರಹ್ಮ, ಇಂದ್ರ, ರುದ್ರ, ಅಗ್ನಿ, ಮರುದ್ಗಣಗಳು, ಗಂಧರ್ವರು, ಯಕ್ಷರು, ಸುರರು, ಸಿದ್ಧರು, ಗಂಗಾದಿ ಮಹಾನದಿಗಳೂ, ಸಪ್ತಸಮುದ್ರಗಳೂ, ಇವೆಲ್ಲವೂ ನಿನ್ನ ವದನವನ್ನು ಪ್ರವೇಶಿಸುತ್ತಿರುವುವು ಇವರಿಂದಲೇ ನಿನ್ನ ಆಕಾರವು ಅಪರಿಚ್ಛಿನ್ನವಾದುದೆಂದು ತೋರುತ್ತಿದೆಯಲ್ಲವೆ !

೨೫ ಮಹೇಶ್ವರನೇ, ಅಜ್ಞಾನಿಗಳಿಗೆ ದೋಷಸಹಿತವಾದ ದೃಷ್ಟಿಯಿಂದ ಹಗ್ಗವು ಹಾವಾಗಿ ತೋರುವುದು, ಕಪ್ಪೆಚಿಪ್ಪು ಬೆಳ್ಳಿಯಾಗಿ ತೋರುವುದು, ವಾಸ್ತ

ಭ್ರಾಂತ್ಯಾ ಜನಃ ಪಶ್ಯತಿ ಸರ್ವಮೇತ-
ಚ್ಛುಕ್ತೌ ಯಥಾ ರೂಪ್ಯಮಹಿಂ ಚ ರಜ್ಜ್ವಾಂ ॥ ೨೫ ॥

ತೇಜೋಭಿರಾಪೂರ್ಯ ಜಗತ್ಸಮಸ್ತಂ
ಪ್ರಕಾಶಮಾನಃ ಕುರುಷೇ ಪ್ರಕಾಶಂ ।
ವಿನಾ ಪ್ರಕಾಶಂ ತವ ದೇವದೇವ
ನ ದೃಶ್ಯತೇ ವಿಶ್ವಮಿದಂ ಕ್ಷಣೇನ ॥ ೨೬ ॥

---

ವಿಕವಾಗಿ ಯೋಚಿಸಿದರೆ ಹಗ್ಗವು ಹಾವೂ ಅಲ್ಲ ಕಪ್ಪೆಚಿಪ್ಪು ಬೆಳ್ಳಿಯೂ ಅಲ್ಲ ಈ ರೀತಿ ಅರ್ಥಾಧ್ಯಾಸ ಜ್ಞಾನಾಧ್ಯಾಸವಾಗುವುದಕ್ಕೆ ಭ್ರಾಂತಿಯೇ ಮೂಲಕಾರಣ, ಹೀಗೆ ಪರಬ್ರಹ್ಮನೆನಿಸಿದ ನೀನೇ ವಿಚಿತ್ರಪ್ರಪಂಚರೂಪವಾಗಿ ಕಾಣುತ್ತಿರುವೆ ಈ ಕಾಣುವ ಪ್ರಪಂಚವೆಲ್ಲವೂ ಚಿನ್ನದ ಪರಿಣಾಮವಾದ ಭೂಷಣದಂತೆ ಬ್ರಹ್ಮರ ಪರಿಣಾಮ ವೆಂದೇ ತಿಳಿಯಬೇಕು ಆದರೆ ಅಜ್ಞಾನಿಗಳು ಮಾತ್ರ ಈ ಪ್ರಪಂಚವು ನಿನಗಿಂತ ಬೇರೆಯಾದುದೆಂದೂ, ನಿನ್ನಲ್ಲಿ ತೋರಬರುವ ಬೇರೆ ವಸ್ತುವೆಂದೂ ನಂಬಿರುವರು ಅದು ಭ್ರಾಂತಿ ನಿನ್ನ ಪರಿಣಾಮವೇ ಈ ಪ್ರಪಂಚ ನಿನ್ನ ಮಾಯೆಯಿಂದ ಕಲ್ಪಿತ ವಾದ ಪ್ರಪಂಚವೇ ನಿನ್ನ ಪರಿಣಾಮವಾಗಿದೆ ಎಂದು ಜ್ಞಾನಿಗಳು ಹೇಳುವರು

೨೬. ಪರಮೇಶ್ವರನೇ ನೀನು ಸ್ವಪ್ರಕಾಶಕನು ನಿನ್ನನ್ನು ಬಿಟ್ಟು ಮಾಯಾ ಕಲ್ಪಿತವಾದ ಸಮಸ್ತ ಪ್ರಪಂಚವೂ ಜಡವಸ್ತುಗಳು ಮತ್ತು ಅನಿತ್ಯವಾದವುಗಳು ನಿನ್ನ ಪ್ರಕಾಶದಿಂದಲೇ ಅವು ಪ್ರಕಾಶಿಸಬೇಕು ಪ್ರಕಾಶವಸ್ತುಗಳೆಂದು ನಮಗೆ ತೋರುವ ಮಿಂಚು, ಸೂರ್ಯ, ಚಂದ್ರ ಇವೆಲ್ಲವೂ ನಿನ್ನ ತಾದಾತ್ಮ್ಯವನ್ನು ಪಡೆದ ವಸ್ತುಗಳೇ ಹೊರತು ಸ್ವಯಂ ಪ್ರಕಾಶಕಗಳಲ್ಲ "ತಸ್ಯ ಭಾಸಾ ಸರ್ವಮಿದಂ ವಿಭಾತಿ" ಎಂಬ ಶ್ರುತಿಯಂತೆ ಸರ್ವವಸ್ತುಗಳ ಪ್ರತ್ಯಕ್ಷಕ್ಕೆ ನಿನ್ನ ತೇಜಸ್ಸೇ ಮೂಲ ಕಾರಣ ನಿನ್ನ ಪ್ರಕಾಶವೊಂದಿಲ್ಲದಿದ್ದರೆ ಯಾವ ವಸ್ತುವೂ ಯಾರಿಗೂ ಎಂದೂ ಗೋಚರವಾಗಲಾರವು.

ಅಲ್ಪಾಶ್ರಯೋ ನೈವ ಬೃಹಂತಮರ್ಥಂ
ಧತ್ತೇऽಣುರೇಕೋ ನ ಹಿ ವಿಂಧ್ಯಶೈಲಂ ।
ತ್ವದ್ವಕ್ತ್ರಮಾತ್ರೇ ಜಗದೇತದಸ್ತಿ
ತ್ವನ್ಮಾಯಯೈವೇತಿ ತು ನಿಶ್ಚಿನೋಮಿ ॥ ೨೭ ॥

ರಜ್ಜೌ ಭುಜಂಗೋ ಭಯದೋ ಯಥೈವ
ನ ಜಾಯತೇ ನಾಸ್ತಿ ನ ಚೈತಿ ನಾಶಂ ।
ತ್ವನ್ಮಾಯಯಾ ಕೇವಲಮಾತ್ತರೂಪಂ
ತಥೈವ ವಿಶ್ವಂ ತ್ವಯಿ ನೀಲಕಂಠ ॥ ೨೮ ॥

---

೨೭ ಅಲ್ಪ ಪರಿಮಾಣವುಳ್ಳ ಒಂದು ವಸ್ತುವು ಮಹತ್ಪರಿಣಾಮವುಳ್ಳ ವಸ್ತುವಂ ತರವನ್ನು ಎಂದೂ ಧರಿಸಲಾರದು ಒಂದು ಸಣ್ಣ ಮಣ್ಣಿನ ಕಣವು ವಿಂಧ್ಯಗಿರಿಯನ್ನು ಎಂದಾದರೂ ಹಿಡಿದು ನಿಂತೀತೆ? ಹಾಗಿರುವಾಗ ಈ ಅಖಂಡ ಬ್ರಹ್ಮಾಂಡಕ್ಕೆ ನಿನ್ನ ವದನವು ಆಶ್ರಯವಿತ್ತಿದೆಯೆಂದು ಹೇಳುವುದಾದರೆ ಈ ಜಗತ್ತು ಕೇವಲ ಕಲ್ಪಿತ ವಸ್ತುವೇ ಹೊರತು, ಶಾಶ್ವತವಾದುದಲ್ಲ ಸ್ವಶಕ್ತಿಯೋ ಅದಕ್ಕಿಲ್ಲವೆಂದು ಹೇಳ ಬಹುದು ಮಾಯೆಗಿರುವ ವಿಚಿತ್ರ ಶಕ್ತಿಯಿಂದ ಈ ಪ್ರಪಂಚವು ಯಾವ ರೂಪ ವನ್ನಾದರೂ ಪಡೆಯಬಹುದು ಅದರಲ್ಲಿ ಆಶ್ಚರ್ಯವೇನಿದೆ? ಹೀಗೆ ಜಗತ್ತು ನಾನಾ ರೂಪದಲ್ಲಿ ನಾನಾ ವಿಧವಾದ ಆಕಾರದಲ್ಲಿ ತೋರಿಬರುವುದೆಂದರೆ ಅದೆಲ್ಲವೂ ನಿನ್ನ ಮಾಯಾಶಕ್ತಿಯಿಂದಲೇ ಹೊರತು ಮತ್ತಾವ ಪ್ರಾಪಂಚಿಕ ಶಕ್ತಿಯೂ ಕಾಣುವುದಿಲ್ಲ

೨೮ ಮಾಯಾಕಲ್ಪಿತವಾದ ಪ್ರಪಂಚವು ಕೇವಲ ಜಡವಾದರೂ ಅದರಲ್ಲಿ ಸುಖದುಃಖಾದಿರೂಪವಾದ ಅರ್ಥಕಾರಿತ್ವವು ಅಜ್ಞಾನಿಗಳಿಗೆ ಸಂಭವಿಸುವುದು ಹೇಗೆಂದರೆ ಭ್ರಾಂತಿಯಿಂದ ಒಬ್ಬನಿಗೆ ಒಂದು ಹಗ್ಗವು ಹಾವಾಗಿ ತೋರಿ, ಪುನಃ ಭ್ರಾಂತಿ ನಿವಾರಣೆಯಾಗುವವರೆಗ ಆ ಹಗ್ಗವೇ ಅವನಿಗೆ ಭಯಜನಕ ವಸ್ತುವಾಗು ವುದ ನಿಜವಾಗಿಯೂ ಹಗ್ಗವು ಹಾವಾಗಲಾರದು ಹಾವಲ್ಲ ಆ ಜ್ಞಾನವು ಅಲ್ಲಿಯೇ

ವಿಚಾರ್ಯಮಾಣೇ ತವ ಯಚ್ಛರೀರ-
ಮಾಧಾರಭಾವಂ ಜಗತಾಮುಪೈತಿ ।
ತದಪ್ಯವಶ್ಯಂ ಮದವಿದ್ಯಯೈವ
ಪೂರ್ಣಶ್ಚಿದಾನಂದಮಯೋ ಯತಸ್ತ್ವಂ ॥ ೨೯ ॥

---

ನಾಶವಾಗುವುದೂ ಅಲ್ಲ ನಿಶ್ಚಯ ಜ್ಞಾನಬರುವವರೆಗೂ, ಅದು ಹಾವೆಂದೂ, ಆದರಲ್ಲಿ ಹಾವಿನ ಗುಣಗಳಿವೆಯೆಂದೂ ಪ್ರಾತಿಭಾಸಿಕವಾಗಿ ತೋರುವುದು ಹೀಗೆ ಪ್ರಾತಿಭಾಸಿಕ ಸತ್ಯವೇ ಅರ್ಥಕ್ರಿಯಾಕಾರಿಯಾಗಿರುವಾಗ, ಅನಾದಿಯಾಗಿ ವ್ಯಾವಹಾರಿಕ ಸತ್ಯವೆನಿಸಿರುವ ಈ ಪ್ರಪಂಚ ಸ್ಥಿತಿಯು ಅಜ್ಞಾನಿಗಳಲ್ಲಿ ಸುಖದುಃಖಾದಿ ಜನಕವಾಗದೇ ಬಿಟ್ಟೀತೆ? ಮಹೇಶ್ವರನೇ, ವಾಸ್ತವವಾಗಿ ವಿಚಾರಮಾಡಿದರೆ ಈ ಜಗತ್ತು ನಿನ್ನ ಮಾಯಾಶಕ್ತಿಯಿಂದ ಕೂಡಿ ನಿನ್ನಿಂದಲೇ ರೂಪಾಂತರವನ್ನು ಪಡೆದಿರುವುದು ಬೇರೆ ವಸ್ತುವಿನಂತೆ ನಿನ್ನಲ್ಲಿ ನಮ್ಮ ಅಜ್ಞಾನದಿಂದ ತೋರಿಬರುತ್ತಿರುವುದು ಹೀಗೆಂದು ನಾನು ತಿಳಿದೆನು

೨೯ ಅಪರಿಚ್ಛಿನ್ನ ಶರೀರಿಯಾದ ಮಹೇಶ್ವರನೇ, ಮಾಯಾಕಲ್ಪಿತವಾದ ಜಗತ್ತೇ ಸುಳ್ಳಾಗಿರುವಾಗ, ಅದನ್ನು ವದನದಲ್ಲಿ ತೋರಿಸುವ ನಿನ್ನ ಈ ವಿಶ್ವರೂಪವೂ ಸಹ ಮಿಥ್ಯಾಭೂತವಾದದ್ದೇ ಏಕೆಂದರೆ, ನಿನ್ನ ಸ್ವರೂಪವು ಯಾವಾಗಲೂ ಪೂರ್ಣ ಜ್ಞಾನಾನಂದಮಯವಾದದ್ದು ನಿನಗೆ ರೂಪರೇಖಾದಿಗಳಿಲ್ಲ ಆದರೂ ಅವಿದ್ಯಾ ಮಹಿಮೆಯಿಂದ ನನಗೆ ನಿನ್ನ ರೂಪವು ವಿಚಿತ್ರವಾಗಿ ಕಾಣುತ್ತಿರುವುದು ಚೈತನ್ಯ, ಆನಂದ ಮೊದಲಾದ ಧರ್ಮಗಳುಳ್ಳ ಆತ್ಮಸ್ವರೂಪವು ಅಂತಃಕರಣದಲ್ಲಿ ತೋರದೆ ಅನಾದಿಯಾಗಿ ವಿಚಿತ್ರ ಶಕ್ತಿಯುಳ್ಳದ್ದಾಗಿರುವ ಅವಿದ್ಯಾಮಹಿಮೆಯಿಂದ ಈ ಆಶ್ಚರ್ಯಕರವಾದ ನಿನ್ನ ರೂಪವು ನನ್ನ ದೃಷ್ಟಿಗೆ ಗೋಚರಿಸುತ್ತಿರುವುದು ಪಾರಮಾರ್ಥಿಕವಾಗಿ ನೋಡಿದರೆ ನಿನ್ನ ರೂಪವೂ ಸಹ ಯಥಾರ್ಥವಾದುದಲ್ಲ ನೆಶ್ವರವಾದುದೇ ಸರಿ

ಪೂಜೇಷ್ಟಪೂರ್ತಾದಿವರಕ್ರಿಯಾಣಾಂ
ಭೋಕ್ತುಃ ಫಲಂ ಯಚ್ಛಸಿ ಶಸ್ತಮೇವ ।
ಮೃಷೈತದೇವಂ ವಚನಂ ಪುರಾರೇ
ತ್ವತ್ತೋಽಸ್ತಿ ಭಿನ್ನಂ ನ ಹಿ ಕಿಂಚಿದೇವ || ೩೦ ||

ಅಜ್ಞಾನಮೂಢಾ ಮುನಯೋ ವದಂತಿ
ಪೂಜೋಪಚಾರಾದಿಬಹಿಃಕ್ರಿಯಾಭಿಃ ।
ತೋಷಂ ಗಿರೀಶೋ ಭಜತೀತಿ ಮಿಥ್ಯಾ
ಕುತಸ್ತ್ವಮೂರ್ತಸ್ಯ ತು ಭೋಗಲಿಪ್ಸಾ || ೩೧ ||

---

೩೦ ಮಹೇಶ್ವರನೇ, ಬ್ರಹ್ಮಭಿನ್ನವಾದ ಯಾವ ವಸ್ತುವೂ ಯಥಾರ್ಥವಾದುದಲ್ಲವೆಂದು ಹೇಳುವುದಾದರೆ ಕರ್ಮಕಾಂಡಪ್ರತಿಪಾದಕಗಳಾದ ಶ್ರುತಿಗಳಿಗೆ ವ್ಯರ್ಥತ್ವವುಂಟಾದೀತು ಆದರೆ ಹಾಗೆ ತಿಳಿಯಬಾರದು ದೇವತಾರಾಧನೆಗಳು, ಯಜ್ಞಾದಿವೈದಿಕಕರ್ಮಗಳು, ತಟಾಕಾರಾಮಪ್ರತಿಷ್ಠಾದಿ ಧರ್ಮಕಾರ್ಯಗಳು ಇವುಗಳನ್ನು ನಡೆಸಿದವರಿಗೆ ಸ್ವರ್ಗಪ್ರಾಪ್ತ್ಯಾದಿ ಸಕಲ ಶುಭ ಫಲಗಳನ್ನೂ ಕೊಡುವವನು ನೀನೇ ಆದರೆ ಅವಿದ್ಯಾಮಹಿಮೆಯಿಂದ ಜೀವಬ್ರಹ್ಮರಿಗೆ ಭೇದವನ್ನು ಭಾವಿಸಿರುವವರಿಗೆ ಈ ಕರ್ಮಗಳು ಉಕ್ತವಾಗಿವೆಯೇ ಹೊರತು, ವಿದ್ಯಾಮಹಿಮೆಯಿಂದ ಅವಿದ್ಯಾವಾಸನೆಯನ್ನು ತೊಡೆದು ಹಾಕಿ ಪರಬ್ರಹ್ಮ ಸಾಕ್ಷಾತ್ಕಾರಪಡೆದಿರುವವರಿಗೆ ವಾಸ್ತವವಾಗಿಯೂ ಕರ್ಮಜನ್ಯಫಲವೆಲ್ಲಾ ಮಿಥ್ಯಾಭೂತವಾದದ್ದು ನಿನಗಿಂತ ಪ್ರತ್ಯೇಕವಾದ ವಸ್ತುವೇ ನಿಜವಾಗಿಯೂ ಇಲ್ಲ ಇದೇ ಅರ್ಥವನ್ನೇ "ಕಿಮರ್ಥಾ, ವಯಮಧ್ಯೇಷ್ಯಾಮಹೇ ಕಿಮರ್ಥಾ ವಯಂ ಯಕ್ಷ್ಯಾಮಹೇ" "ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ" "ನ ನಿರೋಧೋ ನ ಚೋತ್ಪತ್ತಿರ್ನ ಬಂಧೋ ನ ಚ ಸಾಧಕಃ । ನ ಮುಮುಕ್ಷುರ್ನ ವೈ ಮುಕ್ತ ಇತ್ಯೇಷಾ ಪರಮಾರ್ಥತಾ" ಇತ್ಯಾದಿ ಶ್ರುತಿಗಳು ಸ್ಪಷ್ಟವಾಗಿ ತಿಳಿಸುತ್ತವೆ

೩೧ ಬಾಹ್ಯಾಡಂಬರ ಪ್ರದರ್ಶಕಗಳಾದ ಯಾಗ, ಪೂಜಾ, ದಾನ ಇತ್ಯಾದಿ ಕ್ರಿಯೆಗಳಿಂದ ಪರಮೇಶ್ವರನು ತೃಪ್ತಿಹೊಂದುತ್ತಾನೆಂದು ಕೆಲವರು ಅಜ್ಞಾನಿಗಳಾದ

**ಕಿಂಚಿದ್ದಳಂ ವಾ ಚುಳಕೋದಕಂ ವಾ**
**ಯಸ್ತ್ವಂ ಮಹೇಶಂ ಪ್ರತಿಗೃಹ್ಯ ದತ್ಸೇ ।**
**ತ್ರೈಲೋಕ್ಯಲಕ್ಷ್ಮೀಮಪಿ ಯಜ್ಜನೇಭ್ಯಃ**
**ಸರ್ವಂ ತ್ವವಿದ್ಯಾಕೃತಮೇವ ಮನ್ಯೇ** || ೩೨ ||

---

ಮುನಿಗಳು ಹೇಳುತ್ತಿರುವರು ಜ್ಞಾನಮಾರ್ಗಾವಲಂಬಿಗಳ ದೃಷ್ಟಿಯಿಂದ ಅದು ಸುಳ್ಳು ಏಕೆಂದರೆ ತೃಪ್ತಿಯೆಂಬ ಗುಣವು ಮಾಯಾವೃತ್ತಿರೂಪವಾದದ್ದು ಅಮೂರ್ತವೂ ಪೂರ್ಣಾನಂದರೂಪವೂ ಆದ ಪರಬ್ರಹ್ಮ ವಸ್ತುವಿಗೆ ಭೋಗೇಚ್ಛೆ ಎಲ್ಲಿಂದ ಬಂದೀತು? ಆದರೆ ' ಧರ್ಮೇಣ ಪಾಪಮಪನುದತಿ" " ನ ಕರ್ಮಣಾಮ-ನಾರಂಭಾನ್ನೈಷ್ಕರ್ಮ್ಯಂ ಫಲಮಶ್ನುತೇ " ಇತ್ಯಾದಿ ಶ್ರುತಿಸ್ಮೃತಿವಾಕ್ಯಗಳು ಅಜ್ಞರನ್ನು ಉದ್ಧರಿಸಿ ಜ್ಞಾನಮಾರ್ಗಕ್ಕೆ ಎಳೆಯುವ ಅಭಿಪ್ರಾಯವುಳ್ಳವುಗಳೆಂದು ಭಾವಿಸಬೇಕು

೩೨ ತುಲಸೀ, ಬಿಲ್ವಪತ್ರೆ ಮುಂತಾದ ಸುಲಭ ಪೂಜಾದ್ರವ್ಯದಿಂದಲೂ, ಅಂಗೈಯಲ್ಲಿ ಕೊಡಬಹುದಾದುದಷ್ಟು ಅಗ್ರೋದಕದಿಂದಲೂ, ಭಕ್ತರಾದವರು ನಿನ್ನನ್ನು ಭಕ್ತಿಯಮೂಲಕ ತೃಪ್ತಿಪಡಿಸುವರು ಅಂತಹವರಿಗೆ ನೀನು ತ್ರೈಲೋಕ್ಯ ಪರಿಮಿತವಾದ ಐಶ್ವರ್ಯಾದಿ ಸಕಲ ಭೋಗಸಾಮಗ್ರಿಗಳನ್ನೂ ಕೊಡಬಲ್ಲೆ ಆದರೇನು? ಆ ರೀತಿ ನೀನು ಕರುಣಿಸುವ ಸಕಲ ಭೋಗ್ಯವಸ್ತುಗಳೂ ಮಿಥ್ಯಾಭೂತವಾದದ್ದೇ ಒಂದಲ್ಲ ಒಂದು ಕಾಲದಲ್ಲಿ ಅವೆಲ್ಲವೂ ನಾಶವಾಗುತ್ತವೆ ಅಲ್ಲದೆ ದಾನಕೊಡುವಿಕೆ, ದಾನ ತೆಗೆದುಕೊಳ್ಳುವಿಕೆ, ದಾನಕ್ಕೆ ವಿಷಯವಾದ ವಸ್ತುಸ್ಥಿತಿ ಇವೆಲ್ಲವೂ ಅವಿದ್ಯಾ ಮೂಲಕವಾಗಿ ತೋರತಕ್ಕವುಗಳೇ ಹೊರತು ವಾಸ್ತವವಾದ ಮತ್ತು ಶಾಶ್ವತವಾದ ಪರಬ್ರಹ್ಮವಸ್ತುವಲ್ಲ

ವ್ಯಾಪ್ನೋಷಿ ಸರ್ವಾ ವಿದಿಶೋ ದಿಶಶ್ಚ
ತ್ವಂ ವಿಶ್ವಮೇಕಃ ಪುರುಷಃ ಪುರಾಣಃ ।
ನಷ್ಟೇऽಪಿ ತಸ್ಮಿಂಸ್ತವ ನಾಸ್ತಿ ಹಾನಿಃ
ಘಟೇ ವಿನಷ್ಟೇ ನಭಸೋ ಯಥೈವ ॥ ೩೩ ॥

ಯಥೈಕಮಾಕಾಶಗಮರ್ಕಬಿಂಬಂ
ಕ್ಷುದ್ರೇಷು ಪಾತ್ರೇಷು ಜಲಾನ್ವಿತೇಷು ।
ಭಜತ್ಯನೇಕಪ್ರತಿಬಿಂಬಭಾವಂ
ತಥಾ ತ್ವಮಂತಃಕರಣೇಷು ದೇವ ॥ ೩೪ ॥

---

೩೩ ಪರಬ್ರಹ್ಮವಸ್ತುವೇ, ನೀನು ದಿಕ್ಕು ದಿಕ್ಕುಗಳಲ್ಲಿಯೂ ವ್ಯಾಪಿಸಿರುವೆ ಸಜಾತೀಯ ವಿಜಾತೀಯ ಸ್ವಗತಭೇದರಹಿತನಾದ ಪುರುಷನು ನೀನು ನಿನಗೆ ಆದ್ಯಂತಗಳಿಲ್ಲ ಹೀಗೆ ಪ್ರಪಂಚವ್ಯಾಪಿಯಾದ ನಿನಗೆ ಪ್ರಪಂಚವೇ ನಷ್ಟವಾದರೂ, ನಿನಗೆ ನಾಶವಿಲ್ಲ ಹೇಗೆಂದರೆ ಮಡಕೆಯು ಒಡೆದುಹೋದರೂ ಅದರಲ್ಲಿ ತೋರಿ ಬರುವ ಆಕಾಶ, (ಅವಕಾಶ)ಕ್ಕೆ ಚ್ಯುತಿಯಿಲ್ಲ, ಮಡಕೆಯು ಶಾಶ್ವತವೂ ಅಲ್ಲ ತದಂತರ್ವರ್ತಿಯಾಗಿ ತೋರಿಬರುವ ಆಕಾಶಕ್ಕೆ ನಾಶವೂ ಇಲ್ಲ ಹಾಗೆ ಚರಾ ಚರಾತ್ಮಕವಾದ ಈ ಪ್ರಪಂಚಕ್ಕೆ ಅಧಿಷ್ಠಾನನೆನಿಸಿ ನೀನು ಪ್ರಪಂಚವನ್ನು ನಡೆಸು ತ್ತಿರುವೆ ನಿನ್ನ ಮಾಯಾಶಕ್ತಿಯಿಂದ ತೋರಿಬರುವ ಈ ಪ್ರಪಂಚವೆಲ್ಲಾ ಮರು ಮರೀಚಿಕೆ (ಬಿಸಿಲ್ಗುದುರೆ) ಯಂತೆ ಭ್ರಾಂತಿಯೇ ಹೊರತು ಪಾರಮಾರ್ಥಿಕವಲ್ಲ

೩೪ ಎಲೈ ದೇವದೇವನೇ, ನಿಜವಾಗಿಯೂ ನಿನಗೆ ಯಾವ ಆಕಾರಾದಿಗಳೂ ಇಲ್ಲ ಅನೇಕ ಜೀವರೂಪವಾಗಿ ತೋರಿದಮಾತ್ರಕ್ಕೆ ನಿನ್ನಲ್ಲಿ ಬಹುತ್ವವಿಲ್ಲ ಆಕಾಶದಲ್ಲಿ ಕಂಡುಬರುವ ಒಬ್ಬನೇ ಸೂರ್ಯನು ಭೂಮಿಯಲ್ಲಿಟ್ಟಿರುವ ಅನೇಕ ನೀರಿನ ಪಾತ್ರೆಗಳಲ್ಲಿ ನಾನಾ ಸೂರ್ಯರಂತೆ ಕಂಡುಬರುವನು ಹೀಗೆ ಸೂರ್ಯನು ನಾನಾ ರೂಪದಲ್ಲಿ ಬಹು ಸಂಖ್ಯೆಯಲ್ಲಿ ತೋರುವುದಕ್ಕೆ ಭೂಮಿಯಲ್ಲಿರುವ ಬೇರೆ ಬೇರೆ ಪಾತ್ರೆಗಳೇ ಕಾರಣ ಅವೇ ಸೂರ್ಯನಾನಾತ್ವಕ್ಕೆ ಉಪಾಧಿಗಳು ಅದರಂತೆ

ಸುಸರ್ಜನೇ ವಾಪ್ಯವನೇ ವಿನಾಶೇ
ವಿಶ್ವಸ್ಯ ಕಿಂಚಿತ್ತವ ನಾಸ್ತಿ ಕಾರ್ಯಂ।
ಅನಾದಿಭಿರ್ದೇಹಭೃತಾಮದೃಷ್ಟೈ-
ಸ್ತಥಾಪಿ ತತ್ಸ್ವಪ್ನವದಾತನೋಷಿ ॥ ೩೫ ॥

ಸ್ಥೂಲಸ್ಯ ಸೂಕ್ಷ್ಮಸ್ಯ ಜಡಸ್ಯ ಭೋಗೋ
ದೇಹಸ್ಯ ಶಂಭೋ ನ ಚಿತಿಂ ವಿನಾಸ್ತಿ।

---

ಒಬ್ಬನೇ ಆತ್ಮನು ಉಪಾಧಿಭೇದದಿಂದ ನಾನಾ ಆಕಾರಗಳಾಗಿ ತೋರಿಬರುವನು ಉಪಾಧಿಯು ಮಿಥ್ಯೆಯಾದ ಮಾತ್ರಕ್ಕೆ ಉಪಹಿತವಾದ ಆತ್ಮವಸ್ತುವು ಮಿಥ್ಯೆಯಾಗ ಬೇಕೆಂಬ ನಿಯಮವಿಲ್ಲ. ಪರಮೇಶ್ವರನೇ, ಪಾರಮಾರ್ಥಿಕವಾಗಿ ಅರಿಯುವುದಾದರೆ ನಿನಗಿಂತ ಬೇರೆಯಾಗಿ ಕಾಣುವ ಯಾವ ವಸ್ತುವೂ ನಿಜವಾದದ್ದಲ್ಲ

೩೫ ಈಶ್ವರನೇ ಹಿಂದೆ ಹೇಳಿದಂತೆ ಜೀವ ಮತ್ತು ಪರಬ್ರಹ್ಮವಸ್ತುವು ನಿಜವಾಗಿಯೂ ಒಂದೇ ಆದರೂ, ಪರಬ್ರಹ್ಮನಿಗೆ ಜೀವನಿಗಿರುವಂತೆ ಸಾಂಸಾರಿಕ ವಾದ ಯಾವ ಸುಖದುಃಖಾದಿಗಳೂ ಇಲ್ಲ ಏಕೆಂದರೆ ಪ್ರಪಂಚಗತವಾದ ಸಕಲ ವಸ್ತುಗಳಿಗೂ ಇರುವ ಸೃಷ್ಟಿಸ್ಥಿತಿಲಯಗಳು ಆತ್ಮನಿಗಿಲ್ಲ ಹಾಗೆಯೇ ಅನಾದಿ ಕಾಲದಿಂದ ಪ್ರವಾಹರೂಪವಾಗಿ ಅವಿದ್ಯಾಸಂಬಂಧವಾಗಿ ಬಂದ ದೇಹಾದಿಗಳ ಸಂಪರ್ಕವೂ ಆತ್ಮನಿಗಿಲ್ಲ. ಸುಖದುಃಖಸಹಕಾರಿಗಳಾದ ದೇಹ, ಅಪೂರ್ವ ಮುಂತಾದುವು ಗಳಿಂದ ಜೀವನು ಬಳಲಿ, ಸ್ವಪ್ನಸುಖದಂತೆ ಸ್ವರ್ಗಾದಿಗತವಾದ ಸೌಖ್ಯವನ್ನು ಬಯಸುವನು ಈ ಬಂಧನಗಳಾವುವೂ ಆತ್ಮನಿಗಿಲ್ಲವಾದುದರಿಂದ ಆತ್ಮನು ಪರಿಪೂರ್ಣಕಾಮನು ಆದರೆ ಜೀವಾತ್ಮರಿಗೆ ಬಿಂಬ ಪ್ರತಿಬಿಂಬಭಾವಕೃತವಾದ ವಿಶೇಷವೊಂದೇ ತೋರಿಬರುವುದು

೩೬ ಪರಮೇಶ್ವರನೇ, ಪಂಚೀಕೃತವಾದ ಪೃಥಿವ್ಯಾದಿ ಮಹಾಭೂತಗಳಿಂದ ಸ್ಥೂಲದೇಹವೂ, ಅಪಂಚೀಕೃತ ಮಹಾಭೂತಕಾರ್ಯವಾದ ಲಿಂಗಶರೀರವೂ, ಜೀವಾತ್ಮರ ಸ್ಥೂಲಶರೀರಗಳೆನಿಸುವುವು ಇವೆರಡೂ ಜಡವಸ್ತುಗಳೇ, ಆದರೆ ಆ

**ಅತಸ್ತ್ವದಾರೋಪಣಮಾತನೋತಿ**
**ಶ್ರುತಿಃ ಪುರಾರೇ ಸುಖದುಃಖಯೋಸ್ಸದಾ** || ೩೬ ||

**ನಮಸ್ಸಚ್ಚಿದಂಭೋಧಿಹಂಸಾಯ ತುಭ್ಯಂ**
**ನಮಃ ಕಾಲಕಂಠಾಯ ಕಾಲಾತ್ಮಕಾಯ ।**
**ನಮಸ್ತೇ ಸಮಸ್ತಾಘಸಂಹಾರಕರ್ತ್ರೇ**
**ನಮಸ್ತೇ ಮೃಷಾ ಚಿತ್ತವೃತ್ತ್ಯೈಕಭೋಕ್ತ್ರೇ** || ೩೭ ||

---

ಜಡಾತ್ಮಕಗಳಾದ ಎರಡು ದೇಹಗಳಲ್ಲಿಯೂ ಚೈತನ್ಯತಾದಾತ್ಮ್ಯವುಂಟಾಗಿ ಅವು ಚಿತ್ತೆಂಬ ವ್ಯವಹಾರವನ್ನು ಪಡೆದಿರುವುವು ಆ ಎರಡು ವಿಧವಾದ ದೇಹಗಳಿಗೂ ಸಂಭವಿಸುವ ಸುಖದುಃಖಾನುಭವಗಳನ್ನು ತಾದಾತ್ಮ್ಯದಿಂದ ಪ್ರತಿಫಲಿಸುವ ನಿನ್ನಲ್ಲಿ ಶ್ರುತಿಗಳು ಆರೋಪಮಾಡಿ ಹೇಳುತ್ತಿರುವುವು ಒಟ್ಟಿನಲ್ಲಿ ಶುದ್ಧ ಚೈತನ್ಯಕ್ಕೆ ಸೂಕ್ಷ್ಮ ಶರೀರವೂ ಸ್ಥೂಲಶರೀರವೂ ಆವರಣವಾಗಿರುವುದರಿಂದ ಆವರಣ ನಿಮಿತ್ತಕವಾಗಿ ಒರುವ ದುಃಖಾದಿಗಳನ್ನು ಚೈತನ್ಯಕ್ಕೂ ಆರೋಪಮಾಡಿ ಹೇಳುವರು ವಾಸ್ತವವಾಗಿ ಶುದ್ಧ ಚೈತನ್ಯಕ್ಕೆ ಯಾವ ಸುಖದುಃಖಾದಿಗಳ ಸಂಬಂಧವೂ ಕಾಣುವುದಿಲ್ಲ ಅಗ್ನಿ ಸಂಬಂಧದಿಂದ ಕೆಂಪಾಗಿರುವ ಕಬ್ಬಿಣಕ್ಕೆ ಚಮ್ಮಟಿಗೆಯ ಏಟು ಬಡಿಯುವಂತೆ, ಚೈತನ್ಯವಿಶಿಷ್ಟವಾದ ದೇಹಕ್ಕೆ ದುಃಖಾನುಭವವಿರುವುದು ಶುದ್ಧ ಚೈತನ್ಯಕ್ಕಿರುವು ದಿಲ್ಲ ಇದೇ ಅರ್ಥವನ್ನೇ "ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ। ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ" ಇತ್ಯಾದಿ ಶ್ರುತಿಗಳು ಪ್ರತಿಪಾದಿಸುತ್ತಿರುವುವು

೩೭ ಮಹಾದೇವನೆ, ಪಾರಮಾರ್ಥಿಕವಾಗಿ ನಿನ್ನನ್ನು ಸಾಕಾರನನ್ನಾಗಿ ಸ್ತುತಿಸಲು ಸಾಧ್ಯವಿಲ್ಲದಿದ್ದರೂ, ಭಕ್ತಿಪರವಶನಾಗಿ ಸಗುಣಬ್ರಹ್ಮಾರಾಧನೆಯ ಉದ್ದೇಶದಿಂದ ನಿನ್ನನ್ನು ಈ ರೀತಿ ಸ್ತುತಿಸುವೆನು ಪರಮೇಶ್ವರನೇ, ನೀನು ಶುದ್ಧನಾಗಿ ಮಾಯಾಸಂಬಂಧವಿಲ್ಲದವನಾದುದರಿಂದ ಹಂಸಪಕ್ಷಿಯಂತೆ ಶುಕ್ಲವರ್ಣ ವಿಶಿಷ್ಟನೆಂದು ಉತ್ಪ್ರೇಕ್ಷೆಮಾಡಿ ಹೇಳುವೆನು ಈ ಸತ್ಯಜ್ಞಾನವೆಂಬ ಮಹಾಸಮುದ್ರ

॥ ಶ್ರೀ ಸೂತ ಉವಾಚ ॥

**ಏವಂ ಪ್ರಣಮ್ಯ ವಿಶ್ವೇಶಂ ಪುರತಃ ಪ್ರಾಂಜಲಿಸ್ಸ್ಥಿತಃ ।**
**ವಿಸ್ಮಿತಃ ಪರಮೇಶಾನಂ ಜಗದೇ ರಘುನಂದನಃ ॥ ೩೮ ॥**

॥ ಶ್ರೀರಾಮ ಉವಾಚ ॥

**ಉಪಸಂಹರ ವಿಶ್ವಾತ್ಮನ್ ವಿಶ್ವರೂಪಮಿದಂ ತವ ।**
**ಪ್ರತೀತಂ ಜಗದೈಕಾತ್ಮ್ಯಂ ಶಂಭೋ ಭವದನುಗ್ರಹಾತ್ ॥ ೩೯ ॥**

---

ದಲ್ಲಿ ನೀನು ಹಂಸಪಕ್ಷಿಯಂತೆ ವಿಹರಿಸುವೆ ಅಂದರೆ ಜ್ಞಾನಗಮ್ಯನಾಗಿರುವೆ ಲೋಕೋಪಕಾರಬುದ್ಧಿಯಿಂದ ಜಗನ್ನಾಶಕರವಾದ ವಿಷವನ್ನೇ ಕಂಠದಲ್ಲಿ ಧರಿಸಿ, ಪ್ರಪಂಚವನ್ನೇ ಶಿಕ್ಷಿಸುವ ಯಮನನ್ನೂ ನಿಗ್ರಹಿಸುವಂತಿರುವ ದಿವ್ಯಶಕ್ತಿಯನ್ನು ಪಡೆದಿರುವೆ ಅನಾದಿಕರ್ಮ ಸಂಚಿತವಾದ ಪಾಪರಾಶಿಯನ್ನು ನಾಶಮಾಡುವ ಶಕ್ತಿಯೂ ನಿನ್ನಲ್ಲುಂಟು ಮಿಥ್ಯಾಭೂತಗಳಾದ ಚಿತ್ತವೃತ್ತಿಯಿಂದ ಒದಗುವ ಸುಖದುಃಖಾದ್ಯನುಭವಗಳಿಗೆ ನೀನು ಸಾಕ್ಷಿಭೂತನಾಗಿ ಕಾಣುತ್ತಿರುವೆ ಇಂತಹ ನಿನಗೆ ಸಾಷ್ಟಾಂಗ ಪ್ರಣಾಮಮಾಡುವೆನು."

೩೮—೩೯ ಈರೀತಿ ಶ್ರೀರಾಮಚಂದ್ರನು ಮಹೇಶ್ವರನ ವಿಶ್ವರೂಪವನ್ನು ಈಶಪತ್ತವಾದ ದಿವ್ಯದೃಷ್ಟಿಯಿಂದ ನೋಡಿ ಆಶ್ಚರ್ಯಪಡುತ್ತಾ ಸಂತೋಷಪರವಶನಾಗಿ "ಮಹಾತ್ಮನೇ, ವಿಶ್ವರೂಪನೇ, ಅತ್ಯಗಾಧರೂಪವೆನಿಸಿದ ಈ ವಿಶ್ವಾಕೃತಿಯನ್ನು ಉಪಸಂಹಾರಮಾಡು ನೀನು ಜಗದಾತ್ಮನೆಂಬ ಭಾವವು ನನಗೆ ಬಂದಿರುವುದು ನಾನು ನಿನ್ನ ಮಹಿಮೆಯನ್ನರಿತೆನು ಅದಕ್ಕೆ ನಿನ್ನ ಅನುಗ್ರಹವೇ ಕಾರಣ" ಹೀಗೆಂದು ಪ್ರಾರ್ಥಿಸಲಾರಂಭಿಸಿದನು

|| ಶ್ರೀ ಮಹಾದೇವ ಉವಾಚ ||

ಪಶ್ಯ ರಾಮ ಮಹಾಬಾಹೋ ಮತ್ತೋ ನಾನ್ಯೋಽಸ್ತಿ ಕಶ್ಚನ ।

|| ಸೂತ ಉವಾಚ ||

ಇತ್ಯುಕ್ತ್ವೈವೋಪಸಂಜಹ್ರೇ ಸ್ವದೇಹೇ ದೇವತಾದಿಕಾನ್ || ೪೦ ||

ಮೀಲಿತಾಕ್ಷಃ ಪುನರ್ಹರ್ಷಾದ್ಯಾವದ್ರಾಮಃ ಪ್ರಪಶ್ಯತಿ ।
ತಾವದೇವ ಗಿರೇಶ್ಶೃಂಗೇ ವ್ಯಾಘ್ರಚರ್ಮೋಪರಿ ಸ್ಥಿತಂ || ೪೧ ||

ದದರ್ಶ ಪಂಚವದನಂ ನೀಲಕಂಠಂ ತ್ರಿಲೋಚನಂ ।
ವ್ಯಾಘ್ರಚರ್ಮಾಂಬರಧರಂ ಭೂತಿಭೂಷಿತವಿಗ್ರಹಂ || ೪೨ ||

---

೪೦–೪೧ ಮಹಾಬಲಶಾಲಿಯಾದ ಶ್ರೀರಾಮನು ಹೀಗೆ ಸ್ತುತಿಸುತ್ತಿರಲು ಮಹಾದೇವನು ಅವನ ಭಕ್ತಿಗೆ ಮೆಚ್ಚಿ–"ಮಹಾಬಾಹುವೇ, ಈಗ ತಿಳಿದುಕೊ ಪ್ರಪಂಚದಲ್ಲಿ ನನಗಿಂತ ಬೇರೆಯಾದ ವಸ್ತುವೇ ಇಲ್ಲ" ಹೀಗೆಂದು ಉಪದೇಶಮಾಡಿ ಸಕಲ ದೇವತಾತ್ಮಕವಾಗಿ ಕಾಣುತ್ತಿದ್ದ ದೇಹವನ್ನು ಅಂತರ್ಧಾನಗೊಳಿಸಿದನು. ಶ್ರೀರಾಮನು ಆತ್ಮಧ್ಯಾನಪರನಾಗಿ ಕಣ್ಣುಮುಚ್ಚಿ ಬಿಡುವಷ್ಟರಲ್ಲಿ ಮಹಾದೇವನು ಎಂದಿನಂತೆ ರಾಮಗಿರಿಯ ಶಿಖರದಲ್ಲಿ ವ್ಯಾಘ್ರಾಜಿನದಮೇಲೆ ಕುಳಿತು ರೂಪಾಂತರ ವನ್ನು ವ್ಯಕ್ತಪಡಿಸಿದನು

೪೨–೪೩ ಸೌಮ್ಯರೂಪವಲ್ಲಿದ್ದ ಮಹೇಶ್ವರನಲ್ಲಿ ಶ್ರೀರಾಮನಿಗೆ ಐದು ಮುಖಗಳೂ, ನೀಲವರ್ಣದ ಕಂಠವೂ, ಸೋಮಸೂರ್ಯಾಗ್ನಿಸ್ವರೂಪಗಳಾದ ಮೂರು ಕಣ್ಣುಗಳೂ ಕಾಣಲಾರಂಭಿಸಿದುವು. ಆಗ ಹುಲಿಯ ಚರ್ಮವನ್ನೇ ಈಶ್ವರನು ವಸ್ತ್ರವನ್ನಾಗಿ ಧರಿಸಿದ್ದನು ವಿಭೂತಿಯಿಂದ ಲಿಪ್ತವಾಗಿ ಪರಶಿವನ ದೇಹವೆಲ್ಲಾ ಶುಭ್ರವಾಗಿ ಕಾಣುತ್ತಿದ್ದಿತು ಸರ್ಪವನ್ನೇ ಕೈಬಳೆಯನ್ನಾಗಿ ಧರಿಸಿಕೊಂಡಿದ್ದನು ನಾಗದೇವತೆಯೇ ಶಂಕರನಿಗೆ ಯಜ್ಞೋಪವೀತವಾಗಿದ್ದಿತು ಹುಲಿಯ ಚರ್ಮವನ್ನು

ಫಣಿಕಂಕಣಭೂಷಾಢ್ಯಂ ನಾಗಯಜ್ಞೋಪವೀತಿನಂ ।
ವ್ಯಾಘ್ರಚರ್ಮೋತ್ತರೀಯಂ ಚ ವಿದ್ಯುತ್ಪಿಂಗಜಟಾಧರಂ ॥ ೪೩ ॥
ಏಕಾಕಿನಂ ಚಂದ್ರಮೌಳಿಂ ವರೇಣ್ಯಮಭಯಪ್ರದಂ ।
ಚತುರ್ಭುಜಂ ಖಂಡಪರಶುಂ ಮೃಗಹಸ್ತಂ ಜಗತ್ಪತಿಂ ॥ ೪೪ ॥

ಅಥಾಜ್ಞಯಾ ಪುರಸ್ತಸ್ಯ ಪ್ರಣಮ್ಯೋಪವಿವೇಶ ಸಃ ।
ಅಥಾಹ ರಾಮಂ ದೇವೇಶೋ ಯದ್ಯತ್ಪ್ರಷ್ಟುಮಭೀಪ್ಸ್ಯಸಿ ॥ ೪೫ ॥
ತತ್ಸರ್ವಂ ಪೃಚ್ಛ ರಾಮ ತ್ವಂ ಮತ್ತೋ ನಾನ್ಯೋಽಸ್ತಿ ತೇ ಗುರುಃ ।

ಇತಿ ಶ್ರೀಪದ್ಮಪುರಾಣೇ ಶಿವಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಶಿವರಾಘವಸಂವಾದೇ ವಿಶ್ವರೂಪಸಂದರ್ಶನ
ಯೋಗೋ ನಾಮ ಸಪ್ತಮೋಽಧ್ಯಾಯಃ

---

ಉತ್ತರೀಯವನ್ನಾಗಿಯೂ, ಮಿಂಚಿನಂತೆ ಹೊಳೆಯುವ ಕೂದಲನ್ನು ಜಟಾಕಲಾಪವನ್ನಾಗಿಯೂ ಮಾಡಿಕೊಂಡಿದ್ದನು

೪೪–೪೫ ಪಾರ್ವತೀವಿರಹಿತವಾದ ಶರೀರದಿಂದಲೂ, ಚಂದ್ರಭೂಷಿತವಾದ ಶಿರೋಭಾಗದಿಂದಲೂ, ಅಭಯಮುದ್ರೆಯಿಂದ ಕೂಡಿದ ಹಸ್ತದಿಂದಲೂ ಕೂಡಿ, ಪರಮೇಶ್ವರನು ಪರಶ ವೆಂಬ ಆಯುಧವನ್ನೂ ಜಿಂಕೆಯ ಮರಿಯನ್ನೂ ಧರಿಸಿದ್ದನು ಹೀಗೆ ಲೀಲಾವೇಷಧಾರಿಯಾಗಿದ್ದ ಪರಶಿವನು ತನ್ನ ಮುಂದೆ ವಿನೀತನಾಗಿ ನಮಸ್ಕರಿಸಿ ನಿಂತಿರುವ ಶ್ರೀರಾಮನನ್ನು ತನ್ನ ಪಕ್ಕದಲ್ಲಿಯೇ ಕುಳ್ಳಿರಿಸಿಕೊಂಡು, ಪ್ರಶ್ನೆ ಮಾಡಬೇಕೆಂದಿರುವ ಎಲ್ಲ ವಿಷಯಗಳನ್ನೂ ಪ್ರಶ್ನಿಸಬಹುದೆಂದು ಭರವಸೆಯಿತ್ತನು ಮತ್ತು ಮಾನವರಿಗೆ ಸರ್ವಸುಲಭವಾಗಿ ಬರುವ ಅಜ್ಞಾನಕೃತವಾದ ಸಮಸ್ತ ಪ್ರಶ್ನೆಗಳಿಗೂ ಸಿದ್ಧಾಂತರೂಪವಾಗಿ ಉತ್ತರ ಹೇಳುವ ಸಾಮರ್ಥ್ಯವು ತನಗಲ್ಲದೆ ಮತ್ತಾರಿಗೂ ಇರುವುದಿಲ್ಲವೆಂದೂ ಹೇಳಿ ಶ್ರೀರಾಮನನ್ನು ಶಿಷ್ಯವಾತ್ಸಲ್ಯದಿಂದ ನೋಡಿದನು

ಇಲ್ಲಿಗೆ ಶ್ರೀ ಪದ್ಮಪುರಾಣಾಂತರ್ಗತವಾದ ಶ್ರೀ ಶಿವಗೀತೆಯಲ್ಲಿ ವಿಶ್ವರೂಪ
ಸಂದರ್ಶನಯೋಗವೆಂಬ ಏಳನೆಯ ಅಧ್ಯಾಯವು ಮುಗಿದುದು

|| ಶ್ರೀಃ ||

# ಶ್ರೀ ಶಿವಗೀತಾ

---

## || ಅಥಾಷ್ಟಮೋಽಧ್ಯಾಯಃ ||

|| ಶ್ರೀರಾಮ ಉವಾಚ ||

ಪಾಂಚಭೌತಿಕದೇಹಸ್ಯ ಚೋತ್ಪತ್ತಿರ್ವಿಲಯಃ ಸ್ಥಿತಿಃ ।
ಸ್ವರೂಪಂ ಚ ಕಥಂ ದೇವ ಭಗವನ್ ವಕ್ತುಮರ್ಹಸಿ || ೧ ||

|| ಶ್ರೀ ಮಹಾದೇವ ಉವಾಚ ||

ಪಂಚಭೂತೈಸ್ಸಮಾರಬ್ಧೋ ದೇಹೋಽಯಂ ಪಾಂಚಭೌತಿಕಃ ।
ತತ್ರ ಪ್ರಧಾನಂ ಪೃಥಿವೀ ಶೇಷಾಣಾಂ ಸಹಕಾರಿತಾ || ೨ ||

---

## ಎಂಟನೆಯ ಅಧ್ಯಾಯ

೧. ಪರಶಿವಾನುಗ್ರಹದಿಂದಲೇ ತತ್ವಾರ್ಥವನ್ನೆಲ್ಲಾ ಸಂಪೂರ್ಣವಾಗಿ ತಿಳಿದಿದ್ದರೂ, ಶ್ರೀರಾಮನು ಶಿವಾಜ್ಞೆಯಂತೆಯೂ, ಲೋಕಾನುಗ್ರಹಾರ್ಥವಾಗಿಯೂ, ತನ್ನ ಪ್ರಶ್ನೆಗೆ ಸದುತ್ತರವನ್ನು ಸಾಕ್ಷಾತ್‌ಪರಶಿವನಿಂದಲೇ ಹೇಳಿಸಬೇಕೆಂಬ ಅಭಿಲಾಷೆಯಿಂದಲೂ, ಮೊದಲು ಈ ರೀತಿ ಪ್ರಶ್ನೆಮಾಡಿದನು "ಷಡ್ಗುಣೈಶ್ವರ್ಯ ಪರಿಪೂರ್ಣನಾದ ಮಹಾದೇವನೇ, ಸೂಕ್ಷ್ಮಶರೀರವೆನಿಸಿದ ಲಿಂಗಶರೀರದಲ್ಲಿ ಪಂಚಭೂತಾತ್ಮಕವಾದ ಸ್ಥೂಲ ದೇಹವು ಹುಟ್ಟುವುದು ಹೇಗೆ ? ಕೊನೆಗೆ ಅದು ಲಯ ಹೊಂದುವ ಕ್ರಮವೆಂತು ? ಅದರ ಸ್ವರೂಪವೇನು ? ಈ ವಿಷಯವನ್ನು ನನಗೆ ವಿಸ್ತಾರವಾಗಿ ತಿಳಿಸಬೇಕು."

೨-೩. ಮಹಾದೇವನು ಶಿಷ್ಯವಾತ್ಸಲ್ಯವನ್ನು ಶ್ರೀರಾಮನಲ್ಲಿ ತೋರ್ಪಡಿಸುತ್ತಾ ರಾಮನ ಪ್ರಶ್ನೆಗಳಿಗೆ ಉತ್ತರರೂಪವಾಗಿ ಹೀಗೆ ನುಡಿದನು. "ಸಕಲರಿಗೂ

ಜರಾಯುಜೋಽಂಡಜಶ್ಚೈವ ಸ್ವೇದಜಶ್ಚೋದ್ಭಿದಸ್ತಥಾ ।
ಏವಂ ಚತುರ್ವಿಧಃ ಪ್ರೋಕ್ತೋ ದೇಹೋಽಯಂ ಪಾಂಚಭೌತಿಕಃ ॥ ೩ ॥

ಮಾನಸಸ್ತು ಪರಃ ಪ್ರೋಕ್ತೋ ದೇವಾನಾಮೇವ ಸ ಸ್ಮೃತಃ ।
ತತ್ರ ವಕ್ಷ್ಯೇ ಪ್ರಥಮತಃ ಪ್ರಧಾನತ್ವಾಜ್ಜರಾಯುಜಂ ॥ ೪ ॥

ಶುಕ್ಲಶೋಣಿತಸಂಭೂತಂ ಪಿತ್ರೋರೇವ ಜರಾಯುಜಂ ।
ಸ್ತ್ರೀಣಾಂ ಗರ್ಭಾಶಯೇ ಶುಕ್ಲಂ ಋತುಕಾಲೇ ವಿಶೇದ್ಯದಾ ॥ ೫ ॥

ಯೋಷಿತೋ ರಜಸಾ ಯುಕ್ತಂ ತದೇವ ಸ್ಯಾಜ್ಜರಾಯುಜಂ ।
ಬಾಹುಳ್ಯಾದ್ರಜಸಃ ಸ್ತ್ರೀ ಸ್ಯಾಚ್ಛುಕ್ಲಾಧಿಕ್ಯೇ ಪುಮಾನ್ಭವೇತ್ ॥ ೬ ॥

---

ಗೋಚರವಾಗುತ್ತಿರುವ ಈ ಸ್ಥೂಲ ದೇಹವು ಪೃಥಿವ್ಯಾದಿ ಪಂಚಭೂತಗಳಿಂದ ನಿರ್ಮಿತವಾದುದು ಅವುಗಳ ಸಮ್ಮೇಳನದಿಂದ ಈ ದೇಹವುಂಟಾಗಿ ಇದು ಪಾಂಚ ಭೌತಿಕವೆನಿಸಿದೆ ಈ ದೇಹದಲ್ಲಿ ಪೃಥಿವೀಭಾಗವೇ ಹೆಚ್ಚಾಗಿರುವುದು ಉಳಿದ ಜಲಾಂಶಾದಿಗಳು ಸ್ವಲ್ಪವಾಗಿರುವುದರಿಂದ ಅವು ಪೃಥಿವೀಭಾಗಕ್ಕೆ ಸಹಕಾರಿ ಗಳಾಗಿರುವುವು

೪–೫ ಪಂಚೀಕೃತ ಪಂಚಭೂತಗಳಿಂದ, ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜಗಳೆಂಬ ನಾಲ್ಕು ವಿಧಗಳಾದ ಸ್ಥೂಲಶರೀರಗಳು ಅವರವರ ಕರ್ಮಾಧೀನವಾಗಿ ಹುಟ್ಟುವುವು ಮಾನವಶರೀರವೆನಿಸಿದ ಇಚ್ಛಾಕಲ್ಪಿತದೇಹವು ದೇವತೆಗಳಿಗೂ ಇರುವುದು ಮೇಲೆ ಹೇಳಿದ ನಾಲ್ಕು ವಿಧದ ಸ್ಥೂಲದೇಹಗಳಲ್ಲಿ ಮೊದಲನೆಯದೇ ಜರಾಯುಜ ಅದೇ ಮುಖ್ಯವಾದುದು

೫–೬ ಜರಾಯುವೆಂದರೆ ಗರ್ಭದಚೀಲ ಇದರಿಂದ ಹೊರಗೆ ಬರುವ ಮನುಷ್ಯಪಶ್ವಾದಿಗಳ ಶರೀರಗಳು ಜರಾಯುಜಗಳು ಸ್ತ್ರೀಯರಿಗೆ ರಜೋದರ್ಶನ ವಾದ ದಿನದಿಂದ ಹದಿನಾರು ದಿನಗಳವರೆಗಿರುವ ಕಾಲವನ್ನು ಋತುಕಾಲವೆನ್ನುವರು ಆದಿಯಲ್ಲಿ ಮೂರುದಿನಗಳು ಕಳೆದು ಉಳಿದ ಋತುಕಾಲದಲ್ಲಿ ಸ್ತ್ರೀಪುರುಷರ ಪರಸ್ಪರ

ಶುಕ್ಲಶೋಣಿತಯೋಸ್ಸಾಮ್ಯೇ ಜಾಯತೇ ತು ನಪುಂಸಕಃ ।
ಋತುಸ್ನಾತಾ ಭವೇನ್ನಾರೀ ಚತುರ್ಥೇ ದಿವಸೇ ತತಃ || ೭ ||

ಋತುಕಾಲಸ್ತು ನಿರ್ದಿಷ್ಟ ಆಷೋಡಶದಿನಾವಧಿ
ತತ್ರಾಯುಗ್ಮದಿನೇ ಸ್ತ್ರೀ ಸ್ಯಾತ್ಪುಮಾನ್ಯುಗ್ಮದಿನೇ ಭವೇತ್ || ೮ ||

ಷೋಡಶೇ ದಿವಸೇ ಗರ್ಭೋ ಜಾಯತೇ ಯದಿ ಸುಭ್ರುವಃ ।
ಚಕ್ರವರ್ತೀ ತದಾ ರಾಜಾ ಜಾಯತೇ ಸ ನ ಸಂಶಯಃ || ೯ ||

---

ಸಂಪರ್ಕದಿಂದ ಸ್ತ್ರೀಯರ ಗರ್ಭಾಶಯದಲ್ಲಿ ಪುರುಷರ ವೀರ್ಯವು ಪ್ರವೇಶಿಸುವುದು. ಪುರುಷರ ಶುಕ್ಲವು ಸ್ತ್ರೀಯ ಶೋಣಿತದೊಡನೆ ಗರ್ಭಕೋಶದಲ್ಲಿ ನೇರುವುದರಿಂದ ಜರಾಯುಜದೇಹವು ಅಲ್ಲಿ ಉತ್ಪತ್ತಿಯಾಗುವುದು ಹಾಗೆ ಮೇಳನವಾಗುವಾಗ ಸ್ತ್ರೀಯ ರಜೋಭಾಗವು ಅಧಿಕವಾಗಿದ್ದರೆ ಸ್ತ್ರೀಯ ಆಕಾರವೂ, ಪುರುಷನ ಶುಕ್ಲ ಭಾಗವು ಹೆಚ್ಚಾಗಿದ್ದರೆ ಪುರುಷಾಕಾರವೂ ಆ ದೇಹದಲ್ಲಿ ಕಂಡುಬರುವುದು

೭–೮ ಶುಕ್ಲಶೋಣಿತಗಳು ಸಮಭಾಗದಲ್ಲಿ ಸೇರಿದರೆ ನಪುಂಸಕಾಕಾರದ ದೇಹವುದಯಿಸುವುದು ರಜಸ್ವಲೆಯಾದ ಸ್ತ್ರೀಯು ನಾಲ್ಕನೆಯ ದಿವಸ ಸ್ನಾನ ಮಾಡಿದರೆ ಆಕೆಯು ಋತುಸ್ನಾತಳೆನಿಸುವಳು ಹದಿನಾರು ದಿನಗಳ ಪರ್ಯಂತ ವಿರುವ ಆಕೆಯ ಋತುಕಾಲದಲ್ಲಿ ಐದು, ಏಳು, ಒಂಭತ್ತು ಈ ವಿಷಮ ಸಂಖ್ಯೆಯ ದಿನಗಳಲ್ಲಿ ಸ್ತ್ರೀಜನನವೂ, ಆರು, ಎಂಟು ಮೊದಲಾದ ಸಮಸಂಖ್ಯೆಯ ದಿನಗಳಲ್ಲಿ ಪುರುಷ ಜನನವೂ ಸಂಭವಿಸುವುದು

೯–೧೦ ಆದರೆ ಹದಿನಾರನೆಯ ದಿವಸ ಸ್ತ್ರೀಯ ಗರ್ಭದಲ್ಲಿ ಜನಿಸಿದ ಪುತ್ರನು ಚಕ್ರವರ್ತಿ ಲಕ್ಷಣಗಳಿಂದ ಕೂಡಿ ಮಹಾವ್ಯಕ್ತಿಯೆನಿಸುವನು ರಾಜ ಸದೃಶನಾಗಿ ಭೋಗಿಯಾಗುವನು ನಾಲ್ಕನೆಯ ದಿನ ಋತುಸ್ನಾನಮಾಡಿದೊಡ ನೆಯೇ ಸ್ತ್ರೀಯು ಯಾರ ಮುಖವನ್ನು ನೋಡುವಳೋ ತತ್ಸದೃಶವಾಗಿ ಆಕೆಯ

**ಋತುಸ್ನಾತಾ ಯಸ್ಯ ಪುಂಸಃ ಸಾಕಾಂಕ್ಷಂ ಮುಖಮೀಕ್ಷತೇ ।**
**ತದಾಕೃತಿರ್ಭವೇದ್ಗರ್ಭಸ್ತತ್ಪಶ್ಯೇತ್ಸ್ವಾಮಿನೋ ಮುಖಂ ॥ ೧೦ ॥**

**ಯಾಸ್ತಿ ಚರ್ಮಾವೃತಿಸ್ಸೂಕ್ಷ್ಮಾ ಜರಾಯುಸ್ಸಾ ನಿಗದ್ಯತೇ ।**
**ಶುಕ್ಲಶೋಣಿತಯೋರ್ಯೋಗಸ್ತಸ್ಮಿನ್ನೇವ ಭವೇದ್ಯತಃ ॥ ೧೧ ॥**

**ತತ್ರ ಗರ್ಭೋ ಭವೇದ್ಯಸ್ಮಾತ್ತೇನ ಪ್ರೋಕ್ತೋ ಜರಾಯುಜಃ ।**
**ಅಂಡಜಾಃ ಪಕ್ಷಿಸರ್ಪಾದ್ಯಾಃ ಸ್ವೇದಜಾ ಮಶಕಾದಯಃ ॥ ೧೨ ॥**

**ಉದ್ಭಿಜ್ಜಾಸ್ತೃಣಗುಲ್ಮಾದ್ಯಾ ಮಾನಸಾಶ್ಚ ಸುರರ್ಷಯಃ ।**
**ಜನ್ಮಕರ್ಮವಶಾದೇವ ನಿಷಿಕ್ತಂ ಸ್ಮರಮಂದಿರೇ ॥ ೧೩ ॥**

---

ಗರ್ಭಪಿಂಡವುದಯಿಸುವುದು ಆದಕ್ಕಾಗಿ ಸ್ತ್ರೀಯು ಆ ಕಾಲದಲ್ಲಿ ತನ್ನ ಪತಿಯ ಮುಖವನ್ನೇ ನೋಡಬೇಕು

೧೧–೧೨ ತೆಳುವಾದ ಚರ್ಮದಿಂದ ಆವೃತವಾದ ಗರ್ಭಕೋಶಕ್ಕೆ ಜರಾಯುವೆಂದು ಹೆಸರು ಅದರಲ್ಲಿಯೇ ಸ್ತ್ರೀಪುರುಷರ ಶುಕ್ಲ ಮತ್ತು ಶೋಣಿತ ಇವುಗಳ ಸಂಸರ್ಗವುಂಟಾಗಿ, ಅಲ್ಲಿಯೇ ನಿಂತು ಅದು ಗರ್ಭವೆನಿಸಿ ಬೆಳೆಯುವುದು ಆದ್ದರಿಂದಲೇ ಅಂತಹ ದೇಹಕ್ಕೆ ಜರಾಯುಜವೆಂದು ಹೆಸರು ಮೊಟ್ಟೆಯಿಂದ ಹುಟ್ಟಿದ ಪಕ್ಷಿ, ಹಾವು ಮುಂತಾದುವುಗಳು ಅಂಡಜಗಳು ಸೊಣಮೇ ಮೊದಲಾದುವುಗಳು ಬೆವರಿನಿಂದ ಹುಟ್ಟುವುವು ಅವು ಸ್ವೇದಜಗಳೆನಿಸುವುವು

೧೩–೧೪ ನೆಲವನ್ನು ಭೇದಿಸಿಕೊಂಡು ಹುಟ್ಟುವಂತಹ ಮರಗಿಡಗಳು ಉದ್ಭಿಜ್ಜಗಳು ಯೋಗಶಾಸ್ತ್ರಮಹಿಮೆಯಿಂದ ಮನಸ್ಸಿನ ಕಲ್ಪನೆಯಂತೆ ಹುಟ್ಟುವ ದೇಹಗಳು ದೇವತೆಗಳಿಗೆ ಮತ್ತು ಋಷಿಗಳಿಗೆ ಸಂಬಂಧಪಟ್ಟುವು ಪೂರ್ವಜನ್ಮಕರ್ಮವಶದಿಂದ ಜನ್ಮತಾಳುವ ಪ್ರಾಣಿಯು ಸ್ತ್ರೀಯೋನಿಯಲ್ಲಿ ಪುರುಷರಜಸ್ಸಂಪರ್ಕದಿಂದ ಮೊದಲನೆಯ ತಿಂಗಳಿನಲ್ಲಿ ಕೇವಲ ದ್ರವರೂಪದಲ್ಲಿ ನಿಲ್ಲುವುದು

ಶುಕ್ಲಂ ರಜಸ್ಸಮಾಯುಕ್ತಂ ಪ್ರಥಮೇ ಮಾಸಿ ತದ್ದ್ರವಂ ।
ಬುದ್ಬುದಂ ಕಲಲಂ ತತ್ಸ್ಯಾತ್ತತಃ ಪೇಶೀ ಭವೇದಿದಂ । ೧೪ ॥

ಪೇಶೀ ಘನಂ ದ್ವಿತೀಯೇ ತು ಮಾಸಿ ಪಿಂಡಃ ಪ್ರಜಾಯತೇ ।
ಕರಾಂಘ್ರಿಶೀರ್ಷಕಾದೀನಿ ತೃತೀಯೇ ಸಂಭವಂತಿ ಹಿ ॥ ೧೫ ॥

ಅಭಿವ್ಯಕ್ತಿಶ್ಚ ಜೀವಸ್ಯ ಚತುರ್ಥೇ ಮಾಸಿ ಜಾಯತೇ ।
ತತಶ್ಚಲತಿ ಗರ್ಭೋಽಪಿ ಜನನೀಜಠರೇ ಸ್ವತಃ ॥ ೧೬ ॥

ಪುತ್ರಶ್ಚೇದ್ದಕ್ಷಿಣೇ ಪಾರ್ಶ್ವೇ ಕನ್ಯಾ ವಾಮೇ ಚ ತಿಷ್ಠತಿ ।
ನಪುಂಸಕಸ್ತೂದರಸ್ಯ ಭಾಗೇ ತಿಷ್ಠತಿ ಮಧ್ಯತಃ ॥ ೧೭ ॥

---

ಇದೇ ಗರ್ಭೋತ್ಪತ್ತಿಯಕ್ರಮ ಮೊದಲನೆಯ ತಿಂಗಳಲ್ಲಿ ಆ ದ್ರವವು ಕ್ರಮವಾಗಿ ಗುಳ್ಳೆಯ ಆಕಾರವನ್ನು ತಾಳುವುದು ಹಾಗೆಯೇ ಕೆಸರಿನಂತೆ ಸ್ವಲ್ಪ ಗಟ್ಟಿಯಾಗುವುದು ಕ್ರಮವಾಗಿ ಘನೀಭೂತವಾಗುವುದು ಹೀಗೆ ಒಂದೇ ತಿಂಗಳಿನಲ್ಲಿಯೇ ಗರ್ಭಪಿಂಡವು ನಾಲ್ಕು ಅವಸ್ಥೆಗಳನ್ನು ಪಡೆಯುವುದು.

೧೫-೧೬ ಎರಡನೆಯ ತಿಂಗಳಲ್ಲಿ ಕೇವಲ ಒಂದು ಉಂಡೆಯಂತಾಗುವುದು. ಮೂರನೆಯ ತಿಂಗಳಿನಲ್ಲಿ ಕೈ, ಕಾಲು, ತಲೆ ಇವುಗಳ ಆಕಾರವುದಯಿಸುವುದು ನಾಲ್ಕನೆಯ ತಿಂಗಳಲ್ಲಿ ಜೀವನಿಗೆ ಉಪಾಧಿಯೆನಿಸಿದ ಲಿಂಗದೇಹವುದ್ಭವಿಸುವುದು ಐದನೆಯ ಮಾಸದಲ್ಲಿ ಗರ್ಭವು ಸ್ತ್ರೀಯ ಉದರದಲ್ಲಿ ಚಲಿಸಲಾರಂಭಿಸುವುದು

೧೭-೧೮ ಗರ್ಭವು ಪುರುಷಾಕಾರ ಪಡೆಯುವುದಾದರೆ ಸ್ತ್ರೀಯ ಬಲಗಡೆಯಲ್ಲಿಯೂ, ಸ್ತ್ರೀಯ ಆಕಾರವುಳ್ಳದ್ದಾದರೆ ಎಡಭಾಗದಲ್ಲಿಯೂ, ನಪುಂಸಕಾಕಾರವಾದರೆ ಸ್ತ್ರೀಯ ಉದರಮಧ್ಯದಲ್ಲಿಯೂ ಚಲಿಸುವುದು ಪುಂಜನನವಾಗುವುದಾದರೆ ಆಕಾಲದಲ್ಲಿ ತಾಯಿಯು ಬಲಭಾಗಕ್ಕೆ ತಿರಿಗಿಕೊಂಡು ಮಲಗುವಳು

ಅತೋ ದಕ್ಷಿಣಪಾರ್ಶ್ವೇ ತು ಶೇತೇ ಮಾತಾ ಪುಮಾನ್ಯದಿ ।
ಅಂಗಪ್ರತ್ಯಂಗಭಾಗಾಶ್ಚ ಸೂಕ್ಷ್ಮಾಸ್ಸ್ಯುರ್ಯುಗಪತ್ತದಾ ॥ ೧೮ ॥

ವಿಹಾಯ ಶ್ಮಶ್ರುದಂತಾದೀನ್ ಜನ್ಮಾನಂತರಸಂಭವಾನ್ ।
ಚತುರ್ಥೇ ವ್ಯಕ್ತತಾ ತೇಷಾಂ ಭಾವಾನಾಮಪಿ ಜಾಯತೇ ॥ ೧೯ ॥

ಪುಂಸಾಂ-ಸ್ಥೈರ್ಯಶೌರ್ಯಾದಯೋ ಭಾವಾ ಭೀರುತ್ವಾದ್ಯಾಸ್ತು ಯೋಷಿತಾಂ ।
ನಪುಂಸಕೇ ಚ ತೇ ಮಿಶ್ರಾ ಭವಂತಿ ರಘುನಂದನ ॥ ೨೦ ॥

ಮಾತೃಜಂ ಚಾಸ್ಯ ಹೃದಯಂ ವಿಷಯಾನಭಿಕಾಂಕ್ಷತಿ ।
ತತೋ ಮಾತುರ್ಮನೋಽಭೀಷ್ಟಂ ಕುರ್ಯಾದ್ಗರ್ಭವಿವೃದ್ಧಯೇ ॥೨೧ ॥

---

ಆ ತಿಂಗಳಿನಲ್ಲಿಯೇ ಕರಚರಣಾದಿ ಅಂಗಗಳೂ, ಬೆರಳು ಮುಂತಾದ ಪ್ರತ್ಯಂಗಗಳೂ ಕ್ರಮಕ್ರಮವಾಗಿ ಉತ್ಪನ್ನವಾಗುವುವು

೧೯-೨೦ ಜನನವಾದ ಮೇಲೆ ಹುಟ್ಟುವಂತಹ ಕೂದಲು, ಹಲ್ಲು ಇವುಗಳನ್ನು ಬಿಟ್ಟು ಉಳಿದ ಅವಯವಗಳೆಲ್ಲಾ ನಾಲ್ಕನೆಯ ತಿಂಗಳಿನಲ್ಲಿಯೇ ವ್ಯಕ್ತವಾಗಿ ಹುಟ್ಟುವುವು ಅದೇ ಮಾಸದಲ್ಲಿಯೇ ಸ್ತ್ರೀಪುರುಷಾನುಗುಣವಾಗಿ ಭಾವವೂ ಉದ್ಭವಿಸುವುದು ಧೈರ್ಯಸ್ಥೈರ್ಯಶೌರ್ಯಾದಿಭಾವಗಳೂ ಪುರುಷಗರ್ಭಕ್ಕೂ, ಚಾಂಚಲ್ಯ, ಭಯ ಮುಂತಾದ ಭಾವಗಳು ಸ್ತ್ರೀಗರ್ಭಕ್ಕೂ, ಇವೆಲ್ಲವುಗಳ ಮಿಶ್ರಣವು ನಪುಂಸಕ ಗರ್ಭಕ್ಕೂ ಸಂಭವಿಸುವುವು

೨೧-೨೨ ಮಾತೃಗರ್ಭಸ್ಥವಾದ ಆ ಗರ್ಭಪಿಂಡವು ಆ ತಿಂಗಳಿನಲ್ಲಿಯೇ ವಿಷಯಸುಖಗಳನ್ನು ಬಯಸುವುದು ಅದಕ್ಕಾಗಿಯೇ ತಾಯಿಯು ನಾನಾ ರೀತಿಯ ವಸ್ತುಗಳನ್ನು ಬಯಸುವಳು ಗರ್ಭಪಿಂಡದ ಬೆಳವಣಿಗೆಗಾಗಿ ಆಕಾಲದಲ್ಲಿ ತಾಯಿಯ ಮನೋಽಭೀಷ್ಟವನ್ನು ಸಲ್ಲಿಸುತ್ತಿರಬೇಕು ಹೀಗೆ ತಾಯಿಯ ಗರ್ಭದಲ್ಲಿ

**ತಾಂ ಚ ದ್ವಿಹೃದಯಾಂ ನಾರೀಮಾಹುರ್ದೌಹೃದಿನೀಂ ತತಃ ।**
**ಅದಾನಾದ್ದೌಹೃದಾನಾಂ ಸ್ಯಾದ್ಗರ್ಭಸ್ಯ ವ್ಯಂಗತಾದಯಃ ॥ ೨೨ ॥**

**ಮಾತುರ್ಯದ್ವಿಷಯೇ ಲೋಭಸ್ತದೇವಾರ್ತಾಯತೇ ಸುತಃ ।**
**ಪ್ರವೃದ್ಧಂ ಪಂಚಮೇ ಚಿತ್ತಂ ಮಾಂಸಶೋಣಿತಪುಷ್ಟತಾ ॥ ೨೩ ॥**

**ಷಷ್ಠೇಽಸ್ಥಿಸ್ನಾಯುನಖರಕೇಶರೋಮವಿವಿಕ್ತತಾ ।**
**ಬಲವರ್ಣೌ ಚೋಪಚಿತೌ ಸಪ್ತಮೇ ತ್ವಂಗಪೂರ್ಣತಾ ॥ ೨೪ ॥**

**ಪಾದಾಂತರಿತಹಸ್ತಾಭ್ಯಾಂ ಶ್ರೋತ್ರರಂಧ್ರೇ ಪಿಧಾಯ ಸಃ ।**
**ಉದ್ವಿಗ್ನೋ ಗರ್ಭಸಂವಾಸಾದಸ್ತಿ ಗರ್ಭಭಯಾನ್ವಿತಃ ॥ ೨೫ ॥**

---

ಎರಡು ಹೃದಯಗಳಿರುವುದರಿಂದ ಗರ್ಭಿಣಿಯನ್ನು ದೌಹೃದಿನಿಯೆನ್ನುವರು ಗರ್ಭಿಣಿಯ ಇಷ್ಟಾರ್ಥಗಳನ್ನು ಸರಿಯಾಗಿ ನೆರವೇರಿಸದಿದ್ದರೆ ಜನಿಸುವ ಶಿಶುವು ಅಂಗ ವಿಹೀನವಾಗಿಯೋ, ಅಥವಾ ಬುದ್ಧಿಶೂನ್ಯವಾಗಿಯೋ ಆಗುವುದು

೨೩—೨೪ ತಾಯಿಯು ತನ್ನ ಬಯಕೆಯ ಕಾಲದಲ್ಲಿ ಯಾವ ವಿಷಯವನ್ನು ಅತಿಯಾಗಿ ಇಚ್ಛಿಸುವಳೋ, ಅದೇ ವಸ್ತುವನ್ನೇ ಮುಂದೆ ಜನಿಸುವ ಶಿಶುವೂ ಅಪೇಕ್ಷಿಸುವುದು ಐದನೆಯ ತಿಂಗಳಿನಲ್ಲಿಯೇ ಶಿಶುವಿಗೆ ಜ್ಞಾನೋತ್ಪತ್ತಿಯಾಗು ವುದು ರಕ್ತ, ಮಾಂಸ ಇವು ಆ ಗರ್ಭಪಿಂಡವನ್ನು ಪುಷ್ಟಿಗೊಳಿಸುವುವು ಆರನೆಯ ಮಾಸದಲ್ಲಿ ಮೂಳೆ, ನರ, ಉಗುರು ಕೂದಲು, ರೋಮ ಇವು ಪ್ರತ್ಯೇಕ ಪ್ರತ್ಯೇಕ ವಾಗಿ ರೂಪುಗೊಳ್ಳುವುವು ಏಳನೆಯ ತಿಂಗಳಿನಲ್ಲಿ ಬಲ, ಬಣ್ಣ ಇವು ಪ್ರತಿ ಅವ ಯವದಲ್ಲಿಯೂ ಹೆಚ್ಚುಹೆಚ್ಚಾಗಿ ಅಭಿವೃದ್ಧಿಹೊಂದುವುವು

೨೫—೨೬ ಸಪ್ತಮಮಾಸದಲ್ಲಿ ಶಿಶುವು ಮಾತೃಗರ್ಭದಲ್ಲಿ ತನ್ನ ಎರಡು ಕೈಗ ಳನ್ನೂ ಕಾಲು ಸಂದಿಯಿಂದ ತಂದು, ತನ್ನ ಎರಡು ಕಿವಿಗಳನ್ನೂ ಮುಚ್ಚಿಕೊಂಡಿರುವ ಆಕಾರದಲ್ಲಿ ನಿಂತಿರುವುದು ಮತ್ತು ಆ ಶಿಶುವಿಗೆ ಆಗ ಭೂತಭವಿಷ್ಯದ ವಿಚಾರಗಳು ಸ್ಫುರಿಸಿ ಮನಸ್ಸಿಗ ಉದ್ವೇಗವುಂಟಾಗುವುದು ಗರ್ಭವು ಯಾವ ರೀತಿ ತಿರುಗು

ಅಪಿ ಭೂರ್ಣತಪ್ರಬೋಧೋऽಸೌ ಗರ್ಭದುಃಖಾದಿಸಂಯುತಃ ।
ಹಾ ಕಷ್ಟಮಿತಿ ನಿರ್ವಿಣ್ಣಃ ಸ್ವಾತ್ಮಾನಂ ಶೋಚತಿ ಶೈಥೆ ॥ ೨೬ ॥

ಅನುಭೂತಾ ಮಹಾಸಹ್ಯಾಃ ಪುರಾ ಮರ್ಮಚ್ಛಿದೋऽಸಕೃತ್ ।
ಕರಂಭವಾಲುಕಾಸ್ತಪ್ತಾ ಮಾಂ ದಹಂತ್ಯಸುಖಾತ್ರಯಾಃ ॥ ೨೭ ॥

ಜಠರಾನಲಸಂತಪ್ತಾಃ ಪಿತ್ತಾಖ್ಯರಸವಿಪ್ರುಷಃ ।
ಗರ್ಭಾಶಯೇ ನಿಮಗ್ನಂ ತು ದಹಂತ್ಯತಿಭೃಶಂ ಹಿ ಮಾಂ ॥ ೨೮ ॥

ಔದರ್ಯಕ್ರಿಮಿವಕ್ತ್ರಾಣಿ ಕೂಟಶಾಲ್ಮಲಿಕಂಟಕೈಃ ।
ತುಲ್ಯಾನಿ ಚ ತುದಂತ್ಯಾರ್ತಂ ಪಾರ್ಶ್ವಾಸ್ಥಿಕ್ರಕಚಾರ್ದಿತಂ ॥ ೨೯ ॥

---

ವುದೋ ಎಂಬ ಭಯವೂ, ಮುಂದಿನ ಜೀವನದ ಹಿಂಸೆಯೂ, ಹಿಂದಿನಜನ್ಮದಲ್ಲಿ ಪಟ್ಟ ಜೀವನದ ದುಃಖವೂ ಮನಸ್ಸಿಗೆ ಕಳವಳನ್ನುಂಟುಮಾಡುವುದು ಮತ್ತು ಆಗ ಸಂಕುಚಿತವಾಗಿರುವ ಮಾತೃಗರ್ಭದ ದುಃಖವನ್ನೂ ತಾಳಲಾರದೆ, ಅಯ್ಯೋ ಕಷ್ಟವು ಎಂದು ಗೋಳಿಡುವುದು ಮನಸ್ಸಿನಲ್ಲಿಯೇ ವಿಶೇಷವಾದ ದುಃಖಾನುಭವ ಹೊಂದುವುದು

೨೭–೨೮ ಹಿಂದಿನ ಜನ್ಮದಲ್ಲಿ ಮಾಡಿದ ಪಾಪಫಲವನ್ನು ನರಕದಲ್ಲಿ ಯಮಶಿಕ್ಷೆಯಿಂದ ಅನುಭವಿಸಿದ ಕ್ರಮವನ್ನೂ ಸ್ಮರಿಸುತ್ತಾ ಶಿಶುವು ಈರೀತಿ ಶೋಕಿಸುವುದು—ಅಯ್ಯೋ! ನರಕದಲ್ಲಿ ನನ್ನನ್ನು ಯಮದೂತರು ಮರ್ಮಭೇದಕ ವಾದ ಶಿಕ್ಷೆಗಳಿಂದ ಹಿಂಸಿಸಿದರು ಕಾದ ಮರಳಿನ ಮೇಲೆ ನಿಲ್ಲಿಸಿ ನನ್ನ ದೇಹ ವನ್ನೆಲ್ಲಾ ಚೆನ್ನಾಗಿ ಹುರಿಸಿದರು ಈ ಗರ್ಭದಲ್ಲಾದರೋ ಮಾತೃಗರ್ಭಗತವಾದ ಜಠರಾಗ್ನಿಯು ನನ್ನನ್ನು ಸುಡುತ್ತಿರುವುದು ಪಿತ್ತರಸವೇ ಮೊದಲಾದ ಕ್ಷಾರ ರಸಗಳು ನನ್ನನ್ನು ಹಿಂಸೆ ಮಾಡುತ್ತಿವೆ ಅಯ್ಯೋ! ಈಗೇನು ಮಾಡಲಿ ಎಂದು ಗರ್ಭಪಿಂಡವು ಪರಿತಪಿಸುವುದು.

೨೯–೩೦ ಮಾತೃವಿನ ಉದರಗತವಾದ ಕ್ರಿಮಿಗಳು ಗರ್ಭಪಿಂಡವನ್ನು ಕಚ್ಚುವಾಗ ಅದಕ್ಕೆ ಮುಳ್ಳಿನ ರಾಶಿಯಿಂದ ಚುಚ್ಚಿದಂತೆ ನೋವಾಗುವುದು

ಗರ್ಭೇ ದುರ್ಗಂಧಭೂಯಿಷ್ಠೇ ಜಠರಾಗ್ನಿಪ್ರದೀಪಿತೇ ।
ದುಃಖಂ ಮಯಾಪ್ತಂ ಯತ್ತಸ್ಮಾತ್ಕನೀಯಃ ಕುಂಭಪಾಕಜಂ ॥ ೩೦ ॥

ಪೂಯಾಸೃಕ್‌ಶ್ಲೇಷ್ಮಪಾಯಿತ್ವಂ ವಾಂತಾಶಿತ್ವಂ ಚ ಯದ್ಭವೇತ್ ।
ಅಶುಚೌ ಕ್ರಿಮಿಭಾವಶ್ಚ ತತ್ಪ್ರಾಪ್ತಂ ಗರ್ಭಶಾಯಿನಾ ॥ ೩೧ ।

ಗರ್ಭಶಯ್ಯಾಂ ಸಮಾರುಹ್ಯ ದುಃಖಂ ಯಾದೃಙ್ಮಯಾಪಿ ಯತ್ ।
ನಾತಿಶೇತೇ ಮಹದ್ದುಃಖಂ ನಿಶ್ಶೇಷಂ ನರಕೇಷು ಯತ್ ॥ ೩೨ ॥

ಏವಂ ಸ್ಮರನ್ ಪುರಾ ಪ್ರಾಪ್ತಾ ನಾನಾಜಾತೀಶ್ಚ ಯಾತನಾಃ ।
ಮೋಕ್ಷೋಪಾಯಮಭಿಧ್ಯಾಯನ್ ವರ್ತತೇಽಭ್ಯಾಸತತ್ಪರಃ ॥ ೩೩ ॥

---

ತಾಯಿಯ ಒರಟಾದ ಪಕ್ಕೆಯ ಮೂಳೆಗಳು ಗರ್ಭಪಿಂಡವನ್ನು ಒತ್ತಿದಾಗ ಅದು ಗರಗಸಕ್ಕೆ ಸಿಕ್ಕಿದಂತೆ ವ್ಯಥೆಪಡುವುದು ಮಾತೃವಿನ ಜಠರಾಗ್ನಿಯಿಂದ ಬೆಂದು, ಹಾಗೆಯೇ ತಾಯಿಯ ದೇಹಜನ್ಯವಾದ ದುರ್ಗಂಧವು ಪೀಡಿಸುವಾಗ ಆ ಗರ್ಭ ಪಿಂಡವು ಕುಂಭೀಪಾಕನರಕದ ದುಃಖವನ್ನೂ ಕಮ್ಮಿಯೆಂದು ಭಾವಿಸುವುದು

೩೧–೩೨ ಮಾತೃಗರ್ಭದಲ್ಲಿದ್ದು ರಕ್ತಜನ್ಯವಾದ ಕೀವು, ಶ್ಲೇಷ್ಮ, ಅರ್ಧ ಜೀರ್ಣವಾದ ಆಹಾರರಸ ಇವುಗಳನ್ನು ತಿಂದು, ಮಲಮೂತ್ರದಲ್ಲಿರುವ ಕ್ರಿಮಿಗಳಂತೆ ನಾನೂ ಜೀವನವು ಗರ್ಭದಲ್ಲಿ ಪ್ರಾಪ್ತವಾಯಿತಲ್ಲಾ ಎಂದು ದುಃಖಿಸುವುದು ಮತ್ತು ಈಗ, ಗರ್ಭದಲ್ಲಿ ಒದಗುತ್ತಿರುವ ದುಃಖವು ನಾನಾ ವಿಧಗಳಾದ ನರಕಗಳಿಂದ ಸಂಭವಿಸುವ ದುಃಖರಾಶಿಗಿಂತ ಪ್ರಬಲವಾಗಿರುವುದಲ್ಲಾ ಎಂದು ಆ ಶಿಶುವು ಗೋಳಾಡುವುದು.

೩೩–೩೪ ಹೀಗೆ ಶಿಶುವು ಏಳನೆಯ ತಿಂಗಳಲ್ಲಿ ಪೂರ್ವಜನ್ಮವೃತ್ತಾಂತ ವನ್ನು ಸ್ಮರಿಸಿಕೊಂಡು ನಾನಾ ರೀತಿಯ ಯಾತನೆಯನ್ನು ಗರ್ಭದಲ್ಲಿಯೇ ಅನು ಭವಿಸುತ್ತಾ, ಮುಂದೆ ಈ ವಿಧವಾದ ದುಃಖವನ್ನು ಪಡೆಯದಂತೆ ಮೋಕ್ಷವನ್ನು ಸಂಪಾದಿಸಬೇಕೆಂದು ಆಶಿಸುವುದು ಎಂಟನೆಯ ತಿಂಗಳಲ್ಲಿ ಚರ್ಮವೂ, ಓಡಾಡುವ

ಅಷ್ಟಮೇ ತ್ವಕ್ಛ್ರತೀ ಸ್ಯಾತಾಮೋಜಸ್ತೇಜಶ್ಚ ಹೃದ್ಭವಂ ।
ಶುಭ್ರಮಾಪೀತರಕ್ತಂ ಚ ನಿಮಿತ್ತಂ ಜೀವಿತೇ ಮತಂ ॥ ೩೪ ॥

ಮಾತರಂ ಚ ಪುನರ್ಗರ್ಭಂ ಚಂಚಲಂ ಯತ್ಪ್ರಧಾವತಿ ।
ತತೋ ಜಾತೋಽಷ್ಟಮೇ ಮಾಸಿ ನ ಜೀವತ್ಯೋಜಸೋಜ್ಝಿತಃ ॥ ೩೫ ॥

ಕಿಂಚಿತ್ಕಾಲಮವಸ್ಥಾನಂ ಸಂಸ್ಕಾರಾತ್ಪಿಂಡಿತಾಂಗವತ್ ।
ಸಮಯಃ ಪ್ರಸವಸ್ಯ ಸ್ಯಾನ್ಮಾಸೇಷು ನವಮಾದಿಷು ॥ ೩೬ ॥

ಮಾತುರಸ್ರವಹಾಂ ನಾಡೀಮಾಶ್ರಿತ್ಯಾನ್ವವಕಾರಿತಾ ।
ನಾಭಿಸ್ಥನಾಡೀ ಗರ್ಭಸ್ಯ ಮಾತ್ರಾಹಾರರಸಾವಹಾ ॥ ೩೭ ॥

---

ಶಕ್ತಿಯೂ ಗರ್ಭಸ್ಥ ಶಿಶುವಿಗೆ ವೃದ್ಧಿಹೊಂದುವುದು ಮತ್ತು ಹೃದಯಗತವಾಗಿರುವ ಓಜಸ್ಸು ಮತ್ತು ತೇಜಸ್ಸು ಇವು ಶುಭ್ರವರ್ಣದಿಂದಲೂ, ಮಾಸಲು ಕೆಂಪು ಬಣ್ಣದಿಂದಲೂ ರಂಜಿಸುತ್ತ ಶಿಶುವಿನ ಹೃದಯದಲ್ಲಿ ಉತ್ಪನ್ನವಾಗುವುವು.

೩೫–೩೭ ಆದರೆ ಎಂಟನೆಯ ತಿಂಗಳಿನಲ್ಲಿ ಶಿಶುವಿನ ಹೃದಯದಲ್ಲಿ ಹುಟ್ಟುವ ಓಜಸ್ಸು ಚಾಂಚಲ್ಯವನ್ನು ಪಡೆದು ಅದೃಷ್ಟವಶದಿಂದ ಮತ್ತೆ ಮಾತೃ ಗರ್ಭವನ್ನು ಪ್ರವೇಶಿಸುವುದಾದರೆ, ಆಗ ಪ್ರಸವವಾಗುವುದು ಹಾಗೆ ಪ್ರಸವವಾದ ಶಿಶುವು ಮಾತ್ರ ಬದುಕಲಾರದು ಏಕೆಂದರೆ ಓಜೋವಿಹೀನವಾದ ಶಿಶುವಿನಲ್ಲಿ ಪ್ರಾಣವಾಯುವು ನಿಲ್ಲಲಾರದು. ಒಂಭತ್ತನೆಯ ತಿಂಗಳೇ ನಿಜವಾದ ಪ್ರಸವ ಕಾಲವು ಆಗಲೂ ಕಾರಣಾಂತರದಿಂದ ಪಿಂಡೀಭೂತವಾಗಿಯೇ ಶಿಶುವು ಗರ್ಭದಲ್ಲಿಯೇ ನಿಲ್ಲುವುದುಂಟು ಹೀಗೆ ಗರ್ಭಭಾರದಿಂದ ಮಾತೃವಿನ ನಾಭೀಗತವಾದ ರಕ್ತನಾಡಿಯು ವಿಸ್ತಾರವುಳ್ಳದ್ದಾಗುವುದು ಆ ನಾಡಿಯು ತಾಯಿಯ ಆಹಾರ ರಸವನ್ನು ದೇಹಕ್ಕೆ ಒದಗಿಸುವುದು. ಅದೇ ರಸವಿಶೇಷದಿಂದಲೇ ಶಿಶುವೂ ಸಹ ಬೆಳೆಯುತ್ತ ಬರುವುದು

ತೇನ ಜೀವತಿ ಗರ್ಭೋಽಪಿ ಮಾತ್ರಾಹಾರೇಣ ಪೋಷಿತಃ ।
ಅಸ್ಥಿಯಂತ್ರವಿನಿಷ್ಪಿಷ್ಟಃ ಪತಿತಃ ಕುಕ್ಷಿವರ್ತ್ಮನಾ ॥ ೩೮ ॥

ಮೇದೋಽಸೃಗ್ದಿಗ್ಧಸರ್ವಾಂಗೋ ಜರಾಯುಪುಟಸಂವೃತಃ ।
ನಿಷ್ಕ್ರಾಮನ್ ಭೃಶದುಃಖಾರ್ತೋ ರುದನ್ನುಚ್ಚೈರಧೋಮುಖಃ ॥ ೩೯ ॥

ಯಂತ್ರಾದೇವ ವಿನಿರ್ಮುಕ್ತಃ ಪತತ್ಯುತ್ತಾನಶಾಯ್ಯುತ ।
ಅಕಿಂಚಿತ್ಕರಸ್ತದಾ ಲೋಕೈರ್ಮಾಂಸಪೇಶೀವದಾಸ್ಥಿತಃ ॥ ೪೦ ॥

ಶ್ವಮಾರ್ಜಾರಾದಿದಂಷ್ಟ್ರಿಭ್ಯೋ ರಕ್ಷ್ಯತೇ ದಂಡಪಾಣಿಭಿಃ ।
ಪಿತೃವದ್ರಾಕ್ಷಸಂ ವೇತ್ತಿ ಮಾತೃವದ್ಡಾಕಿನೀಮಪಿ ॥ ೪೧ ॥

ಪೂಯಂ ಪಯೋವದಜ್ಞಾನಾದ್ದೀರ್ಘಕಷ್ಟಂ ತು ಶೈಶವಂ ।
ಶ್ಲೇಷ್ಮಣಾ ಪಿಹಿತಾ ನಾಡೀ ಸುಷುಮ್ನಾ ಯಾವದೇವ ತು ॥ ೪೨ ॥

---

೩೮–೪೦ ನವಮಮಾಸದಲ್ಲಿ ಹೀಗೆ ಗರ್ಭವು ಬೆಳೆದು ಭಾರದಿಂದ ಅಧೋಮುಖನಾಗಿ, ಮಾತೃಯೋನಿಯಂತ್ರದ ಸುತ್ತಲೂ ಇರುವ ಮೂಳೆಗಳಿಂದ ಇರುಕಿಸಲ್ಪಟ್ಟು, ಬಹುಕಷ್ಟದಿಂದ ಯೋನಿಯಮೂಲಕ ಭೂಪತನಹೊಂದುವುದು ಪ್ರಸವಕಾಲದಲ್ಲಿ ತಾಯಿಯ ದೇಹಜನ್ಯವಾದ ಮೇದಸ್ಸು, ರಕ್ತ ಇವುಗಳಿಂದ ಬಳಿಯಲ್ಪಟ್ಟು ಅಸಹ್ಯಯಾತನೆಯನ್ನು ಸಹಿಸುತ್ತಾ, ಗಟ್ಟಿಯಾಗಿ ಅಳುತ್ತಾ ಅಧೋಮುಖವಾಗಿ ಭೂಮಿಯ ಮೇಲೆ ಬೀಳುವುದು. ಹೀಗ ಬಂಧನದಿಂದ ತಪ್ಪಿಸಿಕೊಂಡಂತೆ ಮಾತೃಗರ್ಭದಿಂದ ಜಾರಿ ಭೂಮಿಯ ಮೇಲೆ ಬಿದ್ದು, ಏನು ಮಾಡುವುದಕ್ಕೂ ಸಾಮರ್ಥ್ಯವಿಲ್ಲದ ಕೇವಲ ಮಾಂಸದ ಉಂಡೆಯಂತೆ ಪರಾಧೀನವಾಗಿ ನಿಲ್ಲುವುದು

೪೧–೪೨ ಗರ್ಭದಿಂದ ಭೂಮಿಯನ್ನು ಹೊಂದಿದ ಆ ಶಿಸುವು ಬೆಕ್ಕು, ನಾಯಿ ಮುಂತಾದ ಮಾಂಸಭಕ್ಷಪ್ರಾಣಿಗಳಿಗೆ ಆಹಾರವಾಗಿ ಪರಿಣಮಿಸುವುದು ಅದಕ್ಕಾಗಿ ಮಗುವಿನ ರಕ್ಷಕರು ಆ ಮಗುವನ್ನು ಮೇಲಿನ ದುಷ್ಟಪ್ರಾಣಿಗಳಿಂದ ರಕ್ಷಣೆ ಕೊಡಲು ದಂಡಪಾಣಿಗಳಾಗಿ ನಿಲ್ಲುವರು ಮಗುವಿನ ದೃಷ್ಟಿಗೆ ತಂದೆತಾಯಿ

ವ್ಯಕ್ತವರ್ಣಂ ಚ ವಚನಂ ತಾವದ್ವಕ್ತುಂ ನ ಶಕ್ಯತೇ ।
ಅತ ಏವ ಚ ಗರ್ಭೇಽಪಿ ರೋದಿತುಂ ನೈವ ಶಕ್ಯತೇ ॥ ೪೩ ॥

ದೃಪ್ತೋಽಥ ಯೌವನಂ ಪ್ರಾಪ್ಯ ಮನ್ಮಥಜ್ವರವಿಹ್ವಲಃ
ಗಾಯತ್ಯಕಸ್ಮಾದುಚ್ಚೈಸ್ತು ತಥಾಕಸ್ಮಾತ್ತು ವಲ್ಗತಿ ॥ ೪೪ ॥

ಆರೋಹತಿ ತರೂನ್ವೇಗಾಚ್ಛಾಂತಾನುದ್ವೇಜಯತ್ಯಪಿ ।
ಕಾಮಕ್ರೋಧಮದಾಂಧಸ್ಸನ್ನ ಕಾಂಶ್ಚಿದಪಿ ವೀಕ್ಷತೇ ॥ ೪೫ ॥

ಅಸ್ಥಿಮಾಂಸಸಿರಾಲಾಯೋಃ ವಾಮಾಯಾ ಮನ್ಮಥಾಲಯೇ ।
ಉತ್ಥಾನಪೂತಿಮಂಡೂಕಪಾಟಿತೋದರಸನ್ನಿಭೇ ॥ ೪೬ ॥

---

ಗಳು ರಾಕ್ಷಸರಂತೆ ಕಾಣುವರು ಶಿಶುವಿನ ಸ್ವಭಾವವಾದರೋ ಕೇವಲ ಅಜ್ಞಾನ ಪ್ರಚುರವಾದದ್ದು ಕೀವನ್ನು ಹಾಲೆಂದು ತಿಳಿಯುವಷ್ಟು ಅಜ್ಞಾನವು ಬಾಲ್ಯದಲ್ಲಿರುವುದು ಶ್ಲೇಷ್ಮವು ದೇಹದಲ್ಲೆಲ್ಲಾ ವ್ಯಾಪಿಸಿ ಬ್ರಹ್ಮನಾಡಿಯೆನಿಸಿದ ಸುಷುಮ್ನೆಯಲ್ಲಿಯೂ ಆವರಿಸಿರುವುದು. ಆದ್ದರಿಂದಲೇ ಮಕ್ಕಳು ಸ್ವಲ್ಪಕಾಲ ಸ್ಪಷ್ಟವಾಗಿ ಮಾತನಾಡಲಾರರು ಶ್ಲೇಷ್ಮದ ವ್ಯಾಪ್ತಿ ಬಹಳವಾಗಿರುವುದರಿಂದಲೇ ಮಗುವು ರೋದಿಸಲಾರದು ಹುಟ್ಟಿದ ಮೇಲೆ ಸ್ಪಷ್ಟವಾಗಿ ಮಾತನ್ನೂ ಆಡಲಾರದು

೪೪—೪೬ ಬಾಲ್ಯದಲ್ಲಿ ನಾನಾರೀತಿ ಕಷ್ಟಗಳನ್ನು ಅನುಭವಿಸಿದಮೇಲೆ ಯೌವನವು ಪ್ರಾದುರ್ಭವಿಸುವುದು ಆಗ ಕಾಮಜ್ವರಪೀಡಿತನಾಗಿ ಮನಸ್ಸು ಬಂದಂತೆ ಸಂಗೀತ ಹೇಳುತ್ತಾ, ಅಲ್ಲಿಂದಲ್ಲಿಗೆ ಸುತ್ತುತ್ತಾ ಓಡಾಡುತ್ತಿರುವನು. ಮರಗಳನ್ನು ಹತ್ತುವುದು, ತಾಳ್ಮೆಯಿಂದಿರುವವರನ್ನು ರೇಗಿಸುವುದು, ಕಾಮ, ಕ್ರೋಧ, ಮದ ಮೊದಲಾದುವುಗಳಿಂದ ಕೊಬ್ಬಿ ಯಾರನ್ನೂ ಲಕ್ಷ್ಯಮಾಡದಿರುವುದು, ಮಾಂಸ, ಮೂಳೆ, ನಾಡಿ ಇವುಗಳಿಂದ ತುಂಬಿ ಕೊಳಕಾಗಿರುವ ಸ್ತ್ರೀದೇಹದಲ್ಲಿ ಮೋಹಗೊಳ್ಳುವುದು, ಇವೆಲ್ಲಾ ಕ್ರಮಕ್ರಮದಾಗಿ ಬರುವುವು. ಕೊನೆಗೆ ದುರ್ಗಂಧಭೂಯಿಷ್ಠವೂ, ಕಪ್ಪೆಯ ಬೆನ್ನಿನಂತೆ ಸ್ಥೂಲವೂ ಆಗಿರುವ ಸ್ತ್ರೀಯೋನಿ

ಆಸಕ್ತಸ್ಸ್ಮರಬಾಣಾರ್ತ ಆತ್ಮನಾ ದಹ್ಯತೇ ಭೃಶಂ ।
ಅಸ್ಥಿಮಾಂಸಸಿರಾದಿಭ್ಯಃ ಕಿಮನ್ಯದ್ವರ್ತತೇ ವಪುಃ ॥ ೪೭ ॥

ವಾಮಾನಾಂ ಮಾಯಯಾ ಮೂಢೋ ನ ಕಿಂಚಿದ್ವೀಕ್ಷತೇ ಜಗತ್ ।
ನಿರ್ಗತೇ ಪ್ರಾಣಪವನೇ ದೇಹೋ ಹಂತ ಮೃಗೀದೃಶಃ ॥ ೪೮ ॥

ಯಥಾ ಹಿ ಜಾಯತೇ ನೈವ ವೀಕ್ಷ್ಯತೇ ಪಂಚಷೈರ್ದಿನೈಃ ।
ಮಹಾಪರಿಭವಸ್ಥಾನಂ ಜರಾಂ ಪ್ರಾಪ್ಯಾತಿದುಃಖಿತಃ ॥ ೪೯ ॥

ಶ್ಲೇಷ್ಮಣಾ ಪಿಹಿತೋರಸ್ಕೋ ಜಗ್ಧಮನ್ನಂ ನ ಜೀರ್ಯತೇ ।
ಭಿನ್ನದಂತೋ ಮಂದದೃಷ್ಟಿಃ ಕಟುತಿಕ್ತಕಷಾಯಭುಕ್ ॥ ೫೦ ॥

---

ಯಲ್ಲಿ ವಿಶೇಷ ಮೋಹವಿಟ್ಟು ಕಾಮಪರವಶನಾಗಿ ತಾನೇ ನನ್ನನ್ನು ದಹಿಸಿಕೊಳ್ಳಲು ಅಪೇಕ್ಷಿಸುವನು

೪೭–೪೯ ಸ್ತ್ರೀದೇಹದಲ್ಲಿ ಮಾಂಸಮೂಳೆಗಳನ್ನು ಬಿಟ್ಟರೆ ಉತ್ಕೃಷ್ಟವಾದ ಯಾವ ವಸ್ತುವೂ ಇವರಿಗೆ ದೊರೆಯಲಾರದ. ಅಂತಹ ಸ್ತ್ರೀದೇಹದಲ್ಲಿ ಮೋಹಿತನಾದವನು ಮತ್ತಾವ ವಸ್ತುಗಳನ್ನೂ ಲಕ್ಷಿಸದೆ, ತದೇಕಧ್ಯಾನಚಿತ್ತನಾಗಿ ಕಾಲ ಕಳೆಯುವನು ಸ್ತ್ರೀದೇಹದಿಂದ ಪ್ರಾಣವಾಯುವು ಹೊರಟುಹೋದವೋಲೆ ನಾಲ್ಕಾರು ದಿನಗಳಲ್ಲಿ ಆ ದೇಹಸ್ವಭಾವವು ಏನಾಗುತ್ತದೆಂಬುದನ್ನು ಅವರು ಲಕ್ಷಿಸುವುದೇ ಇಲ್ಲ ಅಂತಹ ಸ್ತ್ರೀದೇಹಕ್ಕಾಗಿ ಪಡಬಾರದ ಕಷ್ಟಗಳನ್ನು ಪಡುವನು ಯೌವನವು ಕಳೆಯುತ್ತಲೇ ವಾರ್ಧಕ್ಯವೂ ಪ್ರಾಪ್ತಿಯಾಗುವುದು ಅದು ಮಾನವರಿಗೆ ಬಹಳ ಅನಾದರಸ್ಥಾನವೆನಿಸುವುದು ಅಂತಹ ಮುಪ್ಪು ವಿಶೇಷವಾದ ಕಷ್ಟವನ್ನು ಒದಗಿಸುವುದು

೫೦–೫೧ ವಾರ್ಧಕ್ಯದಲ್ಲಿ ಸಾಮಾನ್ಯವಾಗಿ ಎಲ್ಲರಿಗೂ ಕಫವು ಅಧಿಕವಾಗಿ ಎದೆಯ ಶ್ವಾಸನಾಳದಲ್ಲಿ ತುಂಬಿಹೋಗುವುದು ಆಗ ತಿಂದ ಆಹಾರವೇ ಜೀರ್ಣವಾಗುವುದಿಲ್ಲ ಹಲ್ಲು ಬಿದ್ದುಹೋಗುವುದು ದೃಷ್ಟಿಪಾಟವವು ಕಮ್ಮಿಯಾಗುವುದು

ವಾತಭುಗ್ನಕಟಿಗ್ರೀವಾಃ ಕರೋರುಚರಣೋಽಬಲಃ ।
ಗದಾಯುತಸಮಾವಿಷ್ಟಃ ಪರಿಭೂತಸ್ಸ್ವಬಂಧುಭಿಃ ॥ ೫೦ ॥

ನಿಶ್ಯಾಚೋ ಮಲದಿಗ್ಧಾಂಗ ಆಲಿಂಗಿತವರೋಷಿತಃ ।
ಧ್ಯಾಯನ್ನ ಸುಲಭಾನ್ಭೋಗಾನ್ ಕೇವಲಂ ವರ್ತತೇಽಚಲಃ ॥ ೫೧ ॥

ಸರ್ವೇಂದ್ರಿಯಕ್ರಿಯಾಲೋಪಾದ್ಧಾಸ್ಯತೇ ಬಾಲಕೈರಪಿ ।
ತತೋ ಮೃತಿಜದುಃಖಸ್ಯ ದೃಷ್ಟಾಂತೋ ನೋಪಲಭ್ಯತೇ ॥ ೫೨ ॥

ಯಸ್ಮಾದ್ಬಿಭ್ಯತಿ ಭೂತಾನಿ ಪ್ರಾಪ್ತಾನ್ಯಪಿ ಪರಾಂ ರುಜಂ ।
ನೀಯತೇ ಮೃತ್ಯುನಾ ಜಂತುಃ ಪರಿಷ್ವಕ್ತೋಽಪಿ ಬಂಧುಭಿಃ ॥ ೫೪ ॥

---

ಕಾರ, ಕಹಿ, ಒಗರು ಇವುಗಳನ್ನು ತಿನ್ನಲು ಬಯಸುವನು. ವಾಯುಪ್ರಕೋಪ ದಿಂದ ಸೊಂಟ, ಕತ್ತು ಮುಂತಾದುವೆಲ್ಲಾ ಎಗ್ಗಿಹೋಗುವುವು ಕೈಕಾಲುಗಳ ಶಕ್ತಿಯುಡುಗುವುದು ನಾನಾರೀತಿಯ ವ್ಯಾಧಿಗಳು ತಲೆದೋರುವುವು ಹತ್ತಿರದ ಬಂಧುಗಳೂ ಸಹ ತಿರಸ್ಕರಿಸಿ ಬಿಡುವರು.

೫೧–೫೨ ಇಂದ್ರಿಯಪಾಟವವೆಲ್ಲಾ ಕುಗ್ಗಿಹೋದ ಮೇಲೆ ಚಿಕ್ಕವಯಸ್ಸಿನ ವರೆಲ್ಲಾ ಹಾಸ್ಯಮಾಡಲಾರಂಬಿಸುವರು ಇಷ್ಟಾದ ಮೇಲೆ ಮರಣಕಾಲ ಸಮೀಪಿಸಿ ದಾಗಲಂತೂ ಆಗುವ ದುಃಖವನ್ನು ವರ್ಣಿಸಲು ಸಾಧ್ಯವೇ ಇಲ್ಲ ದೇಹವೆಲ್ಲಾ ಕೊಳ ಕಾಗಿ ಕಾಣುವುದು ಸ್ವಶರೀರವಿಸರ್ಜಿತವಾದ ಮಲವು ದೇಹದಲ್ಲಿಯೇ ಅಂಟಿ ಕೊಳ್ಳುವುದು ಆದರೂ ಸುಖಪಡುವ ಆಸೆ ಮಾತ್ರ ತಪ್ಪದು ಚಲಿಸಲು ಅಸಮರ್ಥ ನಾಗಿ ಸರ್ವದಾ ಒಂದೇ ಕಡೆ ಬಿದ್ದು ನರಳುವನು ಅಷ್ಟಾದರೂ ದೇವರನ್ನು ಧ್ಯಾನ ಮಾಡುವ ಮನಸ್ಸು ಮಾತ್ರ ಬರುವುದಿಲ್ಲ

೫೪–೫೫ ಎಷ್ಟೇ ರೋಗಾದಿಗಳಿಂದ ವ್ಯಥೆಪಡುತ್ತಿದ್ದರೂ, ಮಾನವನು ಮರಣಕ್ಕೆ ಹೆದರುವನು ಏಕೆಂದರೆ ಮರಣಯಾತನೆಯು [illegible] ವಾದುದು ಮೃತ್ಯುಕಾಲ ಸನ್ನಿಹಿತವಾದರೆ ಎಲ್ಲಾ ಬಂಧುಗಳೂ ಎಷ್ಟೇ ಬಿಗಿಯಾಗಿ





ಸಾಗರಾಂತರ್ಜಲಗತೋ ಗರುಡೇನೇವ ಪನ್ನಗಃ ।
ಹಾ ಕಾಂತೇ ಹಾ ಧನಂ ಪುತ್ರಾಃ ಕ್ರಂದಮಾನಸ್ಸುದಾರುಣಂ ॥ ೫೫ ॥

ಮಂಡೂಕ ಇವ ಸರ್ಪೇಣ ಮೃತ್ಯುನಾ ನೀಯತೇ ನರಃ ।
ಮರ್ಮಸೂತ್ಕೃಷ್ಯಮಾಣೇಷು ಮುಚ್ಯಮಾನೇಷು ಸಂಧಿಷು ॥ ೫೬ ॥

ಯದ್ದುಃಖಂ ಮ್ರಿಯಮಾಣಸ್ಯ ಸ್ಮರ್ಯತಾಂ ತನ್ಮುಮುಕ್ಷುಭಿಃ ।
ದೃಷ್ಟಾವಾಕ್ಷಿಪ್ಯಮಾಣಾಯಾಂ ಸಂಜ್ಞಯಾ ಹ್ರಿಯಮಾಣಯಾ ॥ ೫೭ ॥

ಮೃತ್ಯುಪಾಶೇನ ಬದ್ಧಸ್ಯ ತ್ರಾತಾ ನೈವೋಪಲಭ್ಯತೇ ।
ಸಂರುಧ್ಯಮಾನಸ್ತಮಸಾ ಮಹಚ್ಛಿತ್ತಮಿವಾವಿಶನ್ ॥ ೫೮ ॥

---

ಆಲಿಂಗಿಸಿಕೊಂಡಿದ್ದರೂ ಅವರ ಪ್ರಾಣವು ನಿಲ್ಲಲಾರದು. ಹಾವು ಸಮುದ್ರಮಧ್ಯದಲ್ಲಿ ಅಡಗಿದ್ದರೂ ಗರುಡನ ದೃಷ್ಟಿಗೆ ಅದೇನಾದರೂ ಗೋಚರವಾದರೆ, ಎಷ್ಟು ಸರ್ಪಗಳು ಬಂದು ತಡೆಗಟ್ಟಿದರೂ ಅದನ್ನು ಗರುಡನು ಬಿಡಲಾರದು. ಕ್ರೂರರಾದ ಯಮದೂತರನ್ನು ನೋಡಿದೊಡನೆಯೇ, ತನ್ನ ಪತ್ನೀಪುತ್ರಾದಿಗಳನ್ನು ಸ್ಮರಿಸಿಕೊಂಡು ಚೀರಾಡಲುಪಕ್ರಮಿಸುವನು.

೫೬-೫೭ ಕಾಲಕ್ರಮದಲ್ಲಿ ಮರಣಕಾಲವು ಸಮೀಪಿಸಿದೊಡನೆಯೇ ಹಾವು ಸರ್ಪವನ್ನು ನುಂಗಿಬಿಡುವಂತೆ, ಮೃತ್ಯುದೇವತೆಯು ಮಾನವನನ್ನು ತಿಂದುಬಿಡುವುದು. ಆ ಕಾಲದಲ್ಲಿ ದೇಹದ ಮರ್ಮಸ್ಥಳಗಳಲ್ಲಿಯೂ, ಕೀಲುಕೀಲುಗಳಲ್ಲಿಯೂ ನರವು ಎಳೆಯಲಾರಂಭವಾದಾಗ ಆಗುವ ಯಾತನೆಯನ್ನು ಇಷ್ಟಿಷ್ಟೆಂದು ಹೇಳಲು ಸಾಧ್ಯವಿಲ್ಲ. ಮೋಕ್ಷಾಪೇಕ್ಷಿಗಳಾದವರು ಈ ಶಾರೀರಕದುಃಖವನ್ನು ನೋಡಿದ ಮೇಲಾದರೂ ತಮ್ಮ ದೇಹಾಭಿಮಾನವನ್ನು ತೊರೆಯಲಿ. ಯಮದೂತರು ದೃಷ್ಟಿಬಲದಿಂದಲೇ ಜೀವವನ್ನು ಎಳೆದೊಯ್ಯುವಾಗ ಆಗುವ ಯಾತನೆಯು ಅವರ್ಣನೀಯವಲ್ಲವೆ!

೫೮-೬೦ ಮೃತ್ಯುಪಾಶದಿಂದ ಬಂಧಿತನಾದವನನ್ನು ಯಾವನೂ ರಕ್ಷಿಸಲಾರನು. ಅಂತಹ ಮರಣಸಮಯದಲ್ಲಿ ಮುಮೂರ್ಷುವಾದವನು ತನ್ನ ಸಮೀಪ

ಉಪಾಹೂತಸ್ತದಾ ಜ್ಞಾತೀನೀಕ್ಷತೇ ದೀನಚಕ್ಷುಷಾ ।
ಆಯುಃಪಾಶೇನ ಕಾಲೇನ ಸ್ನೇಹಪಾಶೇನ ಬಂಧುಭಿಃ ॥ ೫೯ ॥

ಆತ್ಮಾನಂ ಕೃಷ್ಯಮಾಣಂ ತಮೀಕ್ಷತೇ ಪರಿತಸ್ತಥಾ ।
ಹಿಕ್ಕಯಾ ಬಾಧ್ಯಮಾನಸ್ಯ ಶ್ವಾಸೇನ ಪರಿಶುಷ್ಯತಃ ॥ ೬೦ ॥

ಮೃತ್ಯುನಾಕೃಷ್ಯಮಾಣಸ್ಯ ನ ಖಲ್ವಸ್ತಿ ಪರಾಯಣಂ ।
ಸಂಸಾರಯಂತ್ರಮಾರೂಢೋ ಯಮದೂತೈರಧಿಷ್ಠಿತಃ ॥ ೬೧ ॥

ಕ್ವ ಯಾಸ್ಯಾಮೀತಿ ದುಃಖಾರ್ತಃ ಕಾಲಪಾಶೇನ ಯೋಜಿತಃ ।
ಕಿಂ ಕರೋಮಿ ಕ್ವ ಗಚ್ಛಾಮಿ ಕಿಂ ಗೃಹ್ಣಾಮಿ ತ್ಯಜಾಮಿ ಕಿಂ ॥ ೬೨

ಇತಿಕರ್ತವ್ಯತಾಮೂಢಃ ಕೃಚ್ಛ್ರಾದ್ದೇಹಾತ್ತ್ಯಜತ್ಯಸೂನ್ ।
ಯಾತನಾದೇಹಸಂಬದ್ಧೋ ಯಮದೂತೈರಧಿಷ್ಠಿತಃ ॥ ೬೩ ॥

---

ದಲ್ಲಿ ನಿಂತಿರುವ ಬಂಧುಗಳನ್ನು ಕೇವಲ ದೃಷ್ಟಿಯಿಂದ ಮಾತ್ರ ನೋಡುತ್ತಿರುವನು ಅಜ್ಞಾನದಿಂದ ಆವೃತನಾದವನು ವಿವೇಕವನ್ನು ಹೊಂದುವಾಗ ಮೌನವಾಗಿ ಏಕ ಧ್ಯಾನಾಸಕ್ತನಾಗುವಂತೆ ಮರಣವನ್ನು ಪಡೆಯುವನು ಕೇವಲ ದೃಷ್ಟಿಯಿಂದ ಆತ್ಮೀಯರನ್ನು ನೋಡುತ್ತಾ ಪ್ರಾಣತ್ಯಾಗಮಾಡುತ್ತಿರುವ ಸಮಯದಲ್ಲಿ ಬಂಧು ಗಳು ಸುತ್ತಲೂ ನಿಂತು ಸುಮ್ಮನೆ ನೋಡುವರು ಬಿಕ್ಕಳಿಕೆ, ಮೇಲುಸಿರು, ಇವು ಗಳಿಂದ ಯಾತನೆಪಡುತ್ತಾ ಮೃತ್ಯುಪಾಶಕ್ಕೆ ಗುರಿಯಾಗಿರುವವರಿಗೆ ಯಾರೂ ರಕ್ಷ ಕರು ದೊರೆಯಲಾರರು

೬೧–೬೩ ಸಂಸಾರವೆಂಬ ಯಂತ್ರದಲ್ಲಿ ಕುಳಿತಿರುವ ಈ ಮಾನವನನ್ನು ಯಮದೂತರು ಸ್ವೇಚ್ಛೆಯಾಗಿ ಎಳೆಯುತ್ತಿರುವಾಗ, ಏನುಮಾಡಲಿ, ಎಲ್ಲಿಗೆ ಹೋಗಲಿ, ಎಲ್ಲಿನಿಲ್ಲಲಿ, ಎಂದು ಪರಿತಪಿಸುತ್ತಾ, ಕೊನೆಗೆ ಏನೂ ಮಾಡಲಾಗದೆ ಸುಲಭವಾಗಿ ಪ್ರಾಣಗಳನ್ನು ತ್ಯಜಿಸುವನು ಅನಂತರ ಯಮಯಾತನೆಯನ್ನು ಅನುಭವಿಸುವುದಕ್ಕಾಗಿ ಯಾತನಾದೇಹವೊಂದನ್ನು ಪಡೆಯುವನು ಯಮದೂತರು ನಿಷ್ಕರುಣರಾಗಿ ಆ ದೇಹವನ್ನು ಬಹಳವಾಗಿ ಎಳೆಯುವರು

ಇತೋ ಗತ್ವಾನುಭವತಿ ಯಾ ಯಾಸ್ತಾ ಯಮಯಾತನಾಃ ।
ತಾಸು ಯಲ್ಲಭತೇ ದುಃಖಂ ತದ್ವಕ್ತುಂ ಸಹತೇ ಕುತಃ ॥ ೬೪ ॥

ಕರ್ಪೂರಚಂದನಾದ್ಯೈಸ್ತು ಲಿಪ್ಯತೇ ಸತತಂ ಹಿ ಯತ್ ।
ಭೂಷಣೈರ್ಭೂಷ್ಯತೇ ಚಿತ್ರೈಃ ಸುವಸ್ತ್ರೈಃ ಪರಿವಾರ್ಯತೇ ॥ ೬೫ ॥

ಅಸ್ಪೃಶ್ಯಂ ಜಾಯತೇಽಪ್ರೇಕ್ಷ್ಯಂ ಜೀವತ್ಯಕ್ತಂ ಸದಾ ವಪುಃ ।
ನಿಷ್ಕಾಸಯಂತಿ ನಿಲಯಾತ್ ಕ್ಷಣಂ ನ ಸ್ಥಾಪಯಂತ್ಯಪಿ ॥ ೬೬ ॥

ದಹ್ಯತೇ ಚ ತತಃ ಕಾಷ್ಠೈಸ್ತದ್ಭಸ್ಮ ಕ್ರಿಯತೇ ಕ್ಷಣಾತ್ ।
ಭಕ್ಷ್ಯತೇ ವಾ ಸೃಗಾಲೇನ ಗೃಧ್ರಕುಕ್ಕುಟವಾಯಸೈಃ
ಪುನರ್ನ ದೃಶ್ಯತೇ ಸೋಽಥ ಜನ್ಮಕೋಟಿಶತೈರಪಿ ॥ ೬೭ ॥

ಮಾತಾ ಪಿತಾ ಗುರುಜನಸ್ಸ್ವಜನೋ ಮಮೇತಿ
ಮಾಯೋಪಮೇ ಜಗತಿ ಕಸ್ಯ ಭವೇತ್ಪ್ರತಿಜ್ಞಾ ।

---

೬೪–೬೬ ಯಮಯಾತನೆಯು ಎಂತಹ ದುಃಖವನ್ನುಂಟುಮಾಡುವುದು ಎಂಬುದನ್ನು ಬಾಯಿಯಿಂದ ಹೇಳಲು ಸಾಧ್ಯವೇ ಇರುವುದಿಲ್ಲ. ಬದುಕಿರುವಾಗ ಯಾವ ದೇಹಕ್ಕೆ ಕರ್ಪೂರಮಿಶ್ರಿತವಾದ ಗಂಧ, ಸುವರ್ಣಮಯವಾದ ಆಭರಣ, ಚಿತ್ರವಿಚಿತ್ರವಾದ ವಸ್ತ್ರ, ಇವುಗಳಿಂದ ನಾನಾ ಉಪಚಾರಗಳು ಸಲ್ಲುವುವೋ, ಅಂತಹ ದೇಹವು ಜೀವನಿಂದ ಬಿಡಲ್ಪಟ್ಟು ಶವವೆನಿಸಿದಾಗ ಅದನ್ನು ಯಾರೂ ಕಣ್ಣೆತ್ತಿ ನೋಡಲಾರರು. ಕೈಯಿಂದ ಮುಟ್ಟಲಾರರು. ಮನೆಯಲ್ಲಿ ಹೆಚ್ಚುಹೊತ್ತು ನಿಲ್ಲಗೊಡದೆ ಹೊರಗೆ ಹಾಕಿಬಿಡುವರು.

೬೭ ಸ್ವಲ್ಪಹೊತ್ತಿನೊಳಗಾಗಿ ಆ ದೇಹಕ್ಕೆ ಸೌದೆಯಿಟ್ಟು ಸುಟ್ಟು ಭಸ್ಮ ಮಾಡಿಬಿಡುವರು. ಅಥವಾ ಹಾಗೆಯೇ ಬಿಟ್ಟರೆ, ಅದನ್ನು ಹದ್ದು, ಕಾಗೆ, ನರಿ ಮುಂತಾದ ಪ್ರಾಣಿಗಳು ತಿಂದುಬಿಡುವುವು. ಮತ್ತೆ ಆ ದೇಹವನ್ನು ಎಷ್ಟುಕೋಟಿ ಜನ್ಮಗಳು ಕಳೆದರೂ ನೋಡಲಾರರು.

ಏಕೋ ಯತೋ ವ್ರಜತಿ ಕರ್ಮಪುರಸ್ಸರೋಽಯಂ
ವಿಶ್ರಾಮವೃಕ್ಷಸದೃಶಃ ಖಲು ಜೀವಲೋಕಃ ॥ ೭೮ ॥

ಸಾಯಂಸಾಯಂ ವಾಸವೃಕ್ಷಂ ಸಮೇತಾಃ
ಪ್ರಾತಃಪ್ರಾತಸ್ತೇನ ತೇನ ಪ್ರಯಾಂತಿ ।
ತ್ಯಕ್ತ್ವಾನ್ಯೋನ್ಯಂ ತಂ ಚ ವೃಕ್ಷಂ ವಿಹಂಗಾ
ಯದ್ವತ್ತದ್ವಜ್ಜ್ಞಾತಯೋಽಜ್ಞಾತಯಶ್ಚ ॥ ೭೯ ॥

---

೭೮ ಇಂದ್ರಜಾಲವಿದ್ಯೆಯಿಂದ ನಿರ್ಮಿತವಾದ ಮಾಯಾವಸ್ತುಗಳಂತಿರುವ ಪ್ರಪಂಚದಲ್ಲಿ, ನನ್ನ ತಾಯಿ, ನನ್ನ ತಂದೆ, ನಮ್ಮ ಗುರುಗಳು ಎಂಬ ಭಾವನೆಯು ಯಾರಿಗೆ ತಾನೆ ತಪ್ಪೀತು? ಹೀಗೆ ಎಲ್ಲರಲ್ಲಿಯೂ ಮಮತಾಬುದ್ಧಿಯನ್ನಿಟ್ಟು ಜೀವಿಸುತ್ತಿದ್ದರೂ ಮಾನವನು ತನ್ನ ಕರ್ಮಾನುಗುಣವಾಗಿ ಮರಣಕಾಲದಲ್ಲಿ ಒಂಟಿಯಾಗಿಯೇ ಯಮನಿಗೆ ಅಧೀನನಾಗುವನು ತನ್ನವರೆಂದು ಹೇಳಿಕೊಳ್ಳುವ ಯಾವ ಬಂಧುಗಳೂ ಮರಣಕಾಲದಲ್ಲಿ ಇವನನ್ನು ಅನುಸರಿಸಲಾರರು ಈ ಸಂಸಾರ ವೆಂಬುದು ಒಂದು ವಿಶ್ರಾಂತಿ ಕೊಡುವ ಮರದಂತೆ ಆಯಾಸಪಟ್ಟವರೆಲ್ಲಾ ವಿಶ್ರಾಂತಿಗಾಗಿ ಒಂದೆಡೆ ಕುಳಿತು, ವಿಶ್ರಾಂತಿ ದೊರೆತ ಮೇಲೆ ತಮ್ಮತಮ್ಮ ಮಾರ್ಗ ವನ್ನು ಹಿಡಿದು ಹೋಗುವಂತೆ ಕರ್ಮಫಲಾನುಭವವಾದ ನಂತರ ತಮ್ಮತಮ್ಮ ದಾರಿಹಿಡಿದು ಹೊರಟುಹೋಗುವರು

೭೯ ಹಗಲೆಲ್ಲಾ ಜೀವನಕ್ಕಾಗಿ ಅಲ್ಲಲ್ಲಿ ಸಂಚರಿಸಿ ಸಾಯಂಕಾಲವಾಗು ತ್ತಲೇ ಹಕ್ಕಿಗಳು ಒಂದು ನೇರಿ, ಬೆಳಗಾಗುತ್ತಲೇ, ಮತ್ತೆ ತಮ್ಮ ಹೊಟ್ಟೆಪಾಡಿಗಾಗಿ ಭಿನ್ನ ಭಿನ್ನ ದಿಕ್ಕುಗಳಿಗೆ ಚೆದುರಿಹೋಗುವಹಕ್ಕಿಗಳಂತೆ, ಮಾನವರು ಒಂದು ಸಂಸಾರ ದಲ್ಲಿ ಕೆಲವುಕಾಲವಿದ್ದು ಕರ್ಮಫಲಾನುಭವವಾದ ಮೇಲೆ ಬೇರೆಬೇರೆ ಜನ್ಮಗಳಿಗೆ ಹೋಗುವರು

ಮೃತಿಬೀಜಂ ಭವೇಜ್ಜನ್ಮ ಜನ್ಮಬೀಜಂ ಭವೇನ್ಮೃತಿಃ ।
ಘಟೀಯಂತ್ರವದಶ್ರಾಂತೋ ಬಂಭ್ರಮಿತ್ಯನಿಶಂ ನರಃ ॥೭೮॥

ಗರ್ಭೇ ಪುಂಸಶ್ಶುಕ್ಲಪಾತಾದ್ಯದುಕ್ತಂ ಮರಣಾವಧಿ ।
ತದೇತಸ್ಯ ಮಹಾವ್ಯಾಧೇರ್ಮತ್ತೋ ನಾನ್ಯೋಽಸ್ತಿ ಭೇಷಜಂ ॥೭೯॥

ಇತಿ ಶ್ರೀಪದ್ಮಪುರಾಣೇ ಶಿವಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀ ಶಿವರಾಘವಸಂವಾದೇ
ದೇಹೋತ್ಪತ್ತ್ಯಾದಿ ನಿರೂಪಣಯೋಗೋ ನಾಮ

॥ ಅಷ್ಟಮೋಽಧ್ಯಾಯಃ ॥

---

೭೮–೭೯ ಮರಣವು ಪುನರ್ಜನ್ಮಕ್ಕೆ ಕಾರಣವಾಗುವುದು ಜನನವು ಮರಣಕ್ಕೆ ನಿಮಿತ್ತವೆನಿಸುವುದು ಹೀಗೆ ಪ್ರಾಣಿಗಳ ಜನನಮರಣರೂಪವಾದ ಸಂಸಾರಚಕ್ರವು ಘಟೀಯಂತ್ರದಂತೆ ಸರ್ವದಾ ಒದಲಾವಣೆಯಾಗುತ್ತಲೇ ಇರುವುದು ಮಾತೃಗರ್ಭದಲ್ಲಿ ಜನ್ಮಪಡೆದು ಮರಣಹೊಂದುವ ಪರ್ಯಂತ ನಡೆಯುವ ಸಂಸಾರವೆಂಬ ಮಹಾವ್ಯಾಧಿಗೆ ನನ್ನ (ಈಶ್ವರನ) ಜ್ಞಾನವೊಂದೇ ದಿವ್ಯೌಷಧಿಯು. ಸಾಂಸಾರಿಕಕಷ್ಟನಷ್ಟಗಳನ್ನು ನಾನಲ್ಲದೆ ಮತ್ತಾರೂ ಹೋಗಲಾಡಿಸಲಾರರು. ಇದು ನಿಶ್ಚಯ ಎಂದು ಪರಮೇಶ್ವರನು ಶ್ರೀರಾಮನಿಗೆ ಮಾನವ ಜನ್ಮೋತ್ಪತ್ತಿಯ ವಿಚಾರವನ್ನು ತಿಳಿಸಿದನು

ಇಲ್ಲಿಗೆ ಶ್ರೀ ಪದ್ಮಪುರಾಣದ ಶಿವಗೀತೋಪನಿಷತ್ತಿನಲ್ಲಿ ದೇಹೋತ್ಪತ್ತ್ಯಾದಿ ನಿರೂಪಣಯೋಗವೆಂಬ ಎಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ

# ಶ್ರೀ ಶಿವಗೀತಾ

॥ ಅಥ ನವಮೋಽಧ್ಯಾಯಃ ॥

॥ ಶ್ರೀ ಮಹಾದೇವ ಉವಾಚ ॥

ದೇಹಸ್ವರೂಪಂ ವಕ್ಷ್ಯಾಮಿ ಶೃಣುಷ್ವಾವಹಿತೋ ನೃಪ ।
ಮತ್ತೋ ಹಿ ಜಾಯತೇ ವಿಶ್ವಂ ಮಯ್ಯೈವೈತತ್ಪ್ರಧಾರ್ಯತೇ ॥ ೧ ॥

---

## ಒಂಬತ್ತನೆಯ ಅಧ್ಯಾಯ

೧–೨ "ಶ್ರೀರಾಮನೇ ನಾನು ಇಲ್ಲಿಯವರೆಗೂ ಪಾಂಚಭೌತಿಕವಾದ ಶರೀರಗಳ ಉತ್ಪತ್ತಿಸ್ಥಿತಿಲಯಗಳ ವಿಷಯವನ್ನು ಮಾತ್ರ ಸಂಗ್ರಹಿಸಿ ಹೇಳಿದೆನು ಈಗ ದೇಹಸ್ವರೂಪವನ್ನು ವಿವರಿಸುವೆನು ಸಾವಧಾನಚಿತ್ತನಾಗಿ ಲಾಲಿಸು" ಎಂದು ಪರಮೇಶ್ವರನು ಶ್ರೀರಾಮನಿಗೆ ಅವನ ಕೋರಿಕೆಯಂತೆ ಉಪದೇಶಿಸಲುಪಕ್ರಮಿಸಿದನು –ಈ ಚರಾಚರಾತ್ಮಕವಾದ ಪ್ರಪಂಚವೆಲ್ಲವೂ ನನ್ನಿಂದಲೇ (ಪರಬ್ರಹ್ಮವಸ್ತುವಿನಿಂದಲೇ) ಅಂದರೆ ನನ್ನ ವಿಷಯಕವಾದ ಯಾವ ಮಾಯೆಯುಂಟೋ ಅದರಕಾರ್ಯದಿಂದಲೇ ಆಗಿದೆ ಅದು ನನ್ನ ವಿಷಯಕವಾದ ಜ್ಞಾನವನ್ನು ಪಡೆದರೆ ಆಗ ನನ್ನಲ್ಲಿಯೇ ಲಯಹೊಂದುವುದು ಹೇಗೆಂದರೆ, ಕಪ್ಪೆಯ ಚಿಪ್ಪನ್ನು ನೋಡಿ ಬೆಳ್ಳಿಯೆಂದು ಭ್ರಮಿಸುವ ಚೈತನ್ಯವಿಶಿಷ್ಟಜೀವನಿಗೆ, ಯಾವಾಗ ಶುಕ್ತಿವಿಷಯಕವಾದ ನಿಶ್ಚಯಜ್ಞಾನವುಂಟಾಗುವುದೋ ಆಗ ಆ ವಸ್ತುಸ್ವರೂಪವುಂಟಾಗಿ ಭ್ರಾಂತಿಯ ನಿವಾರಣೆಯಾಗುವುದು ಇದರಿಂದ ಪರಬ್ರಹ್ಮವಸ್ತುವು ವಿಕಾರವನ್ನು ಪಡೆಯುವು

ಮಯ್ಯೇವೇದಮಧಿಷ್ಠಾನೇ ಲೀಯತೇ ಶುಕ್ತಿರೂಪವತ್ ।
ಅಹಂ ತು ನಿರ್ಮಲಃ ಪೂರ್ಣಃ ಸಚ್ಚಿದಾನಂದವಿಗ್ರಹಃ ॥ ೨ ॥
ಅಸಂಗೋ ನಿರಹಂಕಾರಃ ಶುದ್ಧಂ ಬ್ರಹ್ಮ ಸನಾತನಃ ।
ಅನಾದ್ಯವಿದ್ಯಯಾ ಯುಕ್ತೋ ಜಗತ್ಕಾರಣತಾಂ ವ್ರಜೇ ॥ ೩ ॥
ಅನಿರ್ವಾಚ್ಯಾ ಮಹಾವಿದ್ಯಾ ತ್ರಿಗುಣಾ ಪರಿಣಾಮಿನೀ ।
ರಜಸ್ಸತ್ತ್ವಂ ತಮಶ್ಚೇತಿ ಸದ್ಗುಣಾಃ ಪರಿಕೀರ್ತಿತಾಃ ॥ ೪ ॥
ಸತ್ತ್ವಂ ಶುಕ್ಲಂ ಸಮಾದಿಷ್ಟಂ ಸುಖಜ್ಞಾನಾಸ್ಪದಂ ನೃಣಾಂ ।
ದುಃಖಾಸ್ಪದಂ ರಕ್ತವರ್ಣಂ ಚಂಚಲಂ ಚ ರಜೋ ಮತಂ ॥ ೫ ॥

---

ಬೆಂದು ಅರ್ಥವಲ್ಲ ಅದು (ನಾನು) ನಿರ್ಮಲವಾದದ್ದು ಅಂದರೆ ಅವಿದ್ಯಾರಹಿತ ವಾದದ್ದು ಯಾವ ವಿಧವಾದ ಪರಿಚ್ಛೇದಕ್ಕೂ ದೊರೆಯದ ಪೂರ್ಣವಸ್ತುವು ಸಚ್ಚಿದಾನಂದ ಸ್ವರೂಪವಾದದ್ದು ಆ ಪರಬ್ರಹ್ಮ ವಸ್ತುವು

೩–೪ ಪರಬ್ರಹ್ಮ ವಸ್ತುವಿಗೆ ಇತರ ಯಾವ ವಸ್ತುವಿನ ಸಂಪರ್ಕವೂ ಉಂಟಾಗಲಾರದು ಕರ್ತೃತ್ವಾದ್ಯಹಂಕಾರಗಳು ಅದರಲ್ಲಿಲ್ಲ ಮಾಯಾಸಂಬಂಧ ವಿಲ್ಲದೆ ಅನಾದಿಯೆನಿಸಿರುವ ಬ್ರಹ್ಮಸ್ವರೂಪವಾದದ್ದು ಅದು ಆದರೂ ಪರಬ್ರಹ್ಮ ವಸ್ತುವು ಅನಾದಿಯಾದ ಅವಿದ್ಯೆಯ ಸಂಪರ್ಕದಿಂದ ಜಗದ್ರೂಪವಾಗಿ ಪರಿಣಾಮ ಗೊಳ್ಳುವುದು ಇಲ್ಲಿ 'ಜಗತ್ಕಾರಣನಾಗುತ್ತೇನೆ' ಎಂಬ ಮಾತಿನಲ್ಲಿ ಕಾರಣತ್ವ ವೆಂದರೆ ಕರ್ತೃತ್ವವೆಂದರ್ಥ "ಜನ್ಮಾದ್ಯಸ್ಯ ಯತಃ" ಎಂಬ ಸೂತ್ರದಲ್ಲಿ ಹಾಗೆಯೇ ಪ್ರತಿಪಾದಿತವಾಗಿದೆ ಅವಿದ್ಯೆಯೆಂಬುದು ಬ್ರಹ್ಮಸಂಪರ್ಕದಿಂದ ಪ್ರಪಂಚರೂಪವಾಗಿ ಪರಿಣತವಾಗುವುದನ್ನು ಹೇಳಲು ಸಾಧ್ಯವಿಲ್ಲದ ಮಾತು ಏಕೆಂದರೆ ಅದು ಜ್ಞಾನ ಗೋಚರವಾದುದು ಅಂತಹ ಮಹಾ ಅವಿದ್ಯೆಯು ಸತ್ತ್ವ, ರಜಸ್ಸು, ತಮಸ್ಸುಗಳೆಂಬ ಮೂರು ಗುಣಗಳುಳ್ಳದ್ದು ಆ ಗುಣಗಳಿಂದ ಮಾಯೆಯು ಪ್ರಪಂಚರೂಪವಾಗಿ ಪರಿಣಾಮಗೊಳ್ಳುವುದು

೫–೬ ಮಾನವರಿಗೆ ಸುಖ, ಮತ್ತು ಜ್ಞಾನ ಇವುಗಳುಂಟಾಗುವುದಕ್ಕೆ ಮುಖ್ಯಸಾಧನವಾದುದು ಸತ್ತ್ವಗುಣ. ಅದು ವರ್ಣದಿಂದ ಶುಕ್ಲವೆನಿಸಿದೆ

ತಮಃ ಕೃಷ್ಣಂ ಜಡಂ ಪ್ರೋಕ್ತಮುದಾಸೀನಂ ಸುಖಾದಿಷು ।
ಅತೋ ಮಮ ಸಮಾಯೋಗಾಚ್ಛಕ್ತಿಸ್ಸಾ ತ್ರಿಗುಣಾತ್ಮಿಕಾ ॥ ೬ ॥

ಅಧಿಷ್ಠಾನೇ ತು ಮಯ್ಯೇವ ಭಜತೇ ವಿಶ್ವರೂಪತಾಂ ।
ಶುಕ್ತೌ ರಜತವದ್ರಜ್ಜ್ವಾ ಭುಜಂಗೋ ಯದ್ವದೇವ ತು ॥ ೭ ॥

ಆಕಾಶಾದೀನಿ ಭೂತಾನಿ ಜಾಯಂತೇ ಮಾಯಯಾ ಮಮ ।
ತೈರಾರಬ್ಧಮಿದಂ ವಿಶ್ವಂ ದೇಹೋಽಯಂ ಪಾಂಚಭೌತಿಕಃ ॥ ೮ ॥

---

ಮನಸ್ಸಿನ ಚಾಂಚಲ್ಯ ಮತ್ತು ದುಃಖಾನುಭವ ಇವುಗಳನ್ನು ಕೊಡುವುದು ರಜೋಗುಣ ಇದು ರಕ್ತವರ್ಣವುಳ್ಳದ್ದು ಇನ್ನು ಕಪ್ಪು ಬಣ್ಣದ ತಮೋಗುಣವು ಸುಖಾದಿಗಳನ್ನುಂಟುಮಾಡಲು ಅಸಮರ್ಥವಾದುದು ಪ್ರಾಣಿಗಳಲ್ಲಿ ಅದು ಉದಾಸೀನ ಸ್ವಭಾವವನ್ನುಂಟುಮಾಡತಕ್ಕುದು ಇಂತಹ ಮೂರು ಗುಣಗಳೂ ಮಾಯೆಗೆ ನನ್ನ ಸಂಪರ್ಕದಿಂದ ಉಂಟಾಗುವುವು. ಸ್ವತಃ ನಿರ್ಗುಣವಾದರೂ ಬ್ರಹ್ಮವಸ್ತುವು, ಕೇವಲ ಅವಿದ್ಯಾಮೇಳನದಿಂದ ಗುಣತ್ರಯವುಳ್ಳದ್ದಾಗಿ ಕಂಡುಬರುವುದು

೭–೮ ಇಂತಹ ಮಾಯೆಯೇ ನನ್ನಲ್ಲಿ ಅಧಿಷ್ಠಾನತ್ವವನ್ನು ಪಡೆದು ನಾನಾ ರೂಪಗಳುಳ್ಳ ಪ್ರಪಂಚಾಕಾರವನ್ನು ಪಡೆಯುವುದು ಆದರೆ ಅಂತಹ ಮಾಯಾಪರಿಣಾಮವಾದ ಜಗತ್ತಿಗೆ ನಾನು ಆಧಾರನಾಗಿ ತೋರಿದರೂ ನನ್ನಲ್ಲಿ ಸರ್ವವನ್ನೂ ಒಳಗೊಂಡಿರುವ ಗುಣವೊಂದಿದೆ ಎಂದು ಯಾರೂ ಹೇಳುವುದಿಲ್ಲ ಏಕೆಂದರೆ ಜಗದಾಧಾರತ್ವವು ಬ್ರಹ್ಮನಿಗೆ ಕೇವಲ ಕಲ್ಪನೆಯೇ ಸರಿ ಪಾರಮಾರ್ಥಿಕಜ್ಞಾನಾರ್ಜನೆಯಿಂದ ಆಧಾರಾಧೇಯಭಾವವು ಮಾಯವಾಗುವುದು ಕಪ್ಪೆಯ ಚಿಪ್ಪಿನಲ್ಲಿ ಬೆಳ್ಳಿಯ ಜ್ಞಾನವೂ, ಹಗ್ಗದಲ್ಲಿ ಹಾವಿನ ಭ್ರಾಂತಿಯೂ ಹೇಗೆ ನಿಶ್ಚಯಜ್ಞಾನದಿಂದ ನಾಶಹೊಂದುವುದೋ, ಅದರಂತೆ ಬ್ರಹ್ಮವಸ್ತುವಿನಲ್ಲಿ ಜಗತ್ತು ಅಡಗಿದೆ ಎಂಬ ಭಾವವು ಕೇವಲ ಭ್ರಾಂತಿಜನ್ಯವಾದುದು ಬ್ರಹ್ಮವು ಶುದ್ಧಬುದ್ಧಸ್ವರೂಪವಾದುದು ಎಂಬ ಅರಿವುಂಟಾದೊಡನೆಯೇ ಆ ಭ್ರಾಂತಿಯು ನಿವಾರಣೆಯಾಗುವುದು ಅಂತೂ ಮಾಯಾಕಾರ್ಯ

ಪಿತೃಭ್ಯಾಮಶಿತಾದನ್ನಾತ್ ಷಟ್ಕೋಶಂ ಜಾಯತೇ ವಪುಃ ।
ಸ್ನಾಯವೋಽಸ್ಥೀನಿ ಮಜ್ಜಾ ಚ ಜಾಯಂತೇ ಪಿತೃತಸ್ತಥಾ ॥ ೯ ॥

ತ್ವಙ್ಮಾಂಸಶೋಣಿತಮಿತಿ ಮಾತೃತಶ್ಚ ಭವಂತಿ ಹಿ ।
ಭಾವಾಸ್ಸ್ಯುಃ ಷಡ್ವಿಧಾಸ್ತಸ್ಯ ಮಾತೃಜಾಃ ಪಿತೃಜಾಸ್ತಥಾ ॥ ೧೦ ॥

ರಸಜಾ ಆತ್ಮಜಾಸ್ಸತ್ತ್ವಸಂಭೂತಾಸ್ಸ್ವಾತ್ಮಜಾಸ್ತಥಾ ।
ಮೃದವಶ್ಶೋಣಿತಂ ಮೇದೋ ಮಜ್ಜಾ ಪ್ಲೀಹಾ ಯಕೃದ್ಗುದಂ ॥ ೧೧ ॥

ಹೃನ್ನಾಭೀತ್ಯೇವಮಾದ್ಯಾಸ್ತು ಭಾವಾ ಮಾತೃಭವಾ ಮತಾಃ ।
ಶ್ಮಶ್ರುರೋಮಕಚಾಸ್ನಾಯುಸಿರಾಧಮನಯೋ ನಖಾಃ ॥ ೧೨ ॥

---

ರೂಪವಾಗಿ ಮೊದಲು ಆಕಾಶಾದಿಯಾಗಿ ಪಂಚಭೂತಗಳು ಹುಟ್ಟಿದುವು ಆದರೆ ಸೃಷ್ಟಿಕ್ರಮದಲ್ಲಿ ಮೊದಲು ಮಹತ್ತತ್ತ್ವದಿಗಳು ಜನಿಸಿದುವೆಂದು ಹೇಳುವುದು ಸಾಧುವಾದರೂ 'ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ'' ಇತ್ಯಾದಿ ಶ್ರುತಿಗಳನ್ನನುಸರಿಸಿ ಮೊದಲು ಆಕಾಶಾದಿಪಂಚಭೂತಗಳ ಸೃಷ್ಟಿಯನ್ನು ಹೇಳಲಾಗಿದೆ ಆಕಾಶಾದಿಪಂಚಭೂತಗಳ ಪಂಚೀಕರಣದಿಂದ ಪಾಂಚಭೌತಿಕಗಳಾದ ಶರೀರಗಳು ಕ್ರಮವಾಗಿ ಉತ್ಪನ್ನವಾಗುತ್ತಲಿವೆ

೯–೧೦ ತಂದೆತಾಯಿಗಳು ತಾವು ತಿಂದ ಆಹಾರದಿಂದ ಆರುಕೋಶಗಳುಳ್ಳ ಒಂದು ಶಿಶುದೇಹವು ಉತ್ಪನ್ನವಾಗುವುದು ನರ, ಮೂಳೆ, ಕೊಬ್ಬು ಇವು ತಂದೆಯಿಂದಲೂ, ಚರ್ಮ, ಮಾಂಸ, ರಕ್ತ ಇವು ತಾಯಿಯಿಂದಲೂ ಬರುವ ಕೋಶಗಳು ಹೀಗೆ ತಾಯಿತಂದೆಗಳಿಂದ ಬಂದ ಆರು ವಿಧಗಳಾದ ಭಾವಗಳೇ ಒಂದು ಮಗುವಿನ ಶರೀರ

೧೧–೧೨ ಹಾಗೆಯೇ ರಸಜನ್ಯವಾದ ಮತ್ತು ಆತ್ಮಜನ್ಯವಾದ ಸತ್ವಗುಣ ಪ್ರಧಾನವಾದ ಭಾವಗಳೆಲ್ಲಾ ಆತ್ಮಜಭಾವಗಳೆನಿಸುವುವು ದೇಹದಲ್ಲಿ ಮೃದು ಭಾವಗಳೆನಿಸಿದ, ರಕ್ತ, ಮೇದಸ್ಸು, ಮಜ್ಜಾ, ಗುಲ್ಮ, ಕಾಲಖಂಡ, ಗುದಭಾಗ,

ದಶನಾಶ್ಶುಕ್ಲಮಿತ್ಯಾದಿ ಸ್ಥಿರಾಃ ಪಿತೃಸಮುದ್ಭವಾಃ ।
ಶರೀರೋಪಚಿತಿರ್ವರ್ಣೋ ವೃದ್ಧಿಸ್ತೃಪ್ತಿರ್ಬಲಂ ಸ್ಥಿತಿಃ ॥ ೧೩ ॥

ಅಲೋಲುಪತ್ವಮುತ್ಸಾಹ ಇತ್ಯಾದೀನ್ ರಸಜಾನ್ವಿದುಃ ।
ಇಚ್ಛಾದ್ವೇಷಸ್ಸುಖಂ ದುಃಖಂ ಧರ್ಮಾಧರ್ಮೌ ಚ ಭಾವನಾ ॥ ೧೪ ॥

ಪ್ರಯತ್ನೋ ಜ್ಞಾನಮಾಯುಶ್ಚೇಂದ್ರಿಯಾಣೀತ್ಯೇವಮಾತ್ಮಜಾಃ ।
ಜ್ಞಾನೇಂದ್ರಿಯಾಣಿ ಶ್ರವಣಂ ಸ್ಪರ್ಶನಂ ದರ್ಶನಂ ತಥಾ ॥ ೧೫ ॥

ರಸನಂ ಘ್ರಾಣಮಿತ್ಯಾಹುಃ ಪಂಚ ತೇಷಾಂ ಚ ಗೋಚರಾಃ ।
ಶಬ್ದಸ್ಸ್ಪರ್ಶಸ್ತಥಾ ರೂಪಂ ರಸೋ ಗಂಧ ಇತಿ ಕ್ರಮಾತ್ ॥ ೧೬ ॥

ವಾಕ್ಕರಾಂಘ್ರಿಗುದೋಪಸ್ಥಾನ್ಯಾಹುಃ ಕರ್ಮೇಂದ್ರಿಯಾಣಿ ಹಿ ।
ವಚನಾದಾನಗಮನವಿಸರ್ಗರತಯಃ ಕ್ರಮಾತ್ ॥ ೧೭ ॥

---

ಹೃದಯ, ನಾಭಿ ಇವು ಮಾತೃಭಾವದಿಂದ ಬರತಕ್ಕವುಗಳು ಮೀಸೆ, ತಲೆ ಕೂದಲು, ಮೈರೋಮ, ನರ, ನಾಡೀ, (ಸ್ಥೂಲಸೂಕ್ಷ್ಮನಾಡಿಗಳು) ಉಗುರು, ಹಲ್ಲು, ವೀರ್ಯ ಮುಂತಾದ ಕಾಠಿನ್ಯಭಾವಗಳು ಪಿತೃಭಾವದಿಂದ ಬರತಕ್ಕವುಗಳು

೧೪–೧೫ ಶರೀರದ ಬೆಳೆವಣಿಗೆ, ಬಣ್ಣ, ಬೆಳೆಯುವಿಕೆ, ತೃಪ್ತಿ, ಶಕ್ತಿ, ಅವಯವ ದಾರ್ಢ್ಯ, ಕಾರ್ಪಣ್ಯವಿಲ್ಲದಿರುವಿಕೆ, ಉತ್ಸಾಹ ಇವೇ ಮೊದಲಾದ ಗುಣಗಳು ರಸಜವಾದವುಗಳು. ಇಚ್ಛೆ, ದ್ವೇಷ, ಸುಖ, ದುಃಖ, ಧರ್ಮ, ಅಧರ್ಮ, ಸ್ಮರಣೆಕೊಡುವ ಸಂಸ್ಕಾರವಿಶೇಷ, ಪ್ರಯತ್ನ, ಜ್ಞಾನ, ಆಯುಸ್ಸು, ಇಂದ್ರಿಯಗಳು, ಇವು ಆತ್ಮಜನ್ಯವಾದ ಗುಣಗಳು ಅಂದರೆ ಪ್ರಾರಬ್ಧಕರ್ಮಜನ್ಯವಾದವುಗಳು.

೧೬–೧೭ ಕೇಳುವಿಕೆ, ಸ್ಪರ್ಶಮಾಡುವಿಕೆ, ನೋಡುವುದು, ರುಚಿತಿಳಿಯುವುದು, ವಾಸನೆಯನ್ನು ಅನುಭವಿಸುವುದು, ಇವು ಕಿವಿ, ಚರ್ಮ, ಕಣ್ಣು, ನಾಲಿಗೆ, ಮೂಗು ಈ ಪಂಚಜ್ಞಾನೇಂದ್ರಿಯಗಳ ಕಾರ್ಯಗಳು ಶಬ್ದ, ಸ್ಪರ್ಶ, ರೂಪ, ರಸ, ಗಂಧ,

ಕ್ರಿಯಾಸ್ತೇಷಾಂ ಮನೋ ಬುದ್ಧಿರಹಂಕಾರಸ್ತತಃ ಪರಂ ।
ಅಂತಃಕರಣಮಿತ್ಯಾಹುಶ್ಚಿತ್ತಂ ಚೇತಿ ಚತುಷ್ಟಯಂ ॥ ೧೮ ॥

ಸುಖಂ ದುಃಖಂ ಚ ವಿಷಯೌ ವಿಜ್ಞೇಯೌ ಮನಸಃ ಕ್ರಿಯಾಃ ।
ಸ್ಮೃತಿರ್ಭೀತಿರ್ವಿಕಲ್ಪಾದ್ಯಾ ಬುದ್ಧಿಸ್ಸ್ಯಾನ್ನಿಶ್ಚಯಾತ್ಮಿಕಾ ॥ ೧೯ ॥

ಅಹಂ ಮಮೇತ್ಯಹಂಕಾರಶ್ಚಿತ್ತಂ ಚೇತಯತೇ ಯತಃ ।
ಸತ್ತ್ವಾಖ್ಯಮಂತಃಕರಣಂ ಗುಣಭೇದಾತ್ತ್ರಿಧಾ ಮತಂ ॥ ೨೦ ॥

---

ಇವು ಆ ಜ್ಞಾನೇಂದ್ರಿಯಗಳಿಗೆ ಗೋಚರಿಸುವ ವಿಷಯಗಳು ವಾಕ್ಕು, ಕೈ, ಕಾಲು, ಗುದ, ಉಪಸ್ಥ ಇವು ಕರ್ಮೇಂದ್ರಿಯಗಳು ಮಾತನಾಡುವುದು, ತೆಗೆದುಕೊಳ್ಳುವುದು, ನಡೆಯುವುದು, ಮಲಮೂತ್ರಗಳನ್ನು ವಿಸರ್ಜಿಸುವುದು, ಸಂಭೋಗಸುಖವನ್ನನುಭವಿಸುವುದು, ಇವು ಆ ಕರ್ಮೇಂದ್ರಿಯಗಳ ಕಾರ್ಯಗಳು

೧೮–೨೦ ಅಂತಃಕರಣವೆಂಬುದು ವೃತ್ತಿಭೇದದಿಂದ ನಾಲ್ಕು ರೀತಿಯಾಗಿ ವ್ಯವಹರಿಸಲ್ಪಡುವುದು ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ ಇವೇ ಆ ನಾಲ್ಕು ಭೇದಗಳು ಸುಖದುಃಖಗಳ ಅನುಭವವೇ ಮಾನಸಿಕ ಕ್ರಿಯೆಗಳು ಸಂಶಯಾತ್ಮಕವಾದದ್ದೇ ಮನಸ್ಸಿನ ಲಕ್ಷಣ ಸ್ಮರಣೆ, ಭಯ, ಅನುಮಾನ ಇವು ಮನಸ್ಸಿನ ಕಾರ್ಯಗಳು ನಿಶ್ಚಯಾತ್ಮಕವಾದ ಅಂತಃಕರಣವೇ ಬುದ್ಧಿಯೆನಿಸುವುದು ನಾನು, ನನ್ನವನು ಎಂಬ ಭಾವವೇ ಅಹಂಕಾರವು ನನ್ನದು ನನಗೆ ಸೇರಿದ್ದು ಎಂಬ ಭಾವನೆಯನ್ನುಂಟುಮಾಡುವುದೇ ಅದರ ಕಾರ್ಯ ಕಾರ್ಯಾಂತರಸ್ಮರಣರೂಪವಾದದ್ದೇ ಚೇತಸ್ಸು ಸ್ಮರಣೆಯೇ ಅದರ ವಿಷಯ ಅವಿದ್ಯಾಮೂಲಕವಾಗಿ ಹುಟ್ಟುವ ಅಂತಃಕರಣವೂ ಅವಿದ್ಯೆಯಂತೆಯೇ ಗುಣತ್ರಯವಿಶಿಷ್ಟವಾದದ್ದು ಸತ್ತ್ವರಜಸ್ತಮೋಗುಣಗಳೇ ಆ ಗುಣತ್ರಯಗಳು ಸತ್ತ್ವಗುಣಪ್ರಧಾನವಾದ ಅಂತಃಕರಣವು ಸಾತ್ತ್ವಿಕಾಂತಃಕರಣವೆನಿಸುವುದು ಅಂತಃಕರಣದಲ್ಲಿ ಸಂಶಯ, ನಿಶ್ಚಯ, ಗರ್ವ, ಸ್ಮರಣೆಗಳೆಂಬ ವ್ಯಾಪಾರಭೇದದಿಂದ ಅಂತಃಕರಣಭೇದವೇ ಹೊರತು ವಸ್ತುಭೇದವಿಲ್ಲ

ಸತ್ತ್ವಂ ರಜಸ್ತಮ ಇತಿ ಗುಣಾಸ್ಸತ್ತ್ವತ್ತು ಸಾತ್ತ್ವಿಕಾಃ ।
ಆಸ್ತಿಕ್ಯಬುದ್ಧಿಧರ್ಮೈಕರುಚಿಪ್ರಭೃತಯೋ ಮತಾಃ ॥ ೨೧ ॥

ರಜಸೋ ರಾಜಸಾ ಭಾವಾಃ ಕಾಮಕ್ರೋಧಮದಾದಯಃ ।
ನಿದ್ರಾಲಸ್ಯಪ್ರಮಾದಾದಿವಂಚನಾದ್ಯಾಸ್ತು ತಾಮಸಾಃ ॥ ೨೨ ॥

ಪ್ರಸನ್ನೇಂದ್ರಿಯತಾರೋಗ್ಯಾನಾಲಸ್ಯಾದ್ಯಾಸ್ತು ಸತ್ತ್ವಜಾಃ ।
ದೇಹೋ ಮಾತ್ರಾತ್ಮಕಸ್ತಸ್ಮಾದಾವತ್ತೇ ತದ್ಗುಣಾನಿಮಾನ್ ॥ ೨೩ ॥

ಶಬ್ದಶ್ಶ್ರೋತ್ರಂ ಮುಖರತಾ ವೈಚಿತ್ರ್ಯಂ ಸೂಕ್ಷ್ಮತಾ ಧೃತಿಃ ।
ಬಲಂ ಚ ಗಗನಾದ್ವಾಯೋಃ ಸ್ಪರ್ಶಶ್ಚ ಸ್ಪರ್ಶನೇಂದ್ರಿಯಂ ॥ ೨೪ ॥

ಉತ್ಕ್ಷೇಪಣಮುಪಕ್ಷೇಪಾಕುಂಚನೇ ಗಮನಂ ತಥಾ ।
ಪ್ರಸಾರಣಮಿತೀಮಾನಿ ಪಂಚಕರ್ಮಾಣಿ ರೂಕ್ಷತಾಂ । ॥ ೨೫ ॥

---

೨೧–೨೨ ಸಾತ್ತ್ವಿಕಾಂತಃಕರಣದಿಂದ, ಪರಲೋಕವಿದ್ಯೆಯಲ್ಲಿ ಬುದ್ಧಿ ಧರ್ಮಕಾರ್ಯಾಸಕ್ತಿ, ಶುದ್ಧಮನಸ್ಸು, ವಿವೇಕ ಇತ್ಯಾದಿ ಭಾವಗಳುದಯಿಸುವುವು ಕಾಮ, ಕ್ರೋಧ, ಮದ, ಲೋಭ ಇವೇ ಮೊದಲಾದವುಗಳು, ರಜೋಗುಣಪ್ರಧಾನವಾದ ಅಂತಕರಣ ವೃತ್ತಿಜನ್ಯಗಳು ಅತಿನಿದ್ದೆ, ಸೋಮಾರಿತನ, ಎಚ್ಚರತಪ್ಪುವಿಕೆ, ವಂಚನೆ, ಇವು ತಾಮಸಾಂತಃಕರಣವೃತ್ತಿಜನ್ಯಗಳು

೨೩–೨೪ ದೇಹವು ಪಂಚೀಕರಣವಲ್ಲದ ಅಂದರೆ ಪರಸ್ಪರ ಮಿಶ್ರಣವಲ್ಲದ ಪಂಚಭೂತಗಳಿಂದ ಕೆಲವು ಗುಣಗಳನ್ನು ಪಡೆಯುವುದು. ಸ್ಥೂಲದೇಹವು ಮಾತ್ರಾತ್ಮಕವಾದದ್ದು ಸತ್ತ್ವಾದಿಗುಣೋದ್ರಿಕ್ತವಾದ ಅಂತಃಕರಣವೃತ್ತಿಯಿಂದ ಸ್ಥೂಲದೇಹಕ್ಕೂ ಅದರ ಕಾರ್ಯಗಳುಂಟಾಗುವುವು ಅದರಲ್ಲಿ ಶಬ್ದ, ಶ್ರೋತ್ರೇಂದ್ರಿಯ, ಮಾತನಾಡುವ ಸಾಮರ್ಥ್ಯ, ಕರ್ಮದಲ್ಲಿ ಕುಶಲತೆ, ಲಘುವಾಗಿರುವಿಕೆ, ಧೈರ್ಯ, ಬಲ, ಇವು ಏಳು ಗುಣಗಳೂ ಆಕಾಶತತ್ತ್ವದಿಂದ ಸ್ಥೂಲದೇಹಕ್ಕೆ ಬರುತ್ತವೆ

೨೫–೨೬ ವಾಯುವಿನಿಂದ ಸ್ಪರ್ಶ, ಮತ್ತು ತ್ವಗಿಂದ್ರಿಯವೂ ಅದರಿಂದ ಹಾರುವುದು, ಎಸೆಯುವುದು, ಬಗ್ಗಿಸುವುದು, ಓಡುವುದು, ಹರಡುವುದು, ಎಂಬ

ಪ್ರಾಣಾಪಾನೌ ತಥಾ ವ್ಯಾನಸಮಾನೋದಾನಸಂಜ್ಞಕಾನ್ ।
ನಾಗಂ ಕೂರ್ಮಂ ಚ ಕೃಕರಂ ದೇವದತ್ತಂ ಧನಂಜಯಂ ॥ ೧೬ ॥

ದಶೇತಿ ವಾಯುವಿಕೃತೀಸ್ತಥಾ ಗೃಹ್ಣಾತಿ ಲಾಘವಂ ।
ತೇಷಾಂ ಮುಖ್ಯತರಃ ಪ್ರಾಣೋ ನಾಭೇಃ ಕಂಠಾದಧಸ್ಸ್ಥಿತಃ ॥ ೧೭ ॥

ಚರತ್ಯಸೌ ನಾಸಿಕಯೋರ್ನಾಭೌ ಹೃದಯಪಂಕಜೇ ।
ಶಬ್ದೋಚ್ಚಾರಣನಿಶ್ವಾಸೋಚ್ಛ್ವಾಸಾದೇರಪಿ ಕಾರಣಂ ॥ ೧೮ ॥

ಅಪಾನಸ್ತು ಗುದೇ ಮೇಢ್ರೇ ಕಟಿಜಂಘೋದರೇಷ್ವಪಿ ।
ನಾಭಿಕಂದೇ ವೃಷಣಯೋರೂರುಜಾನುಷು ತಿಷ್ಠತಿ ॥ ೧೯ ॥

ತಸ್ಯ ಮೂತ್ರಪುರೀಷಾದಿವಿಸರ್ಗಃ ಕರ್ಮ ಕೀರ್ತಿತಂ ।
ವ್ಯಾನೋಽಕ್ಷಿಶ್ರೋತ್ರಗುಲ್ಫೇಷು ಜಿಹ್ವಾಘ್ರಾಣೇಷು ತಿಷ್ಠತಿ ॥ ೨೦ ॥

---

ಯೆಂಬ ಐದು ಕ್ರಿಯೆಗಳೂ, ಕರ್ಕಶತ್ವವೂ, ಪ್ರಾಣ, ಅಪಾನ, ವ್ಯಾನ, ಸಮಾನ, ಉದಾನ, ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ, ಎಂಬ ಹತ್ತು ವಾಯು ವಿಕಾರಗಳೂ, ಲಾಘವವೆಂಬ ಗುಣ ಹೀಗೆ ಹತ್ತೊಂಭತ್ತು ಗುಣಗಳೂ ಸ್ಥೂಲ ದೇಹಕ್ಕೆ ಬರುವುವು ಈ ವಾಯು ಸಂಬಂಧವಾದ ಗುಣಗಳಲ್ಲಿ ಮುಖ್ಯವೆನಿಸಿದದು ಪ್ರಾಣವಾಯುವು ಅದು ನಾಭಿಪ್ರದೇಶದಿಂದ ಕಂಠಪರ್ಯಂತವಾಗಿರುವುದು

೧೮–೨೦ ಇದು ನಾಸಿಕದ ಎರಡು ದ್ವಾರಗಳಿಂದ ಹಿಡಿದು ನಾಭಿಪರ್ಯಂತ ವಾಗಿ ಹೃದಯಕಮಲದಲ್ಲೆಲ್ಲಾ ಸಂಚರಿಸುವುದು ಶಬ್ದಗಳನ್ನುಚ್ಚರಿಸುವುದು, ಉಸಿರುಬಿಡುವುದು, ಎಳೆಯುವುದು ಇವೆಲ್ಲಕ್ಕೂ ಪ್ರಾಣವಾಯುವೇ ಕಾರಣ ಅಪಾನವಾಯುವು ಗುದ, ಮೇಢ್ರ, ಕಟಿ, ಜಂಘೆ, ಉದರ ಈ ಸ್ಥಳಗಳಲ್ಲಿ ಸಂಚರಿ ಸುತ್ತಾ, ನಾಭಿಯಮಧ್ಯದಲ್ಲಿಯೂ, ವೃಷಣಪ್ರದೇಶಗಳಲ್ಲಿಯೂ, ತೊಡೆ, ಮೊಳ ಕಾಲುಗಳಲ್ಲಿಯೂ ನಿಲ್ಲುವುದು ಆ ಅಪಾನವಾಯುವಿನಿಂದ ದೇಹದಲ್ಲಿ ಮೂತ್ರ ಪುರೀಷಾದಿಗಳ ವಿಸರ್ಜನೆಯು ನಡೆಯುವುದು ವ್ಯಾನವೆಂಬ ವಾಯುವು ಕಣ್ಣು, ಕಿವಿ, ಗುಲ್ಫ, ನಾಲಿಗೆ, ಮೂಗು ಇವುಗಳಲ್ಲಿ ಸಂಚರಿಸುವುದು

ಪ್ರಾಣಾಯೊಮಾಧೃತಿತ್ಯಾಗಗ್ರಹಣಾದ್ಯಸ್ಯ ಕರ್ಮ ಚ ।
ಸಮಾನೋ ವ್ಯಾಪ್ಯ ನಿಖಿಲಂ ಶರೀರಂ ವಹ್ನಿನಾ ಸಹ ॥ ೩೧ ॥

ದ್ವಿಸಪ್ತತಿಸಹಸ್ರೇಷು ನಾಡೀರಂಧ್ರೇಷು ಸಂಚರನ್ ।
ಭುಕ್ತಪೀತರಸಾನ್ ಸಮ್ಯಗಾನಯನ್ದೇಹಪುಷ್ಟಿಕೃತ್ ॥ ೩೨ ॥

ಉದಾನಃ ಪಾದಯೋರಾಸ್ತೇ ಹಸ್ತಯೋರಂಗಸಂಧಿಷು ।
ಕರ್ಮಾಸ್ಯ ದೇಹೋನ್ನಯನೋತ್ಕ್ರಮಣಾದಿ ಪ್ರಕೀರ್ತಿತಂ ॥ ೩೩ ॥

ತ್ವಗಾದಿಧಾತೂನಾಶ್ರಿತ್ಯ ಪಂಚ ನಾಗಾದಯಸ್ಸ್ಥಿತಾಃ ।
ಉದ್ಗಾರಾದಿ ನಿಮೇಷಾದಿ ಕ್ಷುತ್ಪಿಪಾಸಾದಿಕಂ ಕ್ರಮಾತ್ ॥ ೩೪ ।

೩೧–೩೨ ಪ್ರಾಣವಾಯುವನ್ನು ನಿರೋಧಿಸುವುದು, ಅದನ್ನು ಕುಂಭಕ ಮಾಡುವುದು, ಬಿಡುವಿಕೆಯಿಂದ ರೇಚಕಪ್ರಕ್ರಿಯೆಯನ್ನು ನಡೆಸುವುದು, ಗ್ರಹಣ ವೆಂಬ ಪೂರಕಕರ್ಮ ಇವೇ ಮೊದಲಾದುವುಗಳು ವ್ಯಾನವಾಯುವಿನ ಕರ್ಮಗಳು ಸಮಾನವಾಯುವು ದೇಹದ ಸರ್ವಭಾಗದಲ್ಲಿಯೂ ಅಗ್ನಿಯೊಡಗೂಡಿ ಸಂಚರಿಸುವುದು ಇದು ಎಪ್ಪತ್ತೆರಡುಸಾವಿರ ನಾಡೀರಂಧ್ರಗಳಲ್ಲಿಯೂ ಸಂಚರಿಸುತ್ತಾ, ಪ್ರಾಣಿಗಳು ತಿಂದ ಆಹಾರದ ರಸವಿಶೇಷವನ್ನು ಎಲ್ಲ ದೇಹಕ್ಕೂ ಸೇರಿ ದೇಹವನ್ನು ಪುಷ್ಟಿ ಗೊಳಿಸುವುದು

೩೩–೩೪ ಉದಾನವಾಯುವು ಎರಡು ಕಾಲುಗಳಲ್ಲಿಯೂ, ಎರಡು ಕೈಗಳ ಲ್ಲಿಯೂ, ಅಂಗಸಂಧಿಗಳಲ್ಲಿಯೂ ಸಂಚರಿಸುವುದು ದೇಹವನ್ನು ಮೇಲಕ್ಕೆತ್ತು ವುದು, ಬಗ್ಗಿಸುವುದು ಇವೇ ಮೊದಲಾದುವುಗಳು ಇವುಗಳ ಕಾರ್ಯಗಳು ಉಳಿದ ನಾಗ, ಕೂರ್ಮ, ಕೃಕರ ದೇವದತ್ತ, ಧನಂಜಯಗಳೆಂಬ ಪಂಚವಾಯು ಭೇದ ಗಳೂ ತ್ವಕ್, ಮಾಂಸ, ರಕ್ತ, ಮೂಳೆ, ಮಜ್ಜಾ, ಸ್ನಾಯು ಇವೇ ಮೊದಲಾದ ಕ್ರಿಯೆಗಳೂ, ಸೋಮಾರಿತನ, ಅಹಂಕಾರ, ದುಃಖಾನುಭವ ಇವೇ ಮೊದಲಾದ ಅನುಭವಗಳೂ ಅವುಗಳಿಂದ ಉಂಟಾಗುವುವು

ತಂದ್ರೀಪ್ರಮತ್ತಶೋಕಾದಿ ಕರ್ಮ ತೇಷಾಂ ಪ್ರಕೀರ್ತಿತಂ
ಅಗ್ನೇಸ್ತು ರೋಚಕಂ ರೂಪದೀಪ್ತಂ ಪಾಕಂ ಪ್ರಕಾಶತಾಂ ॥ ॥ ೩೫ ॥

ಅಮರ್ಷತೀಕ್ಷ್ಣಸೂಕ್ಷ್ಮಾಣಾಮೋಜಸ್ತೇಜಶ್ಚ ಶೂರತಾಂ ।
ಮೇಧಾವಿತಾಂ ತಥಾ ದತ್ತೇ ಜಲಾತ್ತು ರಸನಂ ರಸಂ ॥ ೩೬ ॥

ಶೈತ್ಯಂ ಸ್ನೇಹಂ ದ್ರವಂ ಸ್ವೇದಂ ಗಾತ್ರಾದಿಮೃದುತಾಮಪಿ ।
ಭೂಮೇಘ್ರಾಣೇಂದ್ರಿಯಂ ಗಂಧಂ ಸ್ಥೈರ್ಯಂ ಧೈರ್ಯಂ ಚ ಗೌರವಂ ॥ ೩೭ ॥

ತ್ವಗಸೃಙ್ಮಾಂಸಮೇದೋಽಸ್ಥಿಮಜ್ಜಾಶುಕ್ಲಾನಿ ಧಾತವಃ ।
ಅನ್ನಂ ಪುಂಸಾಶಿತಂ ತ್ರೇಧಾ ಜಾಯತೇ ಜಠರಾಗ್ನಿನಾ ॥ ೩೮ ॥

೩೫–೩೬ ತೇಜಸ್ಸೆಂಬ ಭೂತವಸ್ತುವಿನಿಂದ, ಸ್ಥೂಲದೇಹವು ಸರ್ವ ಪದಾರ್ಥಗಳನ್ನೂ ನೋಡಬಹುದಾದ ಚಕ್ಷುಸ್ಸನ್ನೂ, ವಸ್ತುಗಳ ಆಕಾರವನ್ನೂ, ಶುಭ್ರವಾಗಿ ಹೊಳೆಯುವ ಗುಣವನ್ನೂ, ಆಹಾರಗಳನ್ನು ಜೀರ್ಣಿಸಿಕೊಳ್ಳುವ ಶಕ್ತಿಯನ್ನೂ, ಸ್ಫೂರ್ತಿಯನ್ನೂ, ಕೋಪ, ಚಟುವಟಿಕೆ, ಸೂಕ್ಷ್ಮ, ಓಜಸ್ಸು, ಶೌರ್ಯ, ಮೇಧಾವಿತನ, ಮುಂತಾದ ಸುಗುಣಗಳನ್ನೂ ಹೊಂದುವುದು

೩೬–೩೮ ಜಲದಿಂದ ಸ್ಥೂಲಶರೀರವು ರಸನೇಂದ್ರಿಯವನ್ನೂ, ಆಹಾರಗಳಿಂದ ರಸವನ್ನೂ, ಶೈತ್ಯ, ಜಿಡ್ಡಾಗಿರುವಿಕೆ, ದ್ರವ, ಬೆವರು, ದೇಹದ ಮಾರ್ದವ, ಇವೇ ಮೊದಲಾದ ಗುಣಗಳನ್ನೂ ಪಡೆಯುವುದು ಭೂಮಿಯಿಂದ ನಾಸಿಕೇಂದ್ರಿಯ, ಗಂಧ, ಸ್ಥೈರ್ಯ, ಗುರುತ್ವ (ಭಾರವಾಗಿರುವಿಕೆ) ಚರ್ಮ, ರಕ್ತ, ಮಾಂಸ, ಮೇದಸ್ಸು ಮೂಳೆ, ಮಜ್ಜಾ, ಶುಕ್ಲಗಳೆಂಬ ಸಪ್ತಧಾತುಗಳು ಇವನ್ನು ಪಡೆಯುವುದು ಮನುಷ್ಯರು ತಿಂದ ಆಹಾರವು ಜಠರಾಗ್ನಿಯಿಂದ ಪಚನವಾಗಿ ಮೂರು ವಿಧವಾದ ರೂಪಾಂತರವನ್ನು ಹೊಂದುವುದು

ತಂದ್ರೀಪ್ರಮತ್ತಶೋಕಾದಿ ಕರ್ಮ ತೇಷಾಂ ಪ್ರಕೀರ್ತಿತಂ
ಅಗ್ನೇಸ್ತು ರೋಚಕಂ ರೂಪದೀಪ್ತಂ ಪಾಕಂ ಪ್ರಕಾಶತಾಂ ॥ ॥ ೩೫ ॥

ಅಮರ್ಷತೀಕ್ಷ್ಣಸೂಕ್ಷ್ಮಾಣಾಮೋಜಸ್ತೇಜಶ್ಚ ಶೂರತಾಂ ।
ಮೇಧಾವಿತಾಂ ತಥಾ ದತ್ತೇ ಜಲಾತ್ತು ರಸನಂ ರಸಂ ॥ ೩೬ ॥

ಶೈತ್ಯಂ ಸ್ನೇಹಂ ದ್ರವಂ ಸ್ವೇದಂ ಗಾತ್ರಾದಿಮೃದುತಾಮಪಿ ।
ಭೂಮೇರ್ಘ್ರಾಣೇಂದ್ರಿಯಂ ಗಂಧಂ ಸ್ಥೈರ್ಯಂ ಧೈರ್ಯಂ ಚ ಗೌರವಂ ॥ ೩೭ ॥

ತ್ವಗಸೃಙ್ಮಾಂಸಮೇದೋಽಸ್ಥಿಮಜ್ಜಾಶುಕ್ಲಾನಿ ಧಾತವಃ ।
ಅನ್ನಂ ಪುಂಸಾಶಿತಂ ತ್ರೇಧಾ ಜಾಯತೇ ಜಠರಾಗ್ನಿನಾ ॥ ೩೮ ॥

೩೫–೩೬ ತೇಜಸ್ಸೆಂಬ ಭೂತವಸ್ತುವಿನಿಂದ, ಸ್ಥೂಲದೇಹವು ಸರ್ವ ಪದಾರ್ಥಗಳನ್ನೂ ನೋಡಬಹುದಾದ ಚಕ್ಷುಸ್ಸನ್ನೂ, ವಸ್ತುಗಳ ಆಕಾರವನ್ನೂ, ಶುಭ್ರವಾಗಿ ಹೊಳೆಯುವ ಗುಣವನ್ನೂ, ಆಹಾರಗಳನ್ನು ಜೀರ್ಣಿಸಿಕೊಳ್ಳುವ ಶಕ್ತಿಯನ್ನೂ, ಸ್ಫೂರ್ತಿಯನ್ನೂ, ಕೋಪ, ಚಟುವಟಿಕೆ, ಸೂಕ್ಷ್ಮ, ಓಜಸ್ಸು, ಶೌರ್ಯ, ಮೇಧಾವಿತನ, ಮುಂತಾದ ಸುಗುಣಗಳನ್ನೂ ಹೊಂದುವುದು

೩೭–೩೮ ಜಲದಿಂದ ಸ್ಥೂಲಶರೀರವು ರಸನೇಂದ್ರಿಯವನ್ನೂ, ಆಹಾರಗಳಿಂದ ರಸವನ್ನೂ, ಶೈತ್ಯ, ಜಿಡ್ಡಾಗಿರುವಿಕೆ, ದ್ರವ, ಬೆವರು, ದೇಹದ ಮಾರ್ದವ, ಇವೇ ಮೊದಲಾದ ಗುಣಗಳನ್ನೂ ಪಡೆಯುವುದು ಭೂಮಿಯಿಂದ ನಾಸಿಕೇಂದ್ರಿಯ, ಗಂಧ, ಸ್ಥೈರ್ಯ, ಗುರುತ್ವ (ಭಾರವಾಗಿರುವಿಕೆ) ಚರ್ಮ, ರಕ್ತ, ಮಾಂಸ, ಮೇದಸ್ಸು ಮೂಳೆ, ಮಜ್ಜಾ, ಶುಕ್ಲಗಳೆಂಬ ಸಪ್ತಧಾತುಗಳು ಇವನ್ನು ಪಡೆಯುವುದು ಮನುಷ್ಯರು ತಿಂದ ಆಹಾರವು ಜಠರಾಗ್ನಿಯಿಂದ ಪಚನವಾಗಿ ಮೂರು ವಿಧವಾದ ರೂಪಾಂತರವನ್ನು ಹೊಂದುವುದು

ದಶಾಂಜಲಿ ಜಲಂ ಜ್ಞೇಯಂ ರಸಸ್ಯಾಂಜಲಯೋ ನವ ।
ರಕ್ತಸ್ಯಾಷ್ಟೌ ಪುರೀಷಸ್ಯ ಸಪ್ತ ಸ್ಯುಶ್ಶ್ಲೇಷ್ಮಣಶ್ಚ ಷಟ್ ॥ ೪೪ ॥

ಪಿತ್ತಸ್ಯ ಪಂಚ ಚತ್ವಾರೋ ಮೂತ್ರಸ್ಯಾಂಜಲಯಸ್ತ್ರಯಃ ।
ವಸಾಯಾ ಮೇದಸೋ ದ್ವೌ ತು ಮಜ್ಜಾ ತ್ವಂಜಲಿಸಂಮಿತಾ ॥ ॥ ೪೫ ॥

ಅರ್ಧಾಂಜಲಿ ತತಶ್ಶುಕ್ಲಂ ತದೇವ ಬಲಮುಚ್ಯತೇ ।
ಅಸ್ಥ್ನಾಂ ಶರೀರೇ ಸಂಖ್ಯಾ ಸ್ಯಾತ್ ಷಷ್ಟಿಯುಕ್ತಂ ಶತತ್ರಯಂ ॥ ೪೬ ॥

ಜಲಜಾನಿ ಕಪಾಲಾನಿ ರುಚಕಾಸ್ತರಣಾನಿ ಚ ।
ನಳಕಾನೀತಿ ತಾನ್ಯಾಹುಃ ಪಂಚಧಾಸ್ಥೀನಿ ಸೂರಯಃ ॥ ೪೭ ॥

ದ್ವೇ ಶತೇ ತ್ವಸ್ಥಿಸಂಧೀನಾಂ ಸ್ಯಾತಾಂ ತತ್ರ ದಶೋತ್ತರೇ ।
ರೌರವಾಃ ಪ್ರಸರಾಸ್ತುಂಡಸೇಚಕಾಸ್ಸ್ಯುರುಲೂಖಲಾಃ ॥ ೪೮ ॥

೪೪–೪೫ ಮಾಂಸದಿಂದ ನಾಡಿಗಳುಂಟಾದುವು ಮಾನವ ದೇಹದಲ್ಲಿ ವಾತ, ಪಿತ್ತ, ಕಫಗಳೆಂಬ ಮೂರು ಧಾತುಗಳಿರುವುವು ಬಲಯುತವಾದ ಒಂದು ನರಶರೀರದಲ್ಲಿ ಹತ್ತು ಬೊಗಸೆ ನೀರೂ, ಒಂಬತ್ತು ಬೊಗಸೆ ಆಹಾರರಸವೂ, ಹೀಗೆಯೇ ಒಂದೊಂದು ಬೊಗಸೆ ಕಮ್ಮಿಯಾಗಿ ರಕ್ತ, ಪುರೀಷ, ಕಫ, ಪಿತ್ತ, ಮೂತ್ರ, ವಸೆ, ಮಜ್ಜೆ, ಇವುಗಳೂ ಇರುವುವು

೪೬–೪೯ ವೀರ್ಯವು ಮಾತ್ರ ಅರ್ಧಬೊಗಸೆಯಷ್ಟಿರುವುದು ಅದೇ ದೇಹದ ಬಲವೆನ್ನುವರು ಒಂದು ದೇಹದಲ್ಲಿ ಮುನ್ನೂರರುವತ್ತು ಮೂಳೆಗಳಿರುವುವು ಆ ಮೂಳೆಗಳು ಕಪಾಲ, ಜಲಜ, ರುಚಕ, ಆಸ್ತರಣ, ನಳಕಗಳೆಂಬ ಐದು ವಿಧಗಳಾಗಿರುವುವು ಈ ಮೂಳೆಗಳ ಸಂಧಿಭಾಗಗಳು ಒಟ್ಟು ೨೧೦ ಇರುವುವು

ಸಮುದ್ರಾ ಮಂಡಲಾಖ್ಯಂಖಾವರ್ತಾ ವಾಯಸತುಂಡಕಾಃ ।
ಇತ್ಯಷ್ಟಧಾ ಸಮುದ್ದಿಷ್ಟಾಃ ಶರೀರೇಷ್ವಸ್ಥಿಸಂಧಯಃ ॥ ೪೯ ॥

ಸಾರ್ಧಕೋಟಿತ್ರಯಂ ರೋಮ್ಣಾಂ ಶ್ಮಶ್ರುಕೇಶಾಸ್ತ್ರಿಲಕ್ಷಕಾಃ ।
ದೇಹಸ್ವರೂಪಮೇವಂ ತೇ ಪ್ರೋಕ್ತಂ ದಶರಥಾತ್ಮಜ ॥ ೫೦ ॥

ಯಸ್ಮಾದಸಾರೋ ನಾಸ್ತ್ಯೇವ ಪದಾರ್ಥೋ ಭುವನತ್ರಯೇ ।
ದೇಹೇಽಸ್ಮಿನ್ನಭಿಮಾನೇನ ನ ಮಹೋಪಾಯಬುದ್ಧಯಃ ॥ ೫೧ ॥

---

ಅವುಗಳಲ್ಲಿ ರೌರವ, ಪ್ರಸರ, ತುಂಡಸೇಚಕ, ಉಲೂಖಲ, ಸಮುದ್ರ, ಮಂಡಲ, ಶಂಖಾವರ್ತ, ವಾಯಸತುಂಡಕಗಳೆಂಬ ಎಂಟು ವಿಧಗಳವೆ

೫೦-೫೨ ಶ್ರೀರಾಮನೇ ಕೇಳು ಈ ಮಾನವ ಶರೀರದಲ್ಲಿ ಮೂರೂವರೆ ಕೋಟಿ ರೋಮಗಳೂ, ಮೀಸೆ ಮತ್ತು ಕೇಶಗಳು ಮೂರುಲಕ್ಷ ಸಂಖ್ಯೆಯಲ್ಲಿಯೂ ಇರುವುವು ದಾಶರಥಿಯೇ, ಇಲ್ಲಿನವರೆಗೂ ನಾನು ನಿನಗೆ ದೇಹದ ಬಾಹ್ಯಸ್ವರೂಪ ವನ್ನು ವಿವರಿಸಿ ಹೇಳಿರುವೆನು ಹೀಗೆ ಮಾಯಾವಿಲಾಸಾತ್ಮಕವೆನಿಸಿರುವ ದೇಹದ ಮೇಲೆ ವಿಶೇಷವಾದ ಪ್ರೀತಿಯನ್ನು ಹೊಂದಿರುವುದು ಸರ್ವಥಾ ಅನ್ಯಾಯ ಮೂರು ಲೋಕಗಳಲ್ಲಿ ಹುಡುಕಿದರೂ ಈ ದೇಹಕ್ಕಿಂತ ಹೇಸಿಗೆಯೆನಿಸಿರುವ ವಸ್ತುವು ಮತ್ತೊಂದಿಲ್ಲ ಇಂತಹ ಭಂಗುರವಾದ ಮತ್ತು ಜುಗುಪ್ಸೆಗೊಳಗಾಗಿರುವ ದೇಹದಲ್ಲಿ ಅಹಂಕಾರದಿಂದ, ಮಮತೆಯಿಂದ, ಸುಖವನ್ನೇ ಬಂದುತ್ಸವವನ್ನಾಗಿ ತಿಳಿದು ಅಜ್ಞಾನಿಗಳು ನಿಜವಾಗಿಯೂ ಕೆಟ್ಟುಹೋಗುವರು ಮೋಕ್ಷೋಪಾಯವು ಅವರಿಗೆ ಎಂದಿಗೂ ಹೊಳೆಯುವುದೇ ಇಲ್ಲ ಆದ್ದರಿಂದ ನಿಜವಾದ ಆನಂದವನ್ನುಂಟು ಮಾಡುವ ಮೋಕ್ಷವನ್ನು ಪಡೆಯಲಪೇಕ್ಷಿಸುವವರು, ಈ ದೇಹದಲ್ಲಿ ವಿಶೇಷ ಅಭಿಮಾನವನ್ನಿಡದೆ, ಪರಬ್ರಹ್ಮವಸ್ತು ಸಾಕ್ಷಾತ್ಕಾರಕ್ಕೆ ಮನಗೊಡಲೆಂಬ ಭಾವನೆ

**ಅಹಂಕಾರೇಣ ಪಾಪೇನ ಕ್ರಿಯಂತೇ ಹಂತ ಸಾಂಪ್ರತಂ ।**
**ತಸ್ಮಾದೇತತ್ಸ್ವರೂಪಂ ತು ಬೋಧ್ದವ್ಯಂ ತು ಮುಮುಕ್ಷುಭಿಃ ॥ ೫೨ ॥**

**ಇತಿ ಶ್ರೀ ಪದ್ಮಪುರಾಣೇ ಶಿವಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಶಿವರಾಘವಸಂವಾದೇ ದೇಹಸ್ವರೂಪ ನಿರೂಪಣಯೋಗೋ ನಾಮ**

**॥ ನವಮೋಽಧ್ಯಾಯಃ ॥**

---

ಯಿಂದ ನಿನಗೆ ಈ ವಿಷಯುಗಳನ್ನೆಲ್ಲಾ ತಿಳಿಸಿರುವೆನೆಂದು ಪರಮೇಶ್ವರನು ಶ್ರೀರಾಮ ನಿಗೆ ದೇಹಸ್ವರೂಪವನ್ನೂ ಅದರ ಅನಿತ್ಯತೆಯನ್ನೂ ತಿಳಿಸಿದನು

ಇಲ್ಲಿಗೆ ಶ್ರೀ ಪದ್ಮಪುರಾಣಾಂತರ್ಗತವಾದ ಶ್ರೀ ಶಿವಗೀತೆಯಲ್ಲಿ ದೇಹಸ್ವರೂಪ ನಿರೂಪಣವೆಂಬ ಒಂಬತ್ತನೆಯ ಅಧ್ಯಾಯವು ಮುಗಿದುದು

|| ಶ್ರೀಃ ||

# ಶ್ರೀ ಶಿವಗೀತಾ

## || ಅಥ ದಶಮೋಽಧ್ಯಾಯಃ ||

|| ಶ್ರೀರಾಮ ಉವಾಚ ||

ಭಗವನ್ ಕುತ್ರ ಜೀವೋಽಸೌ ಜಂತೋರ್ದೇಹೇಽವತಿಷ್ಠತೇ ।
ಜಾಯತೇ ವಾ ಕುತೋ ಜೀವಃ ಸ್ವರೂಪಂ ಚಾಸ್ಯ ಕಿಂ ವದ || ೧ ||

ದೇಹಾಂತೇ ವಾ ಕುತೋ ಯಾತಿ ಗತ್ವಾ ವಾ ಕುತ್ರ ತಿಷ್ಠತಿ ।
ಕಥಮಾಯಾತಿ ವಾ ದೇಹಂ ಪುನರ್ನಾಯಾತಿ ವಾ ವದ || ೨ ||

|| ಶ್ರೀ ಮಹಾದೇವ ಉವಾಚ ||

ಸಾಧು ಪೃಷ್ಟಂ ಮಹಾಭಾಗ ಗುಹ್ಯಾದ್ಗುಹ್ಯತಮಂ ಹಿ ಯತ್ ।
ದೇವೈರಪಿ ಸುದುರ್ಜ್ಞೇಯಮಿಂದ್ರಾದ್ಯೈರ್ವಾ ಮಹರ್ಷಿಭಿಃ || ೩ ||

---

## ಹತ್ತನೆಯ ಅಧ್ಯಾಯ

೧-೨ ಅನಂತರ ಶ್ರೀರಾಮನು ಪರಮೇಶ್ವರನನ್ನು ಕುರಿತು "ಸಮಸ್ತ ಪ್ರಾಣಿಗಳ ದೇಹದಲ್ಲಿಯೂ ಅಡಗಿರುವ ಜೀವನು ಹುಟ್ಟಿದುದು ಹೇಗೆ? ಅವನ ನಿಜವಾದ ಸ್ವರೂಪವೇನು? ದೇಹವು ನಾಶವಾದ ಮೇಲೆ ಆ ಜೀವನ ಗತಿಯೇನು? ಈ ದೇಹವನ್ನು ತ್ಯಜಿಸಿ ಅವನು ಮುಂದ ಹೋಗುವುದೆಲ್ಲಿಗೆ? ಒಂದು ದೇಹವನ್ನು ತ್ಯಜಿಸಿ ಜೀವನು ಮತ್ತೊಂದು ದೇಹವನ್ನು ಸೇರುವ ಕ್ರಮ ಹೇಗೆ? ಅಥವಾ ಒಂದೊಂದು ದೇಹಕ್ಕೆ ಬೇರೆ ಬೇರೆ ಜೀವರಿರುವರೆ? ಜೀವರಿಗೆ ದೇಹಾಂತರ ಸಂಸರ್ಗವುಂಟೆ? ಈ ಎಲ್ಲಾ ಪ್ರಶ್ನೆಗಳಿಗೂ ನನಗೆ ಸಮಾಧಾನ ಹೇಳಬೇಕು" ಎಂದು ಪ್ರಾರ್ಥಿಸಿದನು

೩-೫ ಪರಮೇಶ್ವರನು ಶ್ರೀರಾಮನ ಭಕ್ತಿಗೂ ವಿನಯಕ್ಕೂ ಮೆಚ್ಚಿ, ಶ್ರೀರಾಮನ ಪ್ರಶ್ನೆಗನುಸಾರವಾಗಿ ವಿಷಯವನ್ನು ಈರೀತಿ ಬೋಧಿಸತೊಡಗಿದನು

ಅನ್ಯಸ್ಮೈನೈವ ವಕ್ತವ್ಯಂ ಮಯಾಪಿ ರಘುನಂದನ ।
ತ್ವದ್ಭಕ್ತ್ಯಾಹಂ ಪರಂ ಪ್ರೀತೋ ವಕ್ಷ್ಯಾಮ್ಯವಹಿತಶ್ಶೃಣು ॥ ೪ ॥

ಸತ್ಯಜ್ಞಾನಾತ್ಮಕೋಽನಂತಃ ಪರಮಾನಂದವಿಗ್ರಹಃ ।
ಪರಮಾತ್ಮಾ ಪರಂ ಜ್ಯೋತಿರವ್ಯಕ್ತೋ ವ್ಯಕ್ತಕಾರಣಂ ॥ ೫ ॥

ನಿತ್ಯೋ ವಿಶುದ್ಧಸ್ಸರ್ವಾತ್ಮಾ ನಿರ್ಲೇಪೋಽಹಂ ನಿರಂಜನಃ ।
ಸರ್ವಧರ್ಮವಿಹೀನಶ್ಚ ನ ಗ್ರಾಹ್ಯೋ ಮನಸಾಪಿ ಚ ॥ ೬ ॥

"ಮಹಾಪ್ರಾಜ್ಞನೇ, ನೀನು ಬಹಳ ಚೆನ್ನಾಗಿ ಪ್ರಶ್ನೆಮಾಡಿದೆ? ನಿನ್ನ ಪ್ರಶ್ನೆಗಳಿಗೆ ಉತ್ತರ ಹೇಳಲು ಯಾರಿಂದಲೂ ಸಾಧ್ಯವಿಲ್ಲ ಏಕೆಂದರೆ ಅದು ಅಷ್ಟು ರಹಸ್ಯವಾದುದು ಇಂದ್ರಾದಿ ಸಕಲದೇವತೆಗಳಿಗೂ, ಮಹರ್ಷಿವರ್ಯರಿಗೂ ಈ ವಿಷಯವು ಸುಲಭವಾಗಿ ತಿಳಿಯಲಾರದು ಈ ರಹಸ್ಯವನ್ನು ಅನಧಿಕಾರಿಗಳಿಗೆ ಹೇಳಲೂ ಬಾರದು ಈಗ ನಾನು ನಿನ್ನ ಭಕ್ತ್ಯತಿಶಯಕ್ಕೆ ಮೆಚ್ಚಿ ಆ ರಹಸ್ಯಾಂಶವನ್ನೆಲ್ಲಾ ಹೇಳುವೆನ. ಕೇಳು ಪರಮಾತ್ಮ ಪ್ರತಿಬಿಂಬವೇ ಜೀವವು ಪ್ರತಿಬಿಂಬೀಭೂತವಾದ ಜೀವನ ಸ್ವರೂಪವನ್ನು ಅರಿಯುವುದಕ್ಕೆ ಮುಂಚೆ ಬಿಂಬವಾದ ಪರಮಾತ್ಮನ ಸ್ವರೂಪವನ್ನು ಅರಿಯುವುದು ಒಳ್ಳೆಯದು ಪರಮಾತ್ಮನು ಸತ್ಯಜ್ಞಾನಾತ್ಮಕನು ಅವಿದ್ಯಾವೃತನಾಗುವ ಜೀವನಿಗೆ ಭಾಸಕನಾದವನು ಸಚ್ಚಿದಾನಂದರೂಪಿಯು ಅವನಿಗೆ ಯಾವ ವಸ್ತುಸಂಸರ್ಗವೂ ಇಲ್ಲ ಕ್ರಿಯಾರಹಿತನಾದವನು ಪಾಪ ಲೇಶವೂ ಇಲ್ಲದವನು ಯಾವ ಧರ್ಮವೂ ಅವನಲ್ಲಿ ಕಾಣುವುದಿಲ್ಲ ಯಾರ ಮನಸ್ಸಿಗೂ ವಿಷಯನಾಗದವನು ಅಂತಹ ಪರಮಾತ್ಮನೇ ನಾನು

೬–೮ ಯಾವ ಇಂದ್ರಿಯಗಳಿಗೂ ನಾನು ಗೋಚರಿಸತಕ್ಕವನಲ್ಲ ಆದರೆ ಎಲ್ಲ ಇಂದ್ರಿಯಗಳನ್ನೂ ನಾನು ಅಧೀನದಲ್ಲಿಟ್ಟುಕೊಳ್ಳುವೆನು ಪ್ರಪಂಚದ ಸರ್ವವಿಷಯವನ್ನೂ ನಾನು ಅರಿಯುವೆನು ನನ್ನನ್ನು ಮಾತ್ರ ಯಾರೂ ಸರಿಯಾಗಿತಿಳಿಯುಲಾರರು ಯಾವ ವಿಧವಾದ ವಿಕಾರವೂ ನನಗಿಲ್ಲ ನನ್ನಿಂದ ಯಾವ ಪರಿಣಾಮವೂ

ನಾಹಂ ಸರ್ವೇಂದ್ರಿಯಗ್ರಾಹ್ಯಃ ಸರ್ವೇಷಾಂ ಗ್ರಾಹಕೋ ಹ್ಯಹಂ ।
ಜ್ಞಾತಾಹಂ ಸರ್ವಲೋಕಸ್ಯ ಮಮ ಜ್ಞಾತಾ ನ ವಿದ್ಯತೇ ॥ ೭ ॥

ದೂರಸ್ಸರ್ವವಿಕಾರಾಣಾಂ ಪರಿಣಾಮಾದಿಕಸ್ಯ ಚ ।
ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ॥ ೮ ॥

ಆನಂದಂ ಬ್ರಹ್ಮ ಮಾಂ ಜ್ಞಾತ್ವಾ ನ ಬಿಭೇತಿ ಕುತಶ್ಚನ ।
ಯಸ್ತು ಸರ್ವಾಣಿ ಭೂತಾನಿ ಮಯ್ಯೇವೇತಿ ಪ್ರಪಶ್ಯತಿ ॥ ೯ ॥

ಮಾಂ ಚ ಸರ್ವೇಷು ಭೂತೇಷು ತತೋ ನ ವಿಜುಗುಪ್ಸತೇ ।
ಯಸ್ಯ ಸರ್ವಾಣಿ ಭೂತಾನಿ ಆತ್ಮೈವಾಭೂದ್ವಿಜಾನತಃ ॥ ೧೦ ॥

ಕೋ ಮೋಹಸ್ತತ್ರ ಕಶ್ಶೋಕ ಏಕತ್ವಮನುಪಶ್ಯತಃ ।
ಏಷ ಸರ್ವೇಷು ಭೂತೇಷು ಗೂಢಾತ್ಮಾ ನ ಪ್ರಕಾಶತೇ ॥ ೧೧ ॥

---

ಆಗಲಾರದು (ಇದರಿಂದ ವಿವರ್ತವಾದವೇ ಸಿದ್ಧಾಂತವೆಂದು ಹೇಳಿದಂತಾಯಿತು) ಸರ್ವರ ಮನಸ್ಸೂ, ಮಾತೂ ಯಾರನ್ನು ಸರಿಯಾಗಿ ತಿಳಿಯಲಾರದೋ, ಅಥವಾ ಯಾರ ಸ್ವರೂಪವನ್ನು ವಿವರವಾಗಿ ಹೇಳಲಾರದೋ ಅಂತಹ ವಾಚಾಮಗೋಚರನೇ ನಾನು

೯–೧೦ ಸತ್ಯಜ್ಞಾನಾನಂದ ಸ್ವರೂಪನಾದ ನನ್ನ ಸ್ವರೂಪವನ್ನರಿತವರಿಗೆ ಸಂಸಾರಾದಿಗಳ ಭಯವು ಸ್ವಲ್ಪವೂ ಇರುವುದಿಲ್ಲ ಪೃಥಿವ್ಯಾದಿ ಸಕಲ ಭೂತಗಳೂ ನನ್ನಲ್ಲಿಯೇ ಅಡಗಿರುವುವು ಎಂದು ಯಾವನು ಅರಿಯುವನೋ, ಅವನಿಗೆ ಪಂಚ ಭೂತವಿಕಾರಗಳಾದ ವಸ್ತುಗಳಲ್ಲಿ ಆಸೆಯಾಗಲಿ ಜುಗುಪ್ಸೆಯಾಗಲಿ ಕಾಣುವುದಿಲ್ಲ ವಿಜ್ಞಾನಿಯು ಪ್ರಾಪಂಚಿಕವಾದ ಸಕಲ ವಸ್ತುಗಳನ್ನೂ ಪರಬ್ರಹ್ಮಮಯವನ್ನಾಗಿಯೇ ತಿಳಿಯುತ್ತಾನೆ

೧೧–೧೨ ಪ್ರಪಂಚವು ಸುಳ್ಳು, ಆತ್ಮನೊಬ್ಬನೇ ಸತ್ಯವೆಂದು ತಿಳಿಯುವ ಜ್ಞಾನಿಗೆ ಶೋಕಮೋಹಾದಿಗಳಿರುವುದಿಲ್ಲ ಪರಮಾತ್ಮನು ಸಮಸ್ತ ಪ್ರಾಣಿಗಳಲ್ಲಿಯೂ

ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ।
ಅನಾದ್ಯವಿದ್ಯಯಾ ಯುಕ್ತಸ್ತಥಾಪ್ಯೇಕೋಽಹಮವ್ಯಯಃ ॥ ೧೨ ॥

ಅವ್ಯಾಕೃತಬ್ರಹ್ಮರೂಪೋ ಜಗತ್ಕರ್ತಾಹಮೀಶ್ವರಃ ।
ಜ್ಞಾನಮಾತ್ರೇ ಯಥಾ ದೃಶ್ಯಮಿದಂ ಸ್ವಪ್ನೇ ಜಗತ್ತ್ರಯಂ ॥ ೧೩ ॥

ತದ್ವನ್ಮಯಿ ಜಗತ್ಸರ್ವಂ ದೃಶ್ಯತೇಽಸ್ತಿ ವಿಲೀಯತೇ ।
ನಾನಾವಿದ್ಯಾಸಮಾಯುಕ್ತೋ ಜೀವತ್ವೇನ ವಸಾಮ್ಯಹಂ ॥ ೧೪ ॥

ಗೂಢವಾಗಿದ್ದು ಯಾರಿಗೂ ಗೋಚರಿಸಲಾರನು ಆದರೆ ಯಾರು ಗುರೂಪದೇಶ ಶ್ರವಣಾದಿಗಳಿಂದ ಚಿತ್ತಶುದ್ಧಿಯನ್ನು ಪಡೆದಿರುವರೋ, ಸೂಕ್ಷ್ಮದೃಷ್ಟಿಯಿಂದ ಬ್ರಹ್ಮ ಸ್ವರೂಪವನ್ನರಿಯಲು ಸಮರ್ಥರಾಗಿರುವರೋ, ಅವರಿಗೆ ಪರಬ್ರಹ್ಮಸಾಕ್ಷಾತ್ಕಾರ ವಾದೀತು ಉಳಿದವರಿಗೆ ಬ್ರಹ್ಮಸ್ವರೂಪವು ಗೋಚರಿಸಲಾರದು

೧೨-೧೩ ಹೀಗೆ ನಾನು ಸಜಾತೀಯ ವಿಜಾತೀಯ ಸ್ವಗತಭೇದರಹಿತನೆನಿಸಿ ಏಕವಸ್ತುವೆನಿಸಿದರೂ, ಅನಾದಿಯಾಗಿ ಬಂದ ಅವಿದ್ಯಾಸಂಬಂಧನಾಗಿ ಅವ್ಯಾಕೃತ ವಾದ ನಾಮರೂಪಾದಿಗಳನ್ನು ಪಡೆದು ಪ್ರಪಂಚವೆನಿಸುವೆನು ಅವಿದ್ಯಾಶಬಲವಾದ ಬ್ರಹ್ಮವಸ್ತುವೆನಿಸಿ ಜಗತ್ಕರ್ತನೆನಿಸುವೆನು ಕನಸಿನಲ್ಲಿ ಕಾಣುವ ಮೂರುಲೋಕ ಗಳಂತೆ ನನ್ನಲ್ಲಿ ಪ್ರಕಾಶಿಸುವ ಈ ಪ್ರಪಂಚವೆಲ್ಲವೂ ಮಿಥ್ಯಾಭೂತವಾದದ್ದು. ಪ್ರಪಂಚದ ಉತ್ಪತ್ತಿ ಸ್ಥಿತಿ ಲಯಗಳು ನನ್ನಲ್ಲಿ ಅವಿದ್ಯಾಸಂಬಂಧದಿಂದ ತೋರು ವುವೇ ಹೊರತು ಅವೆಲ್ಲವೂ ವಾಸ್ತವಗಳಲ್ಲ ಇಂತಹ ನಾನು ನಾನಾವಿದ್ಯೆಗಳಲ್ಲಿ ಕೂಡಿ ದೇಹಗಳಲ್ಲಿ ಜೀವರೂಪದಿಂದಿರುವೆ ಇದರಿಂದಲೇ ಜೀವನೂ ಸಹ ಸಚ್ಚಿ ದಾನಂದರೂಪನಾದ ಆತ್ಮನೇ ಎಂಬುದಾಗಿ ತಿಳಿದುಕೊ

೧೪-೧೬ ಆ ಜೀವನಿಗೆ ಪಂಚ ಜ್ಞಾನೇಂದ್ರಿಯಗಳೂ, ಪಂಚಕರ್ಮೇಂದ್ರಿ ಯಗಳೂ, ಮನೋ ಬುದ್ಧ್ಯಹಂಕಾರ ಚಿತ್ತಗಳೆಂಬ ಅಂತಃಕರಣವೂ ಪ್ರಾಣಾ ಪಾನಾದಿ ಪಂಚವಾಯುಗಳೂ ಸೇರಿ ಭೋಗಸಾಧನವೆನಿಸಿದ ಸೂಕ್ಷ್ಮಾಂಗವೆಂಬ ಲಿಂಗ

ಪಂಚ ಕರ್ಮೇಂದ್ರಿಯಾಣ್ಯೇವ ಪಂಚ ಜ್ಞಾನೇಂದ್ರಿಯಾಣಿ ಚ ।
ಮನೋ ಬುದ್ಧಿರಹಂಕಾರಶ್ಚಿತ್ತಂ ಚೇತಿ ಚತುಷ್ಟಯಂ ॥ ೧೫ ॥

ವಾಯವಃ ಪಂಚ ಮಿಳಿತಾ ಯಾಂತಿ ಲಿಂಗಶರೀರತಾಂ ।
ತತ್ರಾವಿದ್ಯಾಸಮಾಯುಕ್ತಂ ಚೈತನ್ಯಂ ಪ್ರತಿಬಿಂಬಿತಂ ॥ ೧೬ ॥

ವ್ಯಾವಹಾರಿಕಜೀವಸ್ತು ಕ್ಷೇತ್ರಜ್ಞಃ ಪುರುಷೋಽಪಿ ಚ ।
ಸ ಏವ ಜಗತಾಂ ಭೋಕ್ತಾ ನಾದ್ಯಯೋಃ ಪುಣ್ಯಪಾಪಯೋಃ ॥ ೧೭ ॥

ಇಹಾಮುತ್ರ ಗತೀ ತಸ್ಯ ಜಾಗ್ರತ್ಸ್ವಪ್ನಾದಿಭೋಕ್ತೃತಾ ।
ಯಥಾ ದರ್ಪಣಕಾಲಿಮ್ನಾ ಮಲಿನಂ ದೃಶ್ಯತೇ ಮುಖಂ ॥ ೧೮ ॥

ತದ್ವದಂತಃಕರಣಗೈರ್ದೋಷೈರಾತ್ಮಾಪಿ ದೃಶ್ಯತೇ ।
ಪರಸ್ಪರಾಧ್ಯಾಸವಶಾತ್ಸ್ಯಾದಂತಃಕರಣಾತ್ಮನೋಃ ॥ ೧೯ ॥

ಶರೀರವೊಂದುದಯಿಸುವುದು "ಪಂಚಪ್ರಾಣ ಮನೋಬುದ್ಧಿ ದಶೇಂದ್ರಿಯ ಸಮನ್ವಿತಂ । ಅಪಂಚೀಕೃತಭೂತೋತ್ಥಂ ಸೂಕ್ಷ್ಮಾಂಗಂ ಭೋಗಸಾಧನಂ" ಹೀಗೆಂದು ಶ್ರೀಮದಾಚಾರ್ಯರು ಲಿಂಗಶರೀರದ ಉತ್ಪತ್ತಿಕ್ರಮವನ್ನು ಹೇಳಿರುವರು

೧೬–೨೦. ಅಂತಹ ಲಿಂಗಶರೀರದಲ್ಲಿ ಅವಿದ್ಯಾಸಮಾಯುಕ್ತವಾದ ಈಶ್ವರ ಚೈತನ್ಯವು ಪ್ರತಿಬಿಂಬಿತವಾಗುವುದು ಆ ಪ್ರತಿಬಿಂಬವೇ ವ್ಯಾವಹಾರಿಕವಾದ ಜೀವ, ಕ್ಷೇತ್ರಜ್ಞ, ಪುರುಷ ಎಂಬ ಹೆಸರಿನಿಂದ ಜಗತ್ತಿನ ಸುಖದುಃಖಾದಿಗಳಿಗೆ ಭೋಕ್ತೃವೆನಿಸುವುದು ಅನಾದಿಯಾದ ಪುಣ್ಯಪಾಪಗಳ ಫಲವನ್ನು ಅನುಭವಿಸುವವನೂ ಅತನೇ ಇಹಪರಲೋಕಗಳೂ, ಜಾಗ್ರದಾದ್ಯವಸ್ಥೆಗಳೂ, ಆತನಿಗಾಗಿಯೇ ಇರುವುವು ಕನ್ನಡಿಯೊಳಗಿರುವ ಕೊಳೆಯಿಂದ, ನೋಡಿಕೊಳ್ಳುವವರ ಶುಭ್ರವಾದ ಮುಖವೂ ಮಲಿನವಾಗಿ ಕಾಣುವಂತೆ, ಅಂತಃಕರಣಗತವಾದ ದೋಷಸಮುದಾಯಗಳಿಂದ ಅಂದರೆ ಕಾಮಕ್ರೋಧಾದಿಗಳಿಂದ ಆತ್ಮನೂ ಮಲಿನವಾಗಿ ಅಂದರೆ ದೋಷಯುಕ್ತ

ಏಕೀಭಾವಾಭಿಮಾನೇನ ಪರಾತ್ಮಾ ದುಃಖಭಾಗಿವ ।
ಮರುಭೂಮೌ ಜಲತ್ವೇನ ಮಧ್ಯಾಹ್ನಾರ್ಕಮರೀಚಿಕಾಃ ॥ ೨೦ ॥

ದೃಶ್ಯಂತೇ ಮೂಢಚಿತ್ತಸ್ಯ ನ ಹ್ಯಾರ್ದ್ರಾಸ್ತಾಪಕಾರಕಾಃ ।
ತದ್ವದಾತ್ಮಾಪಿ ನಿರ್ಲೇಪೋ ದೃಶ್ಯತೇ ಮೂಢಚೇತಸಾಂ ॥ ೨೧ ॥

ಸ್ವಾವಿದ್ಯಾತ್ಮಾತ್ಮದೋಷೇಣ ಕರ್ತೃತ್ವಾದಿಕಧರ್ಮವಾನ್ ।
ತತ್ರ ಚಾನ್ನಮಯೇ ಪಿಂಡೇ ಹೃದಿ ಜೀವೋಽವತಿಷ್ಠತೇ ॥ ೨೨ ॥

ಆನಖಾಗ್ರಂ ವ್ಯಾಪ್ಯ ದೇಹೇ ತದ್ವ್ಯ್ರವೇಽವಹಿತಶ್ಶೃಣು ।
ಸೋಽಯಂ ತದಭಿಮಾನೇನ ಮಾಂಸಪಿಂಡೋ ವಿರಾಜತೇ ॥ ೨೩ ॥

ನಾಗಿ ಕಂಡು ಬರುವನು ಹೀಗೆ ಅಂತಃಕರಣನೂ ಆತ್ಮನೂ ಒಂದೇ ಎಂದು ಇಲ್ಲದಿರುವ ಸ್ಥಳದಲ್ಲಿ ಇದ್ದ ಹಾಗೆ ತೋರುವ ಅಧ್ಯಾಸಬಲದಿಂದ, ಪರಾಪರಸ್ವರೂಪ ನಾದ ಆತ್ಮನೂ ದುಃಖಭಾಗಿಯಾಗಿ ಗೋಚರನಾಗುವನು ನಿಜವಾಗಿಯೂ ಪರ ಮಾತ್ಮನು ನಿಸ್ಸಂಗನಾದುದರಿಂದ ಅವನಿಗೆ ಎಂದೂ ದುಃಖಭಾಗಿತ್ವವಿರುವುದಿಲ್ಲ

೨೧—೨೩ ಮರಳು ಭೂಮಿಯಲ್ಲಿ ಮಧ್ಯಾಹ್ನ ಕಾಲದ ಬಿಸಿಲು ಝಳವು ಮಾನವರಿಗೆ ನೀರಿನಂತೆ ಕಂಡುಬಂದರೂ, ಅವರಲ್ಲಿ ತಂಪಾಗುವ ಅಥವಾ ಜಲಪಾನ ಮಾಡುವ ಕ್ರಿಯೆಯು ಹೇಗೆ ಅಸಂಭವವೆನಿಸುವುದೋ, ಅದರಂತೆ ನಿರ್ಲೇಪನಾದ ಆತ್ಮನಲ್ಲಿ, ಅವಿದ್ಯಾರೂಪವಾದ ಆತ್ಮಾಧ್ಯಸ್ತ ದೋಷವಿಶೇಷದಿಂದ ಅವಿವೇಕಿಗಳಿಗೆ ಆತ್ಮನೇ ಸಕಲ ಕಾರ್ಯಕರ್ತೃವೆಂಬ ಬುದ್ಧಿಯುಂಟಾಗುವುದು ಆತ್ಮನು ವಿಭುದ್ರವ್ಯದಂತೆ ಸರ್ವವ್ಯಾಪಿಯಾಗಿದ್ದರೂ, ಔಪಾಧಿಕವಾಗಿ ಆತ್ಮನಿಗೆ ಒಂದು ಸ್ಥಾನ ಮತ್ತು ಪರಿಮಾಣವೂ ಉಂಟು ಅನ್ನವಿಕಾರದಿಂದ ಜನ್ಯವಾದ ಸ್ಥೂಲದೇಹದಲ್ಲಿ ಉಗುರುಗಳಿಂದ ಹಿಡಿದು ಶಿರಸ್ಸಿನ ಪರ್ಯಂತವಾಗಿ ಜೀವರೂಪದಿಂದ ಆತ್ಮನು ನಿಲ್ಲುವನು ಹಾಗೆ ಜೀವನು ದೇಹವ್ಯಾಪಿಯಾಗಿರುವ ವಿಷಯವನ್ನು ವಿವರಿಸಿ

ನಾಭೇರೂರ್ಧ್ವಮಧಃ ಕಂಠಾದ್ವ್ಯಾಪ್ಯ ತಿಷ್ಠತಿ ಯತ್ಸದಾ ।
ತಸ್ಯ ಮಧ್ಯೇಽಸ್ತಿ ಹೃದಯಂ ಸನಾಳಂ ಪದ್ಮಕೋಶವತ್ ॥ ೨೪ ॥

ಅಧೋಮುಖಂ ಚ ತತ್ರಾಸ್ತಿ ಸೂಕ್ಷ್ಮಂ ಸುಷಿರಮುತ್ತಮಂ
ದಹರಾಕಾಶಮಿತ್ಯುಕ್ತಂ ತತ್ರ ಜೀವೋಽವತಿಷ್ಠತೇ ॥ ೨೫ ॥

ವಾಲಾಗ್ರಶತಭಾಗಸ್ಯ ಶತಧಾ ಕಲ್ಪಿತಸ್ಯ ಚ ।
ಭಾಗೋ ಜೀವಸ್ಸ ವಿಜ್ಞೇಯಃ ಸ ಚಾನಂತ್ಯಾಯ ಕಲ್ಪತೇ ॥ ೨೬ ॥

ಕದಂಬಕುಸುಮೋದ್ಭೂತಕೇಸರಾ ಇವ ಸರ್ವತಃ ।
ಪ್ರಸೃತಾ ಹೃದಯಾನ್ನಾಡ್ಯೋ ಯಾಭಿರ್ವ್ಯಾಪ್ತಂ ಶರೀರಕಂ ॥ ೨೭ ॥

---

ಹೇಳುವೆನು ಕೇಳು ದೇಹಾಂತರ್ವರ್ತಿಯಾದ ಮಾಂಸಪಿಂಡವು ಜೀವತಾದಾತ್ಮ್ಯಾಧ್ಯಾಸವನ್ನು ಪಡೆದು, ನಾನು ಮನುಷ್ಯನು, ನಾನು ಬ್ರಾಹ್ಮಣನು ಎಂಬ ಭೇದವನ್ನು ಕಲ್ಪಿಸಿಕೊಳ್ಳುತ್ತದೆ

೨೪–೨೬ ನಾಭಿಯಿಂದ ಹಿಡಿದು ಕಂಠಪರ್ಯಂತ, ಪ್ರಾಣವಾಯುವು ಸಂಚಾರಮಾಡುವ ಸ್ಥಳದ ಮಧ್ಯಭಾಗದಲ್ಲಿ, ನಳಿಕೆಯಿಂದ ಕೂಡಿದ ಕಮಲದ ಮೊಗ್ಗಿನಂತೆ ಹೃದಯಭಾಗವಿರುವುದು ಅದರಲ್ಲಿ ಅಧೋಮುಖವಾಗಿ ಸೂಕ್ಷ್ಮವಾದ ರಂಧ್ರಗಳಿರುವುವು ಅದನ್ನೇ ದಹರಾಕಾಶವೆಂದು ಶ್ರುತಿಗಳೂ, ಸ್ಮೃತಿಗಳೂ ಹೇಳುವುವು ಅಲ್ಲಿಯೇ ಜೀವನು ಸದಾ ನೆಲಸಿರುವನು ಜೀವನ ಗಾತ್ರವಾದರೋ ಒಂದು ತಲೆಗೂದಲಿನ ತುದಿಭಾಗವನ್ನು ನೂರುಭಾಗವಾಗಿ ಮಾಡಿದರೆ ಎಷ್ಟು ಸೂಕ್ಷ್ಮವಾಗಿರುವುದೋ, ಅದರ ಶತಾಂಶ ಪರಿಮಾಣವುಳ್ಳದ್ದೆಂದು ಹೇಳುವರು ಉಪಾಧಿಭೇದದಿಂದ ಅಷ್ಟು ಸೂಕ್ಷ್ಮವಾಗಿ ಕಂಡುಬಂದರೂ ಉಪಾಧಿಯು ಮುಕ್ತವಾದರೆ ಆಗ ಅದೇ ಅಪರಿಚ್ಛಿನ್ನವಾದ ಆತ್ಮನೆನಿಸುವುದು ಅಂತಹ ಜೀವನು ದಹರಾಕಾಶದಲ್ಲಿ ನೆಲಸಿರುವನು

೨೭–೩೦ ಅರಳಿದ ಕದಂಬ ಪುಷ್ಪದ ಕೇಸರಗಳಂತೆ ಹೃದಯದಿಂದ ಎಪ್ಪತ್ತೆರಡುಸಾವಿರ ನಾಡಿಗಳು ದೇಹದಲ್ಲೆಲ್ಲಾ ವ್ಯಾಪಿಸಿರುವುವು ಅದರಿಂದಲೇ ದೇಹವು

ಹಿತಂ ಬಲಂ ಪ್ರಯಚ್ಛಂತಿ ಯಸ್ಮಾತ್ತೇನ ಹಿತಾಃ ಸ್ಮೃತಾಃ ।
ದ್ವಿಸಪ್ತತಿಸಹಸ್ರೈಸ್ತಾಃ ಸಂಖ್ಯಾ ತಾ ಯೋಗವಿತ್ತಮೈಃ ॥ ೨೮ ॥

ಹೃದಯಾತ್ತಾಸ್ತು ನಿಷ್ಕ್ರಾಂತಾ ಯದಾರ್ಕಾದ್ರಶ್ಮಯಸ್ತದಾ ।
ಏಕೋತ್ತರಶತಂ ತಾಸು ಮುಖ್ಯಾ ವಿಷ್ವಗ್ವಿನಿರ್ಗತಾಃ ॥ ೨೯ ॥

ಪ್ರತೀಂದ್ರಿಯಂ ದಶ ದಶ ನಿರ್ಗತಾ ವಿಷಯೋನ್ಮುಖಾಃ ।
ನಾಡ್ಯಶ್ಚರ್ಮಾದಿಹೇತುತ್ವಾತ್ಸ್ವಪ್ನಾದಿಫಲಭುಕ್ತಯೇ ॥ ೩೦ ॥

ವಹಂತ್ಯಂಭೋ ಯಥಾ ನದ್ಯೋ ನಾಡ್ಯಃ ಕರ್ಮಫಲಂ ತಥಾ ।
ಅನಂತೈಕೋರ್ಧ್ವಗಾ ನಾಡೀ ಮೂರ್ಧಪರ್ಯಂತಮಂಜಸಾ ॥ ೩೧ ॥

---

ಪರಿಪೂರ್ಣವೆನಿಸುವುದು ಆ ನಾಡಿಗಳು ದೇಹಕ್ಕೆ ವಿಶೇಷವಾದ ಬಲವನ್ನು ಕೊಡುವು ವಾದುದರಿಂದ ಅವಕ್ಕೆ ಹಿತಗಳೆಂಬ ಹೆಸರಿದೆ ಹೀಗೆಂದು ಯೋಗಜ್ಞಾನವನ್ನರಿತವರು ಅಭಿಪ್ರಾಯಪಡುವರು ಹಾಗೆಯೇ ಹೃದಯದಿಂದ ಹೊರಟ ಮುಖ್ಯ ನೂರೊಂದು ನಾಡಿಗಳು, ಸೂರ್ಯನಿಂದ ಕಿರಣಗಳು ಹೊರಟು ಸರ್ವತ್ರ ವ್ಯಾಪಿಸಿದಂತೆ, ಹತ್ತು ಇಂದ್ರಿಯಗಳಲ್ಲಿಯೂ ಸೇರುವುವು ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು ಹೀಗೆ ಹತ್ತು ಇಂದ್ರಿಯಗಳಿಗೂ, ಒಂದೊಂದು ಇಂದ್ರಿಯಕ್ಕೆ ಹತ್ತುನಾಡಿಗಳಂತೆ ಹತ್ತು ಇಂದ್ರಿಯಗಳಿಗೂ ನೂರುನಾಡಿಗಳು, ಕಾಲುವೆಗಳು ನೀರನ್ನು ಹರಿಸುವಂತೆ, ಪೂರ್ವಾರ್ಜಿತದ ಕರ್ಮಫಲವನ್ನು ಹರಿಸುವುವು ಅಂದರೆ ಆ ನಾಡಿಗಳು ಇಂದ್ರಿಯಗಳ ಮೂಲಕ ವಿಷಯಸುಖದಲ್ಲಿ ಅಭಿಲಾಷೆ ಹುಟ್ಟುವಂತೆ ಮಾಡುವುವು

೩೧–೩೨ ಅದರಲ್ಲಿ ಒಂದು ನಾಡಿಯು ಹೃದಯದಿಂದ ಊರ್ಧ್ವಮುಖವಾಗಿ ಹೊರಟು ಮೂರ್ಧಪರ್ಯಂತವಾಗಿ ಹೋಗಿರುವುದು ಅದಕ್ಕೇ ಸುಷುಮ್ನಾ ನಾಡಿಯೆಂದು ಹೆಸರು ಆ ನಾಡಿಯಲ್ಲಿ ಜೀವನು ಸಂಚರಿಸುವುದಾದರೆ ಆಗ ಜೀವನಿಗೆ

**ಸುಷುಮ್ನೇತಿ ಸಮಾದಿಷ್ಟಾ ತಯಾ ಗಚ್ಛನ್ವಿಮುಚ್ಯತೇ ।**
**ತಯೋಪಹಿತಚೈತನ್ಯಂ ಜೀವಾತ್ಮಾನಂ ವಿದುರ್ಬುಧಾಃ ॥ ೩೨ ॥**

**ಯಥಾ ರಾಹುರದೃಶ್ಯೋಽಪಿ ದೃಶ್ಯತೇ ಚಂದ್ರಮಂಡಲೇ ।**
**ತದ್ವತ್ಸರ್ವಗತೋಽಪ್ಯಾತ್ಮಾ ಲಿಂಗದೇಹೇಽಭಿದೃಶ್ಯತೇ ॥ ೩೩ ॥**

**ದೃಶ್ಯಮಾನೇ ಯಥಾ ಕುಂಭೇ ಘಟಾಕಾಶೋಽಭಿದೃಶ್ಯತೇ ।**
**ತದ್ವತ್ಸರ್ವಗತೋಽಪ್ಯಾತ್ಮಾ ಲಿಂಗದೇಹೇಽಭಿದೃಶ್ಯತೇ ॥ ೩೪ ॥**

**ನಿಶ್ಚಲಃ ಪರಿಪೂರ್ಣೋಽಪಿ ಗಚ್ಛತೀತ್ಯುಪಚರ್ಯತೇ ।**
**ಜಾಗ್ರತ್ಕಾಲೇ ಯಥಾ ಜ್ಞೇಯಮಭಿವ್ಯಕ್ತವಿಶೇಷಧೀಃ ॥ ೩೫ ॥**

ಬ್ರಹ್ಮಜ್ಞಾನವುಂಟಾಗಿ ಬ್ರಹ್ಮಸ್ವರೂಪವ ಪಡೆಯುವುದೆಂದು ಯೋಗಿಗಳು ಹೇಳುವರು

೩೩-೩೪ ಅಂತರಿಕ್ಷದಲ್ಲಿ ರಾಹುವೆಂಬ ಛಾಯಾಗ್ರಹವು ಸರ್ವವ್ಯಾಪಿಯಾಗಿದ್ದರೂ ಯಾರ ದೃಷ್ಟಿಗೂ ಗೋಚರಿಸದೆ ಇದ್ದು, ಚಂದ್ರಗ್ರಹಣ ಕಾಲದಲ್ಲಿ ಒಂದು ಆಕಾರದಿಂದ ತೋರಿಬರುವಂತೆ, ಸರ್ವಗತನಾಗಿ ಯಾರಿಗೂ ಗೋಚರನಾಗದ ಆತ್ಮನು ಲಿಂಗದೇಹದಲ್ಲಿ ಉಪಾಧಿವಶದಿಂದ ಜೀವನಾಗಿ ಕಂಡುಬರುವನು ಮತ್ತು ಸರ್ವವ್ಯಾಪಿಯಾದ ಆಕಾಶವು ಮಡಕೆಯಲ್ಲಿ ಮಡಕೆಯ ಆಕಾರದ ಆಕಾಶ (ಅವಕಾಶ)ದಂತೆ ಹೇಗೆ ಪ್ರತ್ಯೇಕವಾಗಿ ತೋರಿಬರುವುದೋ, ಅದರಂತೆ ಅಪರಿಚ್ಛಿನ್ನನಾದ ಆತ್ಮನು ಲಿಂಗದೇಹಾಂತರ್ವರ್ತಿಯಾಗಿ ಒಂದು ಆಕಾರ ಮತ್ತು ಒಂದು ಸ್ಥಳದಲ್ಲಿ ನಿಂತಿರುವಂತೆ ತೋರುವನು

೩೫-೩೬ ಆತ್ಮನು ಸ್ವಭಾವವಾಗಿ ನಿಶ್ಚಲನೂ ಪರಿಪೂರ್ಣನೂ ಆದರೂ ಲಿಂಗದೇಹದಲ್ಲಿ ಸೇರಿರುವುದರಿಂದ ಲಿಂಗದೇಹವು ಹೋದೆಡೆಯೆಲ್ಲೆಲ್ಲಾ ಆತ್ಮನೂ ಹೋಗುವನು ಎಂಬ ವ್ಯವಹಾರವು ಮಾತ್ರ ನಡೆಯುತ್ತಿರುವುದು ಸರ್ವವ್ಯಾಪಿಯಾದ ಆಕಾಶವು ಘಟಾಕಾಶವೆಂಬ ವ್ಯವಹಾರವನ್ನು ಪ್ರತ್ಯೇಕವಾಗಿ ಪಡೆದು,

ವ್ಯಾಪ್ನೋತಿ ನಿಷ್ಕ್ರಿಯಸ್ಸರ್ವಾನ್ ಭಾನುರ್ದಶ ದಿಶೋ ಯಥಾ ।
ನಾಡೀಭಿರ್ವೃತ್ತಿಯೋ ಯಾಂತಿ ಲಿಂಗದೇಹಸಮುದ್ಭವಾಃ || ೩೬ ||

ತತ್ತತ್ಕರ್ಮಾನುಸಾರೇಣ ಜಾಗ್ರದ್ಭೋಗೋಪಲಬ್ಧಯೇ ।
ಇದಂ ಲಿಂಗಶರೀರಾಖ್ಯಮಾಮೋಕ್ಷಾನ್ನ ವಿನಶ್ಯತಿ || ೩೭ ||

ಆತ್ಮಜ್ಞಾನೇನ ನಷ್ಟೇಽಸ್ಮಿನ್ ಸಾವಿದ್ಯೇ ಸಶರೀರಕೇ ।
ಆತ್ಮಸ್ವರೂಪಾವಸ್ಥಾನಂ ಮುಕ್ತಿರಿತ್ಯಭಿಧೀಯತೇ || ೩೮ ||

ಉತ್ಪಾದಿತೇ ಘಟೇ ಯದ್ವದ್ಘಟಾಕಾಶತ್ವಮೃಚ್ಛತಿ ।
ಘಟೇ ನಷ್ಟೇ ಯಥಾಕಾಶಃ ಸ್ವರೂಪೇಣಾವತಿಷ್ಠತೇ || ೩೯ ||

ಘಟವು ಹೋದೆಡೆಯಲ್ಲೆಲ್ಲಾ ಆ ಘಟಾಕಾಶವೂ ಹೋಗುವಂತೆ, ಆತ್ಮನು ಚಲಿಸು ತ್ತಾನೆ ಎಂಬ ವ್ಯವಹಾರಕ್ಕೆ ಆತ್ಮನು ದೊರಕುವನು ಹಾಗೆಯೇ ಆತ್ಮನೂ ನಿಷ್ಕ್ರಿಯನು ಅಂದರೆ ಅವನು ಯಾವ ಕೆಲಸವನ್ನೂ ಮಾಡಲಾರನು ಆದರೂ ಜಾಗ್ರದವಸ್ಥೆಯಲ್ಲಿ, ಸೂರ್ಯನು ಒಬ್ಬನಾದರೂ ತನ್ನ ಕಿರಣಗಳ ಮೂಲಕ ಹತ್ತು ದಿಕ್ಕುಗಳಲ್ಲಿಯೂ ಕಾರ್ಯಭಾರವನ್ನು ನಡೆಸುವಂತೆ, ಲಿಂಗದೇಹ ಸಮುತ್ಥಿತವಾದ ನಾಡೀ ವೃತ್ತಿಗಳಿಂದ ಆತ್ಮನು ಸಕಲ ಪದಾರ್ಥಗಳ ಗುಂಪಿನಲ್ಲಿಯೂ, ಸವಿಶೇಷ ಬುದ್ಧಿಯಿಂದ ಪ್ರಕಾಶಿಸಿ ಸಕಲ ವಿಷಯಗಳಲ್ಲಿಯೂ ವ್ಯಾಪಿಸುವನು

೩೭–೩೮ ಲಿಂಗದೇಹವು ಮಾತ್ರ ಸ್ಥೂಲದೇಹದಂತೆ ಆಗಾಗ ನಾಶ ಹೊಂದುವುದಿಲ್ಲ ಲಿಂಗದೇಹ ನಿವೃತ್ತಿಯೇ ಮೋಕ್ಷವೆನಿಸುವುದು ಆತ್ಮನಿಗೆ ಒಡನೆಯೇ ಅವಿದ್ಯಾಸಂಬಂಧವಾದ ಲಿಂಗದೇಹವು ನಿವೃತ್ತಿಯಾಗಿ ಆತ್ಮಸ್ವರೂಪಾ ವಸ್ಥೆಯು ಲಭಿಸುವುದು ಅದನ್ನೇ ನಿಜವಾದ ಮುಕ್ತಿಯೆನ್ನುವರು

೩೯–೪೧ ಕಾಲವಶದಿಂದ ಒಂದು ಮಡಕೆಯು ಉತ್ಪನ್ನವಾದರೆ ವಿಶಾಲವಾದ ಆಕಾಶವು ಈ ಘಟದೊಳಗೆ ಅಡಗಿರುವಂತೆ ತೋರುವುದು ಅದೇ ಘಟವು ಒಡೆದು ಹೋದರೆ ಅದರೊಳಗಿನ ಆಕಾಶವು ಮಹಾಕಾಶವಾಗುವಂತೆ, ಲಿಂಗದೇಹವಿರುವ

ಜಾಗ್ರತ್ಕರ್ಮಕ್ಷಯವಶಾತ್ಸ್ವಪ್ನಭೋಗ ಉಪಸ್ಥಿತೇ ।
ಬೋಧಾವಸ್ಥಾಂ ತಿರೋಧಾಯ ದೇಹಾದ್ಯಾತ್ರಯಲಕ್ಷಣಾಂ || ೪೦ ||

ಕರ್ಮೋದ್ಭಾವಿತಸಂಸ್ಕಾರಸ್ತತ್ರ ಸ್ವಪ್ನರಿರಂಸಯಾ ।
ಅವಸ್ಥಾಂ ಚ ಪ್ರಯಾತ್ಯನ್ಯಾಂ ಮಾಯಾವೀವಾತ್ಮಮಾಯಯಾ || ೪೧ ||

ಘಟಾದಿವಿಷಯಾನ್ ಸರ್ವಾನ್ ಬುದ್ಧ್ಯಾದಿಕರಣಾನಿ ಚ ।
ಭೂತಾನಿ ಕರ್ಮವಶತೋ ವಾಸನಾಮಾತ್ರಸಂಸ್ಥಿತಾನ್ || ೪೨ ||

---

ವರೆಗೂ ಆತ್ಮನು ಅದರಲ್ಲಿ ಪ್ರತಿಫಲಿಸಿ ಜೀವನೆನಿಸಿಕೊಂಡು ಸುಖದುಃಖಾದ್ಯನುಭವಗಳಿಗೆ ಕಾರಣನಾಗಿ ತೋರುವನು ಆತ್ಮಜ್ಞಾನವಶದಿಂದ ಲಿಂಗದೇಹವು ನಷ್ಟವಾದೊಡನೆಯೇ, ಅದರಲ್ಲಿ ಪ್ರತಿಫಲಿಸುವ ಜೀವನೂ ಸಹ ಸಚ್ಚಿದಾನಂದರೂಪದಲ್ಲಿ ನಿಲ್ಲುವನು ಇನ್ನು ಜೀವನು ಜಾಗ್ರದವಸ್ಥೆಯನ್ನು ತೊರೆದು ಸ್ವಪ್ನಾವಸ್ಥೆಯನ್ನು ಹೊಂದಬೇಕಾದರೆ, ಜಾಗ್ರದ್ಭೋಗಪ್ರದವಾದ ಕರ್ಮವೆಲ್ಲಾ ನಾಶವಾಗುವುದು. ಆದರಿಂದ ಆ ಫಲಕ್ಕೆ ಪ್ರತಿಬಂಧಕವೊದಗಿ ಸ್ವಪ್ನ ಭೋಗಪ್ರದವಾದ ಕರ್ಮವು ಉದ್ಬುದ್ಧವಾಗುವುದು ಆಗ ದೇಹಾದಿಸಂಶ್ರಯರೂಪವಾದ ಮನೆ, ಮರ, ಶರೀರ ಇವುಗಳ ತಿಳಿವಳಿಕೆಗೆ ಮರೆಯುಂಟಾಗುವುದು ಆಗ ನವಕರ್ಮದಿಂದ ಉಂಟಾದ ಸಂಸ್ಕಾರ ಬಲದಿಂದ ಜೀವನು ಸ್ವಪ್ನಭೋಗವನ್ನು ಅನುಭವಿಸಲಿಚ್ಛಿಸುವನು ಅದಕ್ಕಾಗಿ ಮಾಯಾವಿಯು ತನ್ನ ಮಾಯಾಬಲದಿಂದ ಬೇರೆ ಆಕಾರವನ್ನು ಪಡೆದು ರಂಜಿಸುವಂತೆ, ಜೀವನು ಸ್ವಪ್ನಾವಸ್ಥೆಯೆಂಬ ಅವಸ್ಥಾಂತರವನ್ನು ಪಡೆದು ಸ್ವಾಭಾವಿಕವಾದ ಭೋಗವನ್ನು ಅನುಭವಿಸುವನು

೪೨-೪೩ ಅನಾದಿವಿದ್ಯಾವಾಸನೆಯಿಂದ ಆತ್ಮನಿಗೆ ಅಂತಃಕರಣೋಪಹಿತ ಚೈತನ್ಯದಲ್ಲಿ ಆರೋಪಣೆಯೊದಗಿದಾಗ, ಘಟಾದಿ ಸಕಲ ವಿಷಯಗಳನ್ನೂ, ಮನೋಬುದ್ಧ್ಯಾದಿ ಸಕಲ ಕರಣಗಳನ್ನೂ, ಪಂಚಭೂತವಿಕಾರಗಳಾದ ಸಮಸ್ತ ಭೂತಗಳನ್ನೂ ತಾನು ನೋಡುತ್ತಿರುವನು ಹೀಗೆ ಸ್ವಯಂಜ್ಯೋತಿಸ್ವರೂಪನಾದ ಪರಮಾತ್ಮನು ಸಕಲರ ಅಂತಃಕರಣದಲ್ಲಿಯೂ ವಾಸಮಾಡುವವನಾದ್ದರಿಂದಲೇ ಅವನಿಗೆ

ಏತಾನ್ ಪಶ್ಯನ್ ಸ್ವಯಂಜ್ಯೋತಿಃ ಸಾಕ್ಷ್ಯಾತ್ಮಾ ವ್ಯವತಿಷ್ಠತೇ ।
ಅತ್ರಾಂತಃಕರಣಾದೀನಾಂ ವಾಸನಾದ್ವಾಸನಾತ್ಮತಾ ॥ ೪೩ ॥

ವಾಸನಾಮಾತ್ರಸಾಕ್ಷಿತ್ವಂ ತೇನ ತತ್ರ ಪರಾತ್ಮನಃ ।
ವಾಸನಾಭಿಃ ಪ್ರಪಂಚೋಽತ್ರ ದೃಶ್ಯತೇ ಕರ್ಮಚೋದಿತಃ । ॥ ೪೪ ॥

ಜಾಗ್ರದ್ಭೂಮೌ ಯಥಾ ತದ್ವತ್ಕರ್ತೃಕರ್ಮಕ್ರಿಯಾತ್ಮಕಃ ।
ನಿಶ್ಶೇಷಬುದ್ಧಿಸ್ಸಾಕ್ಷ್ಯಾತ್ಮಾ ಸ್ವಯಮೇವ ಪ್ರಕಾಶತೇ ॥ ೪೫ ॥

ವಾಸನಾಮಾತ್ರಸಾಕ್ಷಿತ್ವಂ ಸಾಕ್ಷಿಣಸ್ಸ್ವಾಪ ಉಚ್ಯತೇ ।
ಭೂತಜನ್ಮನಿ ಯದ್ಭೂತಂ ಕರ್ಮ ತದ್ವಾಸನಾವಶಾತ್ ॥ ೪೬ ॥

---

ವಾಸನಾತ್ಮಕತ್ವವು ಸಿದ್ಧಿಸಿದಂತಾಯಿತು ವಾಸನಾಮಾತ್ರ ಸಾಕ್ಷಿಯಾದುದರಿಂದಲೇ ಜೀವನಿಗೆ ಕರ್ಮಚೋದಿತವಾಗಿ ಪ್ರಾಪಂಚಿಕ ಕರ್ತೃತ್ವ, ಕರ್ಮತ್ವಾದಿಗಳು ಭಾಸವಾಗುವುವು ಜಾಗ್ರದವಸ್ಥೆಯಲ್ಲಿ ಕರ್ತೃ, ಕರ್ಮ, ಕ್ರಿಯಾತ್ಮಕತ್ವವು ಹೇಗೆ ಅನುಭವಸಿದ್ಧವಾಗುವುದೋ, ಹಾಗೆಯೇ ಸಕಲ ಬೋಧವಿಷಯಕಗಳಾದ ಬುದ್ಧಿಯಲ್ಲಿ ಸಾಕ್ಷಿಯಾಗಿದ್ದು ಪ್ರಕಾಶಿಸುವುದೇ ಜೀವನಿಗೆ ಸ್ವಪ್ನಾವಸ್ಥೆಯೆನಿಸುವುದು ಒಟ್ಟಿನಲ್ಲಿ ಜಾಗ್ರದವಸ್ಥೆಯಲ್ಲಿ ವ್ಯಾವಹಾರಿಕಪ್ರಪಂಚವೂ, ಸ್ವಪ್ನಾವಸ್ಥೆಯಲ್ಲಿ ಪ್ರಾತಿಭಾಸಿಕವಾದ ಪ್ರಪಂಚವೂ ತೋರಿಬರುವುದು

೪೪–೪೬ ವಾಸನಾಮಾತ್ರಸಾಕ್ಷಿಯೆನಿಸಿದ ಆತ್ಮನಿಗೆ ಸ್ವಪ್ನಾವಸ್ಥೆಯಲ್ಲಿ ಹಿಂದಿನ ಜನ್ಮಗಳಲ್ಲಿ ನಾನು ಮಾಡಿದ ಕರ್ಮಗಳು ವಾಸನಾವಶದಿಂದ ಸ್ವಪ್ನರೂಪವಾಗಿ ತೋರಿಬರುವುವು ಸಂಸ್ಕಾರಬಲದಿಂದ ಚಿಕ್ಕವಯಸ್ಸಿನಲ್ಲಿಯೇ ವಯಸ್ಕರಾದವರು ಮಾಡುವ ಯುದ್ಧಾದಿಮಹಾಕ್ರಿಯೆಗಳನ್ನು ಜೀವನು ಕಾಣುವನು. ಯೌವನಕಾಲದಲ್ಲಂತೂ ಈ ವಿಧವಾದ ಸಂಸ್ಕಾರದಿಂದಲೂ ತನ್ನ ಇಂದ್ರಿಯಗಳ ಕಾರ್ಕಶ್ಯದಿಂದಲೂ, ನಾನಾವಿಧವಾದ ಸ್ವಪ್ನಗಳನ್ನು ಕಾಣುವನು ಅವು ಕೇವಲ ಮಿಥ್ಯಾಭೂತಗಳಾದರೂ ಸಂಸ್ಕಾರಬಲದಿಂದ ತೋರುವ ಸನ್ನಿವೇಶಗಳೆಂದೇ ಭಾವಿಸಬೇಕು

ಇಯಾಸುಃ ಪರಲೋಕಂ ತು ಕರ್ಮವಿದ್ಯಾದಿಸಂಭೃತಂ ।
ಭಾವಿನೋ ಜನ್ಮನೋ ರೂಪಂ ಸ್ವಪ್ನ ಆತ್ಮಾ ಪ್ರಪಶ್ಯತಿ ॥ ೪೭ ।

ನೇದಿಯಸ್ತ್ವಾದ್ವಯಸ್ಯಾದ್ಯೇ ಸ್ವಪ್ನಂ ಪ್ರಾಯಃ ಪ್ರಪಶ್ಯತಿ ।
ಮಧ್ಯೇ ವಯಸಿ ಕಾರ್ಕಶ್ಯಾತ್ಕರಣಾನಾಮಿಹಾರ್ದಿತಃ ॥ ೪೮ ॥

ಪ್ರಾಯೇಣ ವೀಕ್ಷತೇ ಸ್ವಪ್ನಂ ವಾಸನಾಕರ್ಮಣೋರ್ವಶಾತ್
ಯದ್ವತ್ಪ್ರಪತನಾಚ್ಛ್ಯೇನಃ ಶ್ರಾಂತೋ ಗಗನಮಂಡಲೇ ॥ ೪೯ ॥

ಆಕುಂಚ್ಯ ಪಕ್ಷೌ ಯತತೇ ನೀಡೇ ನಿಲಯನಾಯ ನೀಃ ।
ಏವಂ ಜಾಗ್ರತ್ಸ್ವಪ್ನಭೂಮೌ ಶ್ರಾಂತ ಆತ್ಮಾಭಿಸಂಚರನ್ ॥ ೫೦ ॥

ಆಪೀತಕರಣಗ್ರಾಮಃ ಕಾರಣೇನೈತಿ ಚೈಕತಾಂ ।
ನಾಡೀಮಾರ್ಗೈರಿಂದ್ರಿಯಾಣಾಮಾಕೃಷ್ಯಾದಾಯ ವಾಸನಾಃ ॥ ೫೧ ॥

---

೪೭—೪೯ ಭೂಮಿಯಲ್ಲಿದ್ದು, ಕರ್ಮವಶದಿಂದಲೂ, ವಿದ್ಯಾರ್ಜನೆಯಿಂದಲೂ ಅವಿದ್ಯಾಮಹಿಮೆಗೆ ಅಧೀನನಾಗದೆ ಪರಲೋಕವನ್ನಾಗಲಿ, ಮತ್ತೊಂದು ಜನ್ಮವನ್ನಾಗಲಿ ಪಡೆಯಲಪೇಕ್ಷೆಯುಳ್ಳವನಿಗೆ ಅದೇವಿಧವಾದ ಸ್ವಪ್ನವು ತೋರಿಬರುವುದು. ಸ್ವಪ್ನಕ್ಕೆ ಮುಂದಿನಜನ್ಮವೃತ್ತಾಂತವನ್ನು ಸೂಚಿಸುವ ಶಕ್ತಿಯೂ ಉಂಟೆಂದು ಶ್ರುತಿಯೂ ಒಪ್ಪಿಕೊಂಡಿರುವುದು

೫೦—೫೨. ಈಗ ಜೀವನಿಗೆ ಜಾಗ್ರತ್ಸ್ವಪ್ನಾವಸ್ಥೆಗಳನ್ನು ವಿವರಿಸಿ ಹೇಳಿ ಇನ್ನು ಮೂರನೆಯದಾದ ಸುಷುಪ್ತ್ಯವಸ್ಥೆಯ ಸ್ವರೂಪವನ್ನು ಶ್ರೀರಾಮನಿಗೆ ಮಹೇಶ್ವರನು ತಿಳಿಸುವನು —ಗಿಡುಗಪಕ್ಷಿಯು ತನ್ನ ರೆಕ್ಕೆಗಳಿಂದ ಅಂತರಿಕ್ಷದಲ್ಲೆಲ್ಲಾ ಹಾರಿ ಹಾರಿ ಸೋತು ಬಳಲಿ, ಕೊನೆಗೆ ತನ್ನ ರೆಕ್ಕೆಗಳನ್ನು ಮುದರಿಕೊಂಡು ಗೂಡಿನಲ್ಲಿ ಕುಳಿತುಕೊಳ್ಳಲು ಅಪೇಕ್ಷಿಸುವಂತೆ, ಜೀವನು ಜಾಗ್ರತ್ಸ್ವಪ್ನಾವಸ್ಥೆಗಳಿಂದ ಸುಖವನ್ನು ಪಡೆಯದೆ ಶ್ರಾಂತನಾಗಿ, ಸುಖಮಯವಾದ ಒಂದು ಪ್ರದೇಶವನ್ನು ಹುಡುಕುವನು ಆಗ ನಾಡಿಮಾರ್ಗಗಳಲ್ಲಿ ಸಮಸ್ತ ಇಂದ್ರಿಯಗಳೊಡಗೂಡಿದ್ದ

**ಸರ್ವಂ ಗ್ರಸಿತ್ವಾ ಕಾರ್ಯಂ ಚ ವಿಜ್ಞಾನಾತ್ಮಾ ಪ್ರಲೀಯತೇ ।**
**ಈಶ್ವರಾಖ್ಯೇಽವ್ಯಾಕೃತೇಽಥ ತದಾ ಸುಖಮಯೋ ಭವೇತ್ ॥ ೫೨ ॥**

**ಕೃತ್ಸ್ನಪ್ರಪಂಚವಿಷಯಸ್ತಥಾ ಭವತಿ ಚಾತ್ಮನಃ ।**
**ಯೋಷಿತಃ ಕಾಮ್ಯಮಾನಾಯಾಃ ಸಂಭೋಗಾಂತೇ ಯಥಾ ಸುಖಂ ॥ ೫೩ ॥**

**ಸ ಆನಂದಮಯೋಽಬಾಹ್ಯೋಽನಂತರಃ ಕೇವಲಸ್ತಥಾ ।**
**ಪ್ರಾಜ್ಞಾತ್ಮಾನಂ ಸಮಾಸಾದ್ಯ ವಿಜ್ಞಾನಾತ್ಮಾ ತಥೈವ ಸಃ ॥ ೫೪ ॥**

---

ವಾಸನೆಗಳನ್ನು ಅಂದರೆ ಇಂದ್ರಿಯ ಗ್ರಾಮಗಳನ್ನು ತನ್ನಲ್ಲಿ ಅಡಗಿಸಿಕೊಂಡು ಕಾರಣಭೂತನಾದ ಈಶ್ವರನೊಡನೆ ಏಕತ್ವವನ್ನು ಪಡೆಯುವನು (ಇಲ್ಲಿ ಮೋಕ್ಷ ಪರ್ಯಂತವಾಗಿ ಜೀವಬ್ರಹ್ಮರಿಗೆ ಔಪಾಧಿಕವಾದ ಭೇದ ಇದ್ದೇ ಇರತ್ತದೆಂಬುದನ್ನು ಮರೆಯಬಾರದು) ಅಂದರೆ ನಾಡೀಮಾರ್ಗದಲ್ಲಿ ಸಂಸಾರ ವಶದಿಂದ ಆಗುವ ಇಂದ್ರಿಯ ವ್ಯಾಪಾರಗಳನ್ನು ಅಡಗಿಸಿಕೊಂಡು ಜೀವನು, ಅವಿದ್ಯಾಕಾರ್ಯವೆನಿಸಿದ ಜಾಗ್ರತ್ಸ್ವಪ್ನಕಾರ್ಯಗಳನ್ನು ನುಂಗಿಕೊಂಡು, ಮಾಯೋಪಹಿತಚೈತನ್ಯರೂಪನಾದ ಅವ್ಯಾಕೃತ ಈಶ್ವರನಲ್ಲಿ ಅಡಗಿಹೋಗುತ್ತಾನೆ ಆಗ ದುಃಖಾದಿಗಳಿಲ್ಲದೆ ಜೀವನಿಗೆ ಕೇವಲ ಸುಖಾನುಭವ ಮಾತ್ರವಿರುತ್ತದೆ

೫೩–೫೪ ಅದೇ ಸುಷುಪ್ತ್ಯವಸ್ಥೆ ಆಗ ಸಕಲ ಪ್ರಪಂಚವೂ ಆತ್ಮನಲ್ಲಿ ಲಯಹೊಂದುವುದು ಆದರೆ ಆ ಸುಖವು ಶಾಶ್ವತವಾದುದಲ್ಲ, ಸ್ತ್ರೀ ಸಂಭೋಗ ಕಾಲದಲ್ಲಿ ಇತರ ವಿಷಯ ಸುಖಕ್ಕಿಂತಲೂ ಹೆಚ್ಚಿನ ಸಂತೋಷವಾದರೂ, ಅದು ಸಂಭೋಗಕಾಲಪರ್ಯಂತ ಮಾತ್ರವೇ ಇರುವುದು ಅದರಂತೆ ಸುಷುಪ್ತಿ ಕಾಲದ ಸುಖವು ಇತರ ಜಾಗ್ರತ್ಸ್ವಪ್ನಕಾಲಗಳ ಸುಖಕ್ಕಿಂತ ಹೆಚ್ಚಿನದಾದರೂ ಶಾಶ್ವತ ವಾದುದಲ್ಲ ಆ ಸುಖಾನುಭವ ಕಾಲದಲ್ಲಿ ಜೀವನು ಅಬಾಹ್ಯನಾಗಿರುವನು, ಅಂದರೆ ವಿಷಯಸಂಬಂಧದಿಂದ ಉಂಟಾಗುವ ಯಾವ ಜ್ಞಾನಕ್ಕೂ ಆಶ್ರಯನಾಗಿರುವುದಿಲ್ಲ. ಮೋಕ್ಷಾವಸ್ಥೆಯಲ್ಲಿರುವಂತೆ ಅಹಂಕಾರ ವೃತ್ತಿರಹಿತನಾಗಿಯೂ ಇರುವುದಿಲ್ಲ

**ವಿಜ್ಞಾನಾತ್ಮಾ ಕಾರಣಾತ್ಮಾ ತಥಾ ತಿಷ್ಠಂಸ್ತಥಾಪಿ ಸಃ ।**
**ಅವಿದ್ಯಾಸೂಕ್ಷ್ಮವೃತ್ತ್ಯಾ ತು ಭವತ್ಯೇವ ಸುಖಂ ಯಥಾ ॥ ೫೫ ॥**

**ಅಜ್ಞಾನಮಪಿ ಸಾಕ್ಷ್ಯಾದಿವೃತ್ತಿಭಿಶ್ಚಾನುಭೂಯತೇ ।**
**ತಥಾಹಂ ಸುಖಮಸ್ವಾಪ್ಸಂ ನೈವ ಕಿಂಚಿದವೇದಿಷಂ ॥ ೫೬ ॥**

ಅದನ್ನೇ ಶ್ರೀ ಶಂಕರ ಭಗವತ್ಪಾದರು "ಸುಪ್ತಿಗತಃ ಸುಖಲೇಶೈರಭಿಮನುತೇ ಯಸ್ಸುಖೀ ಭವಾಮೀತಿ । ಆನಂದಕೋಶನಾಮಾ ಸೋಹಂಕಾರಃ ಕಥಂ ಭವೇದಾತ್ಮಾ" ಎಂದು ಹೇಳಿರುವರು ಅಂತಹ ಅಹಂಕಾರ ವೃತ್ತಿವಿಶಿಷ್ಟನಾದ ಸುಷುಪ್ತಿಗತನಾದ ಜೀವನು ವಿಜ್ಞಾನಾತ್ಮನೆನಿಸಿಕೊಳ್ಳುವನು ಆ ವಿಜ್ಞಾನಾತ್ಮನು ಸುಷುಪ್ತ್ಯವಸ್ಥೆಯಲ್ಲಿ ಪ್ರಾಜ್ಞಾತ್ಮನೊಡನೆ ಲೀನನಾಗುವನು ಅಂದರೆ ಜಾಗ್ರದಾದ್ಯವಸ್ಥೆಗಳಲ್ಲಿ ತೋರುವಷ್ಟು ಭಿನ್ನನಾಗಿರುವುದಿಲ್ಲ ದುಃಖರಾಹಿತ್ಯವೆಂಬ ಸಾಮ್ಯದಿಂದ ಅದೇ ವಿಜ್ಞಾನಾತ್ಮನೆನಿಸಿದ ಜೀವನು, ಸಕಲಲೋಕ ಕಾರಣಾತ್ಮನಾದ ಈಶ್ವರನೊಡನೆ ಏಕತ್ವವನ್ನು ಪಡೆಯುವನು

೫೫–೫೬ ಆದರೆ ಸುಷುಪ್ತಿಕಾಲದಲ್ಲಿ ಸಂಪೂರ್ಣವಾಗಿ ಅವಿದ್ಯಾನಿವೃತ್ತಿಯಿರುವುದಿಲ್ಲ ಅವಿದ್ಯಾವೃತ್ತಿಯು ಸೂಕ್ಷ್ಮರೂಪದಿಂದಿರುವುದರಿಂದ ದುಃಖಮಿಶ್ರವಲ್ಲದ ಸುಖವು ಅನುಭೂತವಾಗುವುದು ಸಾಕ್ಷೀರೂಪದಲ್ಲಿರುವ ಅವಿದ್ಯಾವೃತ್ತಿರೂಪದಿಂದ ಒದಗುವ ಅಜ್ಞಾನವೂ ಸುಷುಪ್ತಿಕಾಲದಲ್ಲಿ ಇದ್ದೇ ಇರುವುದು ಆದ್ದರಿಂದ ನಿದ್ರಾಸುಖದಿಂದ ಎಚ್ಚೆತ್ತಮೇಲೆ ಜೀವನಿಗೆ "ನಾನು ಸುಖವಾಗಿ ನಿದ್ದೆ ಮಾಡಿದೆನು ಆಗ ನನಗೇನೂ ತೋರಲಿಲ್ಲ" ಎಂಬ ಪ್ರತ್ಯಭಿಜ್ಞೆಯೊದಗುವುದು ಸುಷುಪ್ತ್ಯನಂತರದಲ್ಲಿ ಸಂಸ್ಕಾರಮಾತ್ರ ಶೇಷವಾಗಿದ್ದ ಅಹಂಕಾರಾದಿ ವಿಕ್ಷೇಪಗಳು ಮತ್ತೆ ಉದ್ಬುದ್ಧವಾಗಿ ಎಂದಿನಂತೆ ವ್ಯವಹಾರ ಮಾರ್ಗವು ಮುಂದುವರಿಯುವುದು

ಇತ್ಯೇವಂ ಪ್ರತ್ಯಭಿಜ್ಞಾಪಿ ಪಶ್ಚಾತ್ತಸ್ಯೋಪಜಾಯತೇ ।
ಜಾಗ್ರತ್ಸ್ವಪ್ನಸುಷುಪ್ತ್ಯಾಖ್ಯಮೇವೇಹಾಮುತ್ರಲೋಕಯೋಃ || ೫೭ ||

ಪಶ್ಚಾತ್ಕರ್ಮವಶಾದೇವ ವಿಸ್ಫುಲಿಂಗಾ ಇವಾನಲಾತ್ ।
ಜಾಯಂತೇ ಕಾರಣಾದೇವ ಮನೋಬುದ್ಧ್ಯಾದಿಕಾನಿ ತು || ೫೮ ||

ಪಯಃಪೂರ್ಣೋ ಘಟೋ ಯದ್ವನ್ನಿಮಗ್ನಸ್ಸಲಿಲಾಶಯೇ ।
ತೈರೇವೋದ್ಧೃತ ಆಯಾತಿ ವಿಜ್ಞಾನಾತ್ಮಾ ತದೈಕ್ಯಭಾಕ್ || ೫೯ ||

ವಿಜ್ಞಾನಾತ್ಮಾ ಕಾರಣಾತ್ಮಾ ತಥಾ ತಿಷ್ಠಂಸ್ತಥಾಪಿ ಸಃ ।
ದೃಶ್ಯತೇ ಸತ್ಸು ತೇಷ್ವೇವ ನಷ್ಟೇಷ್ವಾಯಾತ್ಯದೃಶ್ಯತಾಂ || ೬೦ ||

೫೭–೫೯ ಹೀಗೆ ಇಹಪರಗಳಲ್ಲಿಯೂ ಅಂದರೆ ಭೂಲೋಕ ಮತ್ತು ದೇವ ಲೋಕಗಳಲ್ಲಿ ವಾಸಿಸುವರೆಲ್ಲರಿಗೂ, ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಮೂರು ಅವಸ್ಥೆಗಳು ಎಂದಿಗೂ ತಪ್ಪುವುದಿಲ್ಲ ಸುಷುಪ್ತ್ಯವಸ್ಥೆಯಲ್ಲಿ ಸೂಕ್ಷ್ಮರೂಪದಿಂದ ಮನೋಬುದ್ಧ್ಯಹಂಕಾರಗಳು, ಅಗ್ನಿಯಿಂದ ಕಿಡಿಗಳು ಹುಟ್ಟುವಂತೆ ಸಂಸ್ಕಾರವಶ ದಿಂದ ಮತ್ತೆ ಉದ್ಬುದ್ಧವಾಗುವುವು ಅಂತಃಕರಣವೃತ್ತಿಗಳಿಂದ ಹುಟ್ಟುವ ಅವಿದ್ಯಾ ಕಾರ್ಯವಿಶಿಷ್ಟನಾದ ಆತ್ಮನು ಪ್ರಾಜ್ಞಾತ್ಮನಲ್ಲಿ ಸುಷುಪ್ತಿಕಾಲದಲ್ಲಿ ಮಾತ್ರ ವಿಲೀನ ನಾಗಿದ್ದರೂ, ಅಲ್ಲಿಂದ ಅವಸ್ಥಾಂತರವನ್ನು ಹೊಂದಿದೊಡನೆಯೇ, ನೀರಿನ ಕೊಡವು ನೀರಿನಲ್ಲಿ ಮುಳುಗಿದಾಗ ಮಾತ್ರ ನೀರಿನಂತೆಯೇ ಇದ್ದು ಈಚೆಗೆ ಬಂದ ಮೇಲೆ ತನ್ನಲ್ಲಿದ್ದ ನೀರನ್ನೇ ತಾನು ಹಿಂದಿರುಗಿ ತರುವಂತೆ, ಮತ್ತೆ ಅವಿದ್ಯಾಕಾರ್ಯನಾಗಿಯೇ ಬರುವನು ಸುಷುಪ್ತಿಕಾಲದಲ್ಲಿ ವಿಜ್ಞಾನಾತ್ಮನು ಕಾರಣಾತ್ಮನಾಗಿ ತೋರುವುದೂ ಈ ದೃಷ್ಟಾಂತದಂತೆಯೇ ಶಾಶ್ವತವಾದುದಲ್ಲ ಅಜ್ಞಾನ ಮತ್ತು ಅದರ ಕಾರ್ಯಗಳು ಇರುವವರೆಗೂ ಜೀವೇಶ್ವರರಿಗೆ ಭೇದವು ತೋರುತ್ತಲೇ ಇದ್ದು, ಪ್ರಾಪಂಚಿಕ ವ್ಯವಹಾರವು ದ್ವೈತರೂಪದಿಂದಲೇ ನಡೆಯುವುದು. ಅಜ್ಞಾನಾದಿಗಳು ನಷ್ಟವಾದರ ಆ ದ್ವೈತಭಾವವೂ ಮಾಯವಾಗುವುದು.

೬೦–೬೨ ಸೂರ್ಯನು ಒಬ್ಬನೇ ಆದರೂ, ಜಲಾದಿರೂಪ ಉಪಾಧಿಭೇದದಿಂದ ಬೇರೆ ಬೇರೆಯಾಗಿ ಕಾಣುವಂತೆ, ನಿರ್ವಿಕಾರಸ್ವರೂಪನಾದ ಪರಮಾತ್ಮನು ಉಪಾಧಿ

ಏಕಾಕಾರೋಽಯರ್ಣಮಾ ತತ್ತತ್ಕಾಯೇಽಷ್ವಿವ ವರಃ ಪುಮಾನ್ ।
ಕೂಟಸ್ಥೋ ದೃಶ್ಯತೇ ತದ್ವದ್ಗಚ್ಛತ್ಯಾಗಚ್ಛತೀವ ಸಃ || ೬೧ ||
ಮೋಹಮಾತ್ರಾಂತರಾಯತ್ವಾತ್ಸರ್ವಂ ತಸ್ಯೋಪಪದ್ಯತೇ ।
ದೇಹಾದ್ಯತೀತ ಆತ್ಮಾಪಿ ಸ್ವಯಂ ಜ್ಯೋತಿಸ್ಸ್ವಭಾವತಃ || ೬೨ ||
ಏವಂ ಜೀವಸ್ವರೂಪಂ ತೇ ಪ್ರೋಕ್ತಂ ದಶರಥಾತ್ಮಜ ||

ಇತಿ ಶ್ರೀಪದ್ಮಪುರಾಣೇ ಶ್ರೀಶಿವಗೀತಾಸೂಪನಿಷತ್ಸು
ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಶಿವರಾಘವಸಂವಾದೇ
ಜೀವಸ್ವರೂಪನಿರೂಪಣಯೋಗೋ ನಾಮ
|| ದಶಮೋಽಧ್ಯಾಯಃ ||

ಭೇದದಿಂದ ನಾನಾವಿಧಗಳಾದ ಆಕಾರಗಳನ್ನು ಪಡೆದು ಜನನ, ಮರಣ, ಗಮನ, ಆಗಮನ ಮುಂತಾದ ಕಾರ್ಯಭಾರಗಳನ್ನು ನಡೆಸುವನು ಆದರೆ ಪರಬ್ರಹ್ಮವಸ್ತುವು ಈ ಜಗತ್ತಾಗಿ ತೋರುವಾಗ ಆಗುವ ವ್ಯತ್ಯಾಸವೇನೆಂದರೆ ಆತ್ಮನಿಗೆ ಸ್ವರೂಪ ಸ್ಫೂರ್ತಿಪ್ರತಿಬಂಧಕವಾದ ಮಾಯೆಯೆಂಬುದು ಆತ್ಮನಿಗೆ ವಿರುದ್ಧಧರ್ಮಾದಿಗಳನ್ನು ಕಲ್ಪಿಸಿಬಿಡುತ್ತದೆ ಇದು ಆ ಅವಿದ್ಯೆಯ ಅತಿಶಯ ಸಾಮರ್ಥ್ಯ ಇದನ್ನೇ ಪೂರ್ವಾಚಾರ್ಯರು- "ಕೂಟಸ್ಥಮನುಪಸ್ಪೃತ್ಯ ಕರೋತಿ ಜಗದಾದಿಕಂ ದುರ್ಘಟೈಕವಿಧಾಯಿನ್ಯಾಂ ಮಾಯಾಯಾಂ ಕಾ ಚಮತ್ಕೃತಿಃ || ಮಾಯಾಖ್ಯಾಯಾಃ ಕಾಮಧೇನೋರ್ವತ್ಸೌ ಜೀವೇಶ್ವರಾವುಭೌ ಯಥೇಚ್ಛಂ ಪಿಬತಾಂ ದ್ವೈತಂ ತತ್ತ್ವಂ ತ್ವದ್ವೈತಮೇವ ಹಿ ||" ಎಂದು ಹೇಳಿರುವರು ಒಟ್ಟಿನಲ್ಲಿ ದ್ವೈತವು ವ್ಯವಹಾರದಲ್ಲಿ ಕಂಡುಬಂದರೂ ಪರಮಾರ್ಥತಃ ಅದ್ವೈತವೇ ಸಿದ್ಧಾಂತಭೂತವಾದುದು ಎಲೈ ಶ್ರೀರಾಮನೇ, ಹೀಗೆ ದೇಹಾದಿಗಳಿಗಿಂತ ಬೇರೆಯಾಗಿರುವ ಆತ್ಮನು ಸ್ವಯಂ ಜ್ಯೋತಿಸ್ಸ್ವರೂಪನು ಅವನಿಗೆ ವಾಸ್ತವಿಕವಾಗಿ ಯಾವ ವಿಕಾರವೂ ಇರುವುದಿಲ್ಲ ಇಲ್ಲಿನವರಗೂ ನಿನ್ನ ಇಷ್ಟದಂತೆ ಜೀವಸ್ವರೂಪವನ್ನು ವಿವರಿಸಿರುವೆನು ಎಂದು ಪರಮೇಶ್ವರನು ಮುಂದಿನ ವಿಷಯ ನಿರೂಪಣೆಗೆ ಉಪಕ್ರಮಿಸಿದನು

ಇಲ್ಲಿಗೆ ಶ್ರೀ ಪದ್ಮಪುರಾಣದ ಶಿವಗೀತೆಯಲ್ಲಿ ಜೀವಸ್ವರೂಪ ನಿರೂಪಣವೆಂಬ
ಹತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಶ್ರೀ ಶಿವಗೀತಾ

॥ ಅಥೈಕಾದಶೋಽಧ್ಯಾಯಃ

॥ ಶ್ರೀ ಮಹಾದೇವ ಉವಾಚ ॥

ದೇಹಾಂತರಗತಿಂ ತಸ್ಯ ಪರಲೋಕಗತಿಂ ತಥಾ ।
ವಕ್ಷ್ಯಾಮಿ ನೃಪಶಾರ್ದೂಲ ಮತ್ತಶ್ಶೃಣು ಸಮಾಹಿತಃ ॥ ೧ ॥

ಭುಕ್ತಂ ಪೀತಂ ಯದಸ್ತ್ಯತ್ರ ತದ್ರಸಾದಾಮುಬಂಧನಂ ।
ಸ್ಥೂಲದೇಹಸ್ಯ ಲಿಂಗಸ್ಯ ತೇನ ಜೀವನಧಾರಣಂ ॥ ೨ ॥

## ಹನ್ನೊಂದನೆಯ ಅಧ್ಯಾಯ

೧-೨ ಪರಮೇಶ್ವರನು ಜೀವನಿಗೆ ದೇಹಾಂತರ ಪ್ರಾಪ್ತಿ ಮತ್ತು ಲೋಕಾಂತರ ಪ್ರಾಪ್ತಿವಿಷಯಕವಾದ ರಹಸ್ಯವನ್ನು ಶ್ರೀರಾಮನಿಗೆ ತಿಳಿಸುತ್ತಾ ಹೀಗೆ ನುಡಿದನು —ರಾಜಶ್ರೇಷ್ಠನೇ, ಕೇಳು ಜೀವನಿಗೆ ದೇಹಾಂತರ ಮತ್ತು ಲೋಕಾಂತರಗಳು ದೊರಕುವ ಸನ್ನಿವೇಶಗಳನ್ನು ವಿವರಿಸಿ ಹೇಳುವೆನು ಲಾಲಿಸು ಮಾನವನು ತಿಂದ ಆಹಾರವೂ ಕುಡಿದ ಪಾನೀಯವೂ ರಸರೂಪವಾಗಿ ಪರಿಣಮಿಸಿ, ಸ್ಥೂಲದೇಹಕ್ಕೂ ಲಿಂಗದೇಹಕ್ಕೂ ಒಂದು ನೂತನ ಬಂಧನವೇರ್ಪಡುವುದು ಆ ವಿಧವಾದ ಬಂಧನವುಂಟಾಗುವುದರಿಂದಲೇ ದೇಹದಲ್ಲಿ ಪ್ರಾಣವಾಯುವು ನಿಲ್ಲಲು ಅನುಕೂಲವಾಗುವುದು

ವ್ಯಾಧಿನಾ ಜರಯಾ ವಾಪಿ ಪೀಡ್ಯತೇ ಜಾಠರೋಽನಲಃ ।
ಶ್ಲೇಷ್ಮಣಾ ತೇನ ಭುಕ್ತಾನ್ನಂ ಪೀತಂ ವಾ ನ ಪಚತ್ಯಲಂ ॥ ೩ ॥

ಭುಕ್ತಪೀತರಸಾಭಾವಾತ್ತದಾ ಶುಷ್ಯಂತಿ ಧಾತವಃ ।
ಭುಕ್ತಪೀತರಸೇನೈವ ದೇಹಂ ಲಿಂಪಂತಿ ನಿತ್ಯಶಃ ॥ ೪ ॥

ಸಮೀಕರೋತಿ ಯತ್ತಸ್ಮಾತ್ಸಮಾನೋ ವಾಯುರುಚ್ಯತೇ ।
ಇದಾನೀಂ ತತ್ಪ್ರಸಾಭಾವಾದಾಮುಬಂಧನಹಾನಿತಃ ॥ ೫ ॥

ಪರಿಪಕ್ವರಸತ್ವೇನ ಯಥಾ ಗೌರವತಃ ಫಲಂ ।
ಸ್ವಯಮೇವ ಪತತ್ಯಾಶು ತಥಾ ಲಿಂಗಂ ತನೋರ್ವ್ರಜೇತ್ ॥ ೬ ॥

೩–೪ ದೇಹಕ್ಕೆ ಮುಪ್ಪಾಗಲಿ, ಅಥವಾ ರೋಗವಾಗಲಿ ತಗುಲಿದಾಗ, ಜಠರಾಗ್ನಿಯ ಶಕ್ತಿಯು ಮಂದವಾಗಿ, ತಿಂದ ಆಹಾರವು ಜೀರ್ಣವಾಗದೆ ಶ್ಲೇಷ್ಮರೂಪವನ್ನು ತಾಳುವುದು ಶರೀರಪುಷ್ಟಿಗೆ ಬೇಕಾದ ರಸಗಳು ಹುಟ್ಟದಿರುವುದರಿಂದ ಸಪ್ತಧಾತುಗಳೂ ದುರ್ಬಲವಾಗುವುವು ಪ್ರಾಣಿಯು ತಿಂದ ಆಹಾರಗಳ ಅಥವಾ ಕುಡಿದ ಪಾನೀಯಗಳ ರಸವಿಶೇಷವನ್ನು ಸಮಾನವಾಯುವು ದೇಹದ ಎಲ್ಲ ಭಾಗಕ್ಕೂ ಹರಡಿ ದೇಹವನ್ನು ಒಂದೇ ಸಮನಾಗಿ ಬೆಳೆಸುವುದು

೫–೬ ಜಠರಾಗ್ನಿಯ ಮಂದತೆಯಿಂದ ರಸವಿಶೇಷವೇ ಉತ್ಪತ್ತಿಯಾಗದಿರುವಾಗ ದೇಹದಲ್ಲಿ ಧಾತುಬಲವೇ ಮಾಯವಾಗುವುದು ಆಗ ಸ್ಥೂಲದೇಹದ ಬಂಧನವು ಸಡಿಲವಾಗಿ ಸ್ಥೂಲದೇಹದಿಂದ ಲಿಂಗದೇಹವು ಜಾರಿಹೋಗಲು ಯತ್ನಿಸುವುದು ಭಾರವಾದ ವಸ್ತುವು ಹಗುರವಾದ ಆಶ್ರಯವಸ್ತುವಿನಿಂದ ಕಳಚಿ ಬೀಳುವಂತೆ ಸೂಕ್ಷ್ಮದೇಹವು ಸ್ಥೂಲದೇಹದಿಂದ ಬಿಟ್ಟು ಹೊರಡುವುದು

ತತ್ತ್ವತ್ಸ್ಥಾನಾದಪಾಕೃಷ್ಯ ಹೃಷೀಕಾಣಾಂ ಚ ವಾಸನಾಃ ।
ಆಧ್ಯಾತ್ಮಿಕಾಧಿಭೂತಾನಿ ಹೃತ್ಪದ್ಮೇ ಚೈಕತಾಂ ಗತೇಃ ॥ ೭ ॥

ತತ್ರೋಽರ್ಧ್ವಗಃ ಪ್ರಾಣವಾಯುಃ ಸಂಯುಕ್ತೋ ನವವಾಯುಭಿಃ ।
ಊರ್ಧ್ವೋಚ್ಛ್ವಾಸೀ ಭವತ್ಯೇಷ ತಥಾ ತೇನೈಕತಾಂ ಗತಃ ॥ ೮ ॥

ಚಕ್ಷುಷೋ ವಾಥ ಮೂರ್ಧ್ನೋ ವಾ ನಾಡೀಮಾರ್ಗಂ ಸಮಾಶ್ರಿತಃ ।
ವಿದ್ಯಾಕರ್ಮಸಮಾಯುಕ್ತೋ ವಾಸನಾಭಿಶ್ಚ ಸಂಯುತಃ ॥ ೯ ॥

ಪ್ರಜ್ಞಾತ್ಮಾನಂ ಸಮಾಶ್ರಿತ್ಯ ವಿಜ್ಞಾನಾತ್ಮೋಪಸರ್ಪತಿ ।
ಯಥಾ ಕುಂಭೋ ನೀಯಮಾನೋ ದೇಶಾದ್ದೇಶಾಂತರಂ ಪ್ರತಿ ॥ ೧೦ ॥

೭–೮ ಆಗ ಜೀವವು ಇಂದ್ರಿಯಗಳ ಸಂಸ್ಕಾರವನ್ನೂ, ಜೀವಾತ್ಮನಲ್ಲಿ ಅಧ್ಯಸ್ತವಾಗಿದ್ದ ಬುದ್ಧಿಯೇ ಮೊದಲಾದುವುಗಳನ್ನೂ, ದೇಹಾಂತರೋತ್ಪತ್ತಿಗೆ ಸಾಧಕಗಳಾದ ಸೋಮಾದಿಪಯಃಪ್ರಭೃತಿಗಳನ್ನೂ ಎಳೆದುಕೊಂಡು, ಹೃದಯ ಕಮಲದಲ್ಲಿ ಪ್ರಾಣವಾಯುವಿನೊಡನೆ ಏಕತ್ವವನ್ನು ಪಡೆದು ಊರ್ಧ್ವಗಾಮಿಯಾದ ಉಚ್ಛ್ವಾಸದಲ್ಲಿ ಸೇರಿಬಿಡುವುದು

೯–೧೧ ಆ ಉಸಿರು, ಕಣ್ಣಿನ, ಅಥವಾ ತಲೆಯ ನಾಡೀಮಾರ್ಗವನ್ನು ಹಿಡಿದು ಮೇಲೆ ಹಾರುವುದು ವಿಜ್ಞಾನಾತ್ಮನೆನಿಸಿದ ಜೀವನು ಅವಿದ್ಯಾಕರ್ಮಗಳಿಂದ ಕೂಡಿ, ಇಂದ್ರಿಯ ಸಂಸ್ಕಾರದಿಂದ ಲಿಂಗದೇಹ ಯುಕ್ತನಾಗಿ ಪ್ರಜ್ಞಾತ್ಮನಿಂದ ಪ್ರೇರಿತನೆನಿಸಿ ಸ್ಥೂಲದೇಹವನ್ನು ಬಿಡುವನು. ಮಡಕೆಯನ್ನು (ಘಟಾಕಾಶ ಸಹಿತವಾಗಿ) ಒಂದೆಡೆಯಿಂದ ಮತ್ತೊಂದೆಡೆಗೆ ಒಯ್ಯುವಾಗ, ಸರ್ವತ್ರ ಪೂರ್ಣ ವಾಗಿರುವ ಆಕಾಶದಲ್ಲಿಯೇ ಅದು ಹೋಗುತ್ತಿದ್ದರೂ, ಘಟಾಕಾಶವೆಂದು ಬೇರೆ

ಖಪೂರ್ಣ ಏವ ಸರ್ವತ್ರ ಸ ಆಕಾಶೋऽಪಿ ತತ್ರ ತು ।
ಘಟಾಕಾಶಾಖ್ಯತಾಂ ಯಾತಿ ತದ್ವಲ್ಲಿಂಗಂ ಪರಾತ್ಮನಃ ॥ ೧೧ ॥

ಪುನರ್ದೇಹಾಂತರಂ ಯಾತಿ ಯಥಾ ಕರ್ಮಾನುಸಾರತಃ ।
ಆಮೋಕ್ಷಾತ್ಸಂಚರತ್ಯೇವ ಮತ್ಸ್ಯಃ ಕೂಲದ್ವಯಂ ಯಥಾ ॥ ೧೨ ॥

ಪಾಪಭೋಗಾಯ ಚೇದ್ಗಚ್ಛೇದ್ಯಮದೂತೈರಧಿಷ್ಠಿತಃ ।
ಯಾತನಾದೇಹಮಾಶ್ರಿತ್ಯ ನರಕಾನೇವ ಕೇವಲಂ ॥ ೧೩ ॥

ಇಷ್ಟಾಪೂರ್ತಾದಿಕರ್ಮಾಣಿ ಯೋऽನುತಿಷ್ಠತಿ ಸರ್ವದಾ ।
ಪಿತೃಲೋಕಂ ವ್ರಜತ್ಯೇಷ ಧೂಮಮಾಶ್ರಿತ್ಯ ಬರ್ಹಿಷಃ ॥ ೧೪ ॥

ವ್ಯವಹಾರವನ್ನು ಅದು ಪಡೆಯುವಂತೆ, ಪರಬ್ರಹ್ಮರೂಪಿಯಾದ ಜೀವವೇ ಲಿಂಗ ಶರೀರಾಂತರ್ವರ್ತಿಯಾಗಿ ಜೀವವೆಂಬ ವ್ಯವಹಾರದಿಂದ ದೇಹಾಂತರಕ್ಕೆ ನೇರಲು ಹೊರಡುವುದು

೧೨-೧೩ ಪ್ರಾಕ್ಜನ್ಮಕರ್ಮಾನುಗುಣವಾಗಿ ಜೀವನು ಮೋಕ್ಷಪರ್ಯಂತವಾಗಿ ನಾನಾ ರೀತಿಯ ಜನ್ಮಗಳನ್ನು ತಾಳುತ್ತಾ, ನದಿಯಲ್ಲಿರುವ ಮೀನು ಆ ದಡದಿಂದ ಈ ದಡಕ್ಕೆ ಸುಮ್ಮನೆ ಸುತ್ತುವಂತೆ ಮೇಲೆ ಮೇಲೆ ಜನ್ಮಗಳನ್ನು ಪಡೆಯುತ್ತಲೇ ಇರುವನು ಅದರಲ್ಲಿ ಪಾಪಫಲವನ್ನೇ ಅನುಭವಿಸುವ ಜೀವನು ಮಾತ್ರ ಯಾತನಾ ದೇಹವನ್ನು (ಪಾಪಫಲವನ್ನು ಮಾತ್ರ ಅನುಭವಿಸುವ ದೇಹ) ಪಡೆದು ಯಮದೂತ ರಿಂದ ಆವೃತನಾಗಿ ನರಕಲೋಕವನ್ನು ಹೊಂದುವನು

೧೪-೧೬ ಯಾಗಾದಿ ಕರ್ಮಗಳನ್ನೂ, ತಟಾಕನಿರ್ಮಾಣಾದಿ ಪುಣ್ಯಕಾರ್ಯ ಗಳನ್ನೂ ನಡೆಸಿದವರು ಯಮದೂತರ ಸಹಾಯದಿಂದ ಪಿತೃಲೋಕವನ್ನು ಸೇರು ವರು "ಕರ್ಮಣಾ ಪಿತೃಲೋಕಃ" ಎಂಬ ಶ್ರುತಿಯಂತೆ ಯಾಗಾದಿ ಕರ್ಮ ನಿರತರು ಕರ್ಮಜನ್ಯವಾದ ಸುಕೃತಫಲವನ್ನು ಉಪಭೋಗಿಸಲು ಪಿತೃಲೋಕವನ್ನೇ

ಧೂಮಂ ರಾತ್ರಿಂ ಗತಃ ಕೃಷ್ಣಪಕ್ಷಂ ತಸ್ಮಾಚ್ಚ ದಕ್ಷಿಣಂ ।
ಅಯನಂ ಚ ತತೋ ಲೋಕಂ ಪಿತೄಣಾಂ ಚ ತತಃ ಪರಂ ॥ ೧೫ ॥

ಚಂದ್ರಲೋಕೇ ದಿವ್ಯದೇಹಂ ಪ್ರಾಪ್ಯ ಭುಂಕ್ತೇ ಪರಾಂ ಶ್ರಿಯಂ ।
ತತ್ರ ಚಂದ್ರಸಮಾನೋಽಸೌ ಯಾವತ್ಕರ್ಮಫಲಂ ವಸೇತ್ ॥ ೧೬ ॥

ತಥೈವ ಕರ್ಮಶೇಷೇಣ ಯಥೇತಂ ಪುನರಾವ್ರಜೇತ್ ।
ವಪುರ್ವಿಹಾಯ ಜೀವತ್ವಮಾಸಾದ್ಯಾಕಾಶಮೇತಿ ಸಃ ॥ ೧೭ ॥

ಆಕಾಶಾದ್ವಾಯುಮಾಗತ್ಯ ವಾಯೋರಂಭೋ ವ್ರಜತ್ಯಥ ।
ಅತೋ ಮೇಘಂ ಸಮಾಸಾದ್ಯ ತತೋ ವೃಷ್ಟಿರ್ಭವೇದಸೌ ॥ ೧೮ ॥

ತತೋ ಧಾನ್ಯಾನಿ ಭಕ್ಷ್ಯಾಣಿ ಜಾಯತೇ ಕರ್ಮಚೋದಿತಃ ।
ಯೋನಿಮನ್ಯೇ ಪ್ರಪದ್ಯಂತೇ ಶರೀರತ್ವಾಯ ದೇಹಿನಃ ॥ ೧೯ ॥

---

ಸೇರುವರು ಹಾಗೆ ಸೇರುವವರು ಮೊದಲು ಧೂಮ ಸ್ವರೂಪವನ್ನು ಪಡೆದು, ರಾತ್ರಿಯಾಗಿ, ಕೃಷ್ಣಪಕ್ಷದ್ದಂತಿದ್ದು, ದಕ್ಷಿಣಾಯನದಲ್ಲಿ ಸೇರಿ, ಅನಂತರ ಪಿತೃಲೋಕವನ್ನು ಹೊಂದುವರು ಅಲ್ಲಿಂದ ಚಂದ್ರಲೋಕಕ್ಕೆ ಹೋಗಿ, ಅಲ್ಲಿ ದಿವ್ಯದೇಹವನ್ನು ಪಡೆದು, ಕರ್ಮಜನ್ಯವಾದ ಪುಣ್ಯಫಲವನ್ನು ಅನುಭವಿಸುವರು ಚಂದ್ರಸಮಾನರಾಗಿ ಪ್ರಕಾಶಿಸುತ್ತಾ ಸುಖಪಟ್ಟು, ಕ್ಷೀಣಪುಣ್ಯರಾದ ಮೇಲೆ ಯಾವಕ್ರಮದಲ್ಲಿ ಪಿತೃಲೋಕವನ್ನು ಸೇರಿದ್ದರೋ ಅದೇ ಕ್ರಮವನ್ನನುಸರಿಸಿ ಮತ್ತೆ ಭೂಲೋಕಕ್ಕೆ ಇಳಿಯುವರು

೧೭–೧೯ ದಿವ್ಯದೇಹಧಾರಿಯಾಗಿದ್ದು ಸುಖಾನುಭವಾನಂತರ ಭೂಲೋಕಕ್ಕೆ ಬರುವಾಗ, ಆ ದಿವ್ಯದೇಹವನ್ನು ಅಲ್ಲಿಯೇ ಬಿಟ್ಟು, ಲಿಂಗಶರೀರವಿಶಿಷ್ಟನಾಗಿ ಆಕಾಶಕ್ಕೆ ಬರುವನು ಅಂದರೆ ಆಕಾಶತತ್ವವನ್ನು ಪಡೆಯುವನು ಅಲ್ಲಿಂದ ವಾಯುಸ್ವರೂಪವನ್ನೂ, ವಾಯುವಿನಿಂದ ನೀರಿನ ಸ್ವರೂಪವನ್ನು ಪಡೆದು, ಮೇಘಮಂಡಲದಲ್ಲಿ ನೇರಿ ಮಳೆಯರೂಪದಿಂದ ಭೂಮಿಗೆ ಬಿದ್ದು, ಸಸ್ಯದೊಳಗಡೆ ಸೇರಿ ಜೀವವು ಧಾನ್ಯರೂಪವಾಗಿ ನಿಲ್ಲುವುದು ಆಯಾ ಕರ್ಮಾನುಗುಣವಾಗಿ ಆ ಧಾನ್ಯವು

ಸ್ಥಾಣುಮನ್ಯೇ ಪ್ರಪದ್ಯಂತೇ ಯಥಾಕರ್ಮ ಯಥಾಶ್ರುತಂ ।
ತತೋಽನ್ನತ್ವಂ ಸಮಾಸಾದ್ಯ ಪಿತೃಭ್ಯಾಂ ಭುಜ್ಯತೇ ಪರಂ ॥ ೨೦ ॥

ತತಶ್ಶುಕ್ಲಂ ರಜಶ್ಚೈವ ಭೂತ್ವಾ ಗರ್ಭೋಽಭಿಜಾಯತೇ ।
ತತಃ ಕರ್ಮಾನುಸಾರೇಣ ಭವೇತ್ಸ್ತ್ರೀಪುನ್ನಪುಂಸಕಂ ॥ ೨೧ ॥

ಏವಂ ಜೀವಗತಿಃ ಪ್ರೋಕ್ತಾ ಮುಕ್ತಿಂ ತಸ್ಯ ವದಾಮಿ ತೇ ।
ಯಸ್ತು ಶಾಂತ್ಯಾದಿಯುಕ್ತಸ್ಸನ್ ಸದ್ವಿದ್ಯಾಭಿರತೋ ಭವೇತ್ ॥ ೨೨ ॥

---

ಬೇರೆಬೇರೆಜಾತಿಯ ಪ್ರಾಣಿಗಳಿಗೆ ಆಹಾರವಾಗುವುದು. ಸ್ಥೂಲದೇಹವನ್ನು ಪಡೆಯಲು ಆಹಾರಗತನಾದ ಜೀವನು ಪುರುಷಶರೀರದಲ್ಲಿ ವೀರ್ಯರೂಪದಂತಿದ್ದು, ಭೋಗಕಾಲದಲ್ಲಿ ಸ್ತ್ರೀಯೋನಿಯನ್ನು ನೇರುವನು

೨೦–೨೨ ಚಂದ್ರಲೋಕದಲ್ಲಿದ್ದಾಗಲೂ, ಮೋಕ್ಷಸಾಧನಭೂತವಾದ ಶ್ರವಣಾದಿ ಸಾಧನಸಾಮಗ್ರಿಗಳನ್ನು ಪಡೆದ ಜೀವನಿಗೆ ಅಲ್ಲಿಂದಲೇ ಪರಬ್ರಹ್ಮ ಸ್ವರೂಪವು ಲಭಿಸುವುದುಂಟು "ಸ್ವರ್ಗಲೋಕಾದಾವಪಿ ಶ್ರವಣಾದಿಸಾಧನೇನ ಮೋಕ್ಷೋ ಭವತಿ" ಇತ್ಯಾದಿ ಶ್ರುತಿವಾಕ್ಯಗಳು ಸ್ವರ್ಗಲೋಕಾದಿಗತರಾದ ದೇವತೆಗಳಿಗೂ ಕ್ರಮಮುಕ್ತಿಯುಂಟು ಎಂದು ತಿಳಿಸುವುವು ಇತ್ತ ಮನುಷ್ಯದೇಹವನ್ನು ಸಂಸ್ಕಾರವಶದಿಂದ ಪಡೆಯುವ ಜೀವನು, ಹಿಂದೆ ಹೇಳಿದ ಕ್ರಮದಿಂದ ಭೂಮಿಗೆ ಬಿದ್ದು ಆಹಾರತ್ವವನ್ನು ಪಡೆದು, ಮಾತಾಪಿತೃಗಳ ದೇಹವನ್ನು ಸೇರಿ, ಸ್ತ್ರೀದೇಹದಲ್ಲಿ ಶೋಣಿತರೂಪವಾಗಿಯೂ, ಪುರುಷದೇಹದಲ್ಲಿ ಶುಕ್ಲರೂಪವಾಗಿಯೂ ಆಗಿ ಗರ್ಭವನ್ನು ಆಶ್ರಯಿಸುವುದು ಅವರವರ ಕರ್ಮಾನುಗುಣವಾಗಿ ಸ್ತ್ರೀ, ಪುಮಾನ್, ನಪುಂಸಕರ ಜನ್ಮವು ಲಭಿಸುವುದು ಶ್ರೀರಾಮನೇ, ಇಲ್ಲಿಯವರೆಗೂ ಜೀವನ ಸಂಚಾರಮಾರ್ಗಾದಿಗಳನ್ನು ತಿಳಿಸಿದೆನು ಇನ್ನು ಮುಂದೆ ಜೀವನು ಮುಕ್ತನಾಗುವ ಮಾರ್ಗವನ್ನು ವಿಸ್ತಾರವಾಗಿ ತಿಳಿಯಪಡಿಸುವೆನು ಕೇಳು

ಸ ಯಾತಿ ದೇವಯಾನೇನ ಬ್ರಹ್ಮಲೋಕಾವಧಿಂ ನರಃ ।
ಅರ್ಚಿರ್ಭೂತ್ವಾ ದಿನಂ ಪ್ರಾಪ್ಯ ಶುಕ್ಲಪಕ್ಷಮಥೋ ವ್ರಜೇತ್ ॥ ೨೩ ॥

ಉತ್ತರಾಯಣಮಾಸಾದ್ಯ ಸಂವತ್ಸರಮಥೋ ವ್ರಜೇತ್ ।
ಆದಿತ್ಯಚಂದ್ರಲೋಕೌ ತು ವಿದ್ಯುಲ್ಲೋಕಮತಃಪರಂ ॥ ೨೪ ॥

ಅಥ ದಿವ್ಯಃ ಪುಮಾನ್ಕಶ್ಚಿದ್ಬ್ರಹ್ಮಲೋಕಾದಿಹೈತಿ ಸಃ ।
ದಿವ್ಯೇ ವಪುಷಿ ಸಂಧಾಯ ಜೀವಮೇನಂ ನಯತ್ಯಸೌ ॥ ೨೫ ॥

ಬ್ರಹ್ಮಲೋಕೇ ದಿವ್ಯದೇಹೋ ಭುಕ್ತ್ವಾ ಭೋಗಾನ್ಯಥೇಪ್ಸಿತಾನ್ ।
ತತ್ರೋಷಿತ್ವಾ ಚಿರಂ ಕಾಲಂ ಬ್ರಹ್ಮಣಾ ಸಹ ಮುಚ್ಯತೇ ॥ ೨೬ ॥

೨೩–೨೫ ಯಾರು ಶಮದಮಾದಿ ಸದ್ಗುಣಯುಕ್ತರಾಗಿ, ಸದಾ ಬ್ರಹ್ಮ ಜ್ಞಾನನಿರತರಾಗಿ, ವರ್ಣಾಶ್ರಮಾಚಾರತತ್ಪರರೆನಿಸಿರುವರೋ, ಅಂತಹವರು ದೇವಯಾನದಿಂದ ಬ್ರಹ್ಮಲೋಕಪರ್ಯಂತವಾಗಿ ಹೋಗುವರು ದೇವಯಾನ ಮಾರ್ಗವೆಂದರೆ, ಮೊದಲು ಜೀವನು ಬೆಂಕಿಯ ಜ್ವಾಲೆಯಂತಾಗಿ, ಹಗಲು, ಶುಕ್ಲಪಕ್ಷ, ಉತ್ತರಾಯಣ, ಇವುಗಳಲ್ಲಿ ಬೆರೆತು, ಒಂದು ಸಂವತ್ಸರದೊಳಗೆ ಸೂರ್ಯ, ಚಂದ್ರ, ವಿದ್ಯುತ್, ಈ ಲೋಕಗಳನ್ನು ದಾಟಿ, ಬ್ರಹ್ಮಲೋಕಪರ್ಯಂತ ಹೋಗು ವನು ಬ್ರಹ್ಮಲೋಕದಿಂದ ದಿವ್ಯಲೋಕಧಾರಿಯಾದ ಪುರುಷನೊಬ್ಬನು ಇವನನ್ನು ಬ್ರಹ್ಮಲೋಕವೇ ಮೊದಲಾದ ಪುಣ್ಯಲೋಕಗಳಿಗೆ ಕರೆದುಕೊಂಡು ಹೋಗುವನು

೨೬–೨೮ ಬ್ರಹ್ಮಲೋಕದಲ್ಲಿ ಬಹುಕಾಲವಿದ್ದು, ದಿವ್ಯದೇಹದಿಂದ ಸಮಸ್ತ ಭೋಗಗಳನ್ನೂ ಅನುಭವಿಸಿ, ಬ್ರಹ್ಮನೊಡನೆ ಆನಂದವನ್ನನುಭವಿಸುವನು ಅಲ್ಲಿಯೇ ಜೀವನಿಗೆ ಶ್ರವಣಾದಿ ಜ್ಞಾನೋದಯವಾದ ಬ್ರಹ್ಮನೊಡನೆ ಅವನಿಗೂ ಅಲ್ಲಿಯೇ ಮುಕ್ತಿ ದೊರೆಯುವುದು ' ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿ ಸಂಚರೇ । ಪರಸ್ಯಾಂತೇ ಕೃತಾತ್ಮಾನಃ ಪ್ರವಿಶಂತಿ ಪರಂ ಪದಂ" ಎಂಬ ಸ್ಮೃತಿ ವಾಕ್ಯದಂತೆ ಬ್ರಹ್ಮನಿಗೂ ಅಲ್ಲಿಂದಲೇ ಮುಕ್ತಿ ದೊರೆಯುವುದು ಕ್ರಮಮುಕ್ತಿ

ಶುದ್ಧಬ್ರಹ್ಮರತೋ ಯಶ್ಚ ಸ ನಾಯಾತ್ಯೇವ ಕುತ್ರಚಿತ್ ।
ತಸ್ಯ ಪ್ರಾಣಾ ವಿಲೀಯಂತೇ ಜಲೇ ಸೈಂಧವಪಿಂಡವತ್ ॥ ೨೭ ॥

ಸ್ವಪ್ನಸೃಷ್ಟಿರ್ಯಥಾ ದೃಷ್ಟಾ ಪ್ರಬುದ್ಧಸ್ಯ ವಿಲೀಯತೇ ।
ಬ್ರಹ್ಮಜ್ಞಾನವತಸ್ತದ್ವದ್ವಿಲೀಯಂತೇ ತಥೈವ ತೇ ॥ ೨೮ ॥

ವಿದ್ಯಾಕರ್ಮವಿಹೀನೋ ಯಸ್ತೃತೀಯಂ ಸ್ಥಾನಮೇತಿ ಸಃ ।
ಭುಕ್ತ್ವಾತ್ರ ನರಕಾನ್ ಘೋರಾನ್ಮಹಾರೌರವರೌರವಾನ್ ॥ ೨೯ ॥

ಪಶ್ಚಾತ್ಪ್ರಾಕ್ಕರ್ಮಶೇಷೇಣ ಕ್ಷುದ್ರಜಂತುರ್ಭವೇದಸೌ ।
ಯೂಕಾಮಶಕದಂಶಾದಿಜನ್ಮಾಸೌ ಲಭತೇ ಭುವಿ ॥ ೩೦ ॥

---

ದೂರೆಯುವುದಾದರೆ ಲಿಂಗದೇಹವಿಶಿಷ್ಟನಾದ ಜೀವನು ಪ್ರಾಣವಾಯುವಿನೊಡನೆ, ನೀರಿನಲ್ಲಿ ಉಪ್ಪು ಕರಗಿಹೋಗುವಂತೆ, ಪರಬ್ರಹ್ಮ ವಸ್ತುವಿನಲ್ಲಿ ಲೀನನಾಗಿ ಬಿಡುವನು ನಿದ್ದೆಯಿಂದ ಎಚ್ಚೆತ್ತವನಿಗೆ ಸ್ವಪ್ನದಲ್ಲಿ ಕಂಡ ಭಾವಗಳೆಲ್ಲಾ ಮಾಯವಾಗಿ ಹೋಗುವಂತೆ, ಬ್ರಹ್ಮಜ್ಞಾನಿಗೆ ಪ್ರಾಪಂಚಿಕ ವಿಚಾರಗಳೆಲ್ಲವೂ ಸ್ವಪ್ನ ವೃತ್ತಾಂತಗಳಂತೆ ಸ್ಮರಣೆಗೆ ಬಂದು ಹಾಗೆಯೇ ನಿಂತುಹೋಗುವುವು ಯಾವ ವ್ಯವಹಾರವೂ ಅದರಿಂದ ನಡೆಯಲಾರದು

೨೯-೩೦ ಕರ್ಮಮಾರ್ಗ, ಜ್ಞಾನಮಾರ್ಗ ಇವುಗಳಲ್ಲಿ ಯಾವುದನ್ನೂ ಆಶ್ರಯಿಸದ ಮಾನವಾಧಮನು, ಆ ಸಾಮಾನ್ಯ ನರಕಕ್ಕಿಂತಲೂ ಭಯಂಕರವಾದ ಮಹಾರೌರವಾದಿ ನರಕಗಳಲ್ಲಿ ಬಿದ್ದು ನಾನಾ ವಿಧಗಳಾದ ದುಃಖಗಳನ್ನು ಅನುಭವಿಸುತ್ತಾ, ಹಾಗೂ ಕರ್ಮಶೇಷದ ಫಲವಾಗಿ ಕೂರೆ, ನೊಣ, ಮುಂತಾದ ಕ್ಷುದ್ರ ಪ್ರಾಣಿಗಳ ಜನ್ಮವನ್ನು ತಾಳುವನು ಜೀವನ ಗತಿಯು ಹೀಗೆ ಆಗಾಗ ಬದಲಾವಣೆಯಾಗುತ್ತದೆ ಎಲೈ ಶ್ರೀರಾಮನೇ, ನೀನು ಕೇಳಿದಂತೆ ಜೀವನ ಮಾರ್ಗವನ್ನು ನಿನಗೆ ವಿಸ್ತಾರವಾಗಿ ತಿಳಿಯಪಡಿಸಿರುವೆನು ಮತ್ತೇನನ್ನು ಅಪೇಕ್ಷಿಸುವೆ ? ಎಂದು ಪರಶಿವನು ಸಮಾಧಾನದಿಂದ ಕೇಳಲು

ಏವಂ ಜೀವಗತಿಃ ಪ್ರೋಕ್ತಾ ಕಿಮನ್ಯಚ್ಛ್ರೋತುಮಿಚ್ಛಸಿ ।

॥ ಶ್ರೀರಾಮ ಉವಾಚ ॥

ಭಗವನ್ ಯತ್ತ್ವಯಾ ಪ್ರೋಕ್ತಂ ಫಲಂ ತು ಜ್ಞಾನಕರ್ಮಣೋಃ ॥

ಬ್ರಹ್ಮಲೋಕೇ ಚಂದ್ರಲೋಕೇ ಭುಂಕ್ತೇ ಭೋಗಾನಿತಿ ಪ್ರಭೋ ।
ಗಂಧರ್ವಾದಿಷು ಲೋಕೇಷು ಕಥಂ ಭೋಗಸ್ಸಮೀರಿತಃ ॥ ೩೨ ॥

ದೇವತ್ವಂ ಪ್ರಾಪ್ನುಯಾತ್ಕಶ್ಚಿತ್ಕಶ್ಚಿದಿಂದ್ರತ್ವಮೇತಿ ಚ ।
ಏತತ್ಕರ್ಮಫಲಂ ಚಾಸ್ತು ವಿದ್ಯಾಫಲಮಥಾಪಿ ವಾ ॥ ೩೩ ॥

ತದ್ಬ್ರೂಹಿ ಗಿರಿಜಾಕಾಂತ ತತ್ರ ಮೇ ಸಂಶಯೋ ಮಹಾನ್ ।

॥ ಶ್ರೀ ಮಹಾದೇವ ಉವಾಚ ॥

ತದ್ವಿದ್ಯಾಕರ್ಮಣೋರೇವಾನುಸಾರೇಣ ಫಲಂ ಭವೇತ್ ॥ ೩೪ ॥

೩೧-೩೩ ಶ್ರೀರಾಮನು "ಮಹೇಶ್ವರನೇ, ಷಡ್ಗುಣಪರಿಪೂರ್ಣನೇ, ಇಲ್ಲಿನ ವರೆಗೂ ಜ್ಞಾನಿಗಳಿಗೂ, ಕರ್ಮಮಾರ್ಗಾವಲಂಬಿಗಳಿಗೂ, ಬ್ರಹ್ಮಲೋಕ, ಚಂದ್ರ ಲೋಕಾದಿಗಳು ಪ್ರಾಪ್ತವಾಗುವುವೆಂದು ಹೇಳಿದೆಯಲ್ಲವೆ! ಆ ಲೋಕಗಳಲ್ಲಿ ದೊರಕುವ ಭೋಗವು ಎಂತಹುದು ? ಇಂದ್ರ ಪದವಿಯನ್ನು ಹೊಂದುವವನಿಗೆ ಕರ್ಮಫಲವೋ, ಅಥವಾ ವಿದ್ಯಾಫಲವೋ ಸಹಕಾರಿಯಾಗತಕ್ಕುದು ? ಗಿರಿಜಾ ಪತಿಯಾದ ಮಹೇಶ್ವರನೇ, ಹೀಗೆ ನನ್ನ ಮನಸ್ಸಿಗೆ ಬಂದಿರುವ ಸಂದೇಹವನ್ನು ನಿವಾರಣೆ ಮಾಡುವವನಾಗು" ಎಂದು ಪ್ರಾರ್ಥಿಸಿಕೊಂಡನು

೩೪-೩೬ ಆಗ ಪರಮೇಶ್ವರನು ಹೀಗೆ ಉಪದೇಶಮಾಡಿದನು "ಶ್ರೀರಾಮನೇ ಕೇಳು ಅವರವರ ಜ್ಞಾನ ಅಥವಾ ಕರ್ಮಗಳಿಗನುಸಾರವಾಗಿ ಫಲವು ಲಭಿಸುವುದು ಫಲಾನುಭವದಲ್ಲಿಯೂ ನಾನಾರೀತಿಯ ತಾರತಮ್ಯವಿರುವುದು ಸದಾ ಯುವಕನಾಗಿ ಸೌಂದರ್ಯಶಾಲಿಯಾಗಿ ಶೂರನೂ, ಆರೋಗಿಯೂ, ಬಲಿಷ್ಠನೂ

ಯುವಾ ಚ ಸುಂದರಃ ಶೂರೋ ನೀರೋಗೋ ಬಲವಾನ್ಭವೇತ್ ।
ಸಪ್ತದ್ವೀಪಾಂ ವಸುಮತೀಂ ಭುಂಕ್ತೇ ನಿಷ್ಕಂಟಕಂ ಯದಿ ॥ ೩೫ ॥

ಸ ಪ್ರೋಕ್ತೋ ಮಾನುಷಾನಂದಸ್ತಸ್ಮಾಚ್ಛತಗುಣೋ ಮತಃ ।
ಮನುಷ್ಯಸ್ತಪಸಾ ಯುಕ್ತೋ ಗಂಧರ್ವೋ ಜಾಯತೇ ಸ ತು ॥ ೩೬ ॥

ತಸ್ಮಾಚ್ಛತಗುಣೋ ದೇವಗಂಧರ್ವಾಣಾಂ ನ ಸಂಶಯಃ ।
ಏವಂ ಶತಗುಣಾನಂದ ಉತ್ತರೋತ್ತರತೋ ಭವೇತ್ ॥ ೩೭ ॥

ಪಿತ್ರ್ಯಾಣಾಂ ಚಿರಲೋಕಾನಾಮಾಜಾನಸುರಸಂಪದಾಂ ।
ದೇವತಾನಾಮಥೇಂದ್ರಸ್ಯ ಗುರೋಸ್ತದ್ವತ್ಪ್ರಜಾಪತೇಃ ॥ ೩೮ ॥

ಬ್ರಹ್ಮಣಶ್ಚೈವಮಾನಂದಃ ಪುರಸ್ತಾದುತ್ತರೋತ್ತರಃ ।
ಜ್ಞಾನಾಧಿಕ್ಯಾತ್ಸುಖಾಧಿಕ್ಯಂ ನಾನ್ಯದಸ್ತಿ ಸುರಾಲಯೇ ॥ ೩೯ ॥

ಎನಿಸಿ, ಸಪ್ತದ್ವೀಪ ಪರಿಮಿತವಾದ ಅಖಂಡಭೂಮಂಡಲವನ್ನು ನಿಷ್ಕಂಟಕವಾಗಿ ಆಳುವ ಮಹಾಪದವಿಯು ಮಾನುಷಾನಂದವೆನಿಸುವುದು ಇದೇ ಮೊದಲನೆಯದು ಮನುಷ್ಯನು ತಪಸ್ಸುಮಾಡಿ, ಆದರಿಂದ ವಿಶೇಷವಾದ ಸುಕೃತವನ್ನು ಗಳಿಸಿದರೆ, ಅದರಿಂದ ಗಂಧರ್ವಪದವಿಯೂ ಲಭಿಸುವುದು ಹಿಂದೆ ಹೇಳಿದ ಮಾನುಷಾನಂದಕ್ಕಿಂತ ನೂರ್ಮಡಿಯಾದುದು, ಈ ದೇವಗಂಧರ್ವಾನಂದ

೩೭–೩೯ ಹೀಗೆ ಪಿತೃಗಳ ಆನಂದ, ಕರ್ಮದಿಂದ ದೇವತ್ವವನ್ನು ಹೊಂದಿದ ಆಜಾನದೇವತೆಗಳ ಆನಂದ, ಇಂದ್ರನ, ಬೃಹಸ್ಪತಿಯ, ಪ್ರಜಾಪತಿಯ ಹೆಸರಿನ ಆನಂದಗಳು ನೂರು ನೂರು ಮಡಿಯಷ್ಟು ಹೆಚ್ಚಿನವುಗಳಾಗಿರುವುವು ಎಲ್ಲಕ್ಕಿಂತಲೂ ಶ್ರೇಷ್ಠತಮವೆನಿಸಿರುವ ಆನಂದವೇ ಬ್ರಹ್ಮಾನಂದ ಒಟ್ಟಿನಲ್ಲಿ ಬ್ರಹ್ಮಜ್ಞಾನದಿಂದ ಲಭಿಸುವ ಬ್ರಹ್ಮಾನಂದಕ್ಕಿಂತ ಮಿಗಿಲಾದ ಆನಂದವೇ ಮತ್ತೊಂದಿಲ್ಲ

ಶ್ರೋತ್ರಿಯೋಽವೃಜಿನೋಽಕಾಮಹತೋ ಯಶ್ಚ ದ್ವಿಜೋ ಭವೇತ್
ತಸ್ಯಾಪ್ಯೇವಂ ಸಮಾಖ್ಯಾತಾ ಆನಂದಾಶ್ಚೋತ್ತರೋತ್ತರಾಃ || ೪೦ ||

ಆತ್ಮಜ್ಞಾನಾತ್ಪರಂ ನಾಸ್ತಿ ತಸ್ಮಾದ್ದಶರಥಾತ್ಮಜ |
ಬ್ರಾಹ್ಮಣಃ ಕರ್ಮಭೇದೇನ ವರ್ಧತೇ ನೈವ ಹೀಯತೇ || ೪೧ ||

ನ ಲಿಪ್ಯತೇ ಪಾತಕೇನ ಕರ್ಮಣಾ ಜ್ಞಾನವಾನ್ ಯದಿ |
ತಸ್ಮಾತ್ಸರ್ವಾಧಿಕೋ ವಿಪ್ರೋ ಜ್ಞಾನವಾನೇವ ಜಾಯತೇ || ೪೨ ||

ಜ್ಞಾತ್ವಾ ಯಃ ಕುರುತೇ ಕರ್ಮ ತಸ್ಯಾಕ್ಷಯ್ಯಂ ಫಲಂ ಭವೇತ್ |
ಯತ್ಫಲಂ ಲಭತೇ ಮರ್ತ್ಯಃ ಕೋಟಿಬ್ರಾಹ್ಮಣಭೋಜನೈಃ || ೪೩ ||

---

೪೦–೪೨ ಒಟ್ಟಿನಲ್ಲಿ ಯಾರು ಶ್ರೋತ್ರಿಯರೆನಿಸಿ, ಪಾಪಕಾರ್ಯಗಳಿಗೆ ಮನ ಗೊಡದೆ, ಆಶಾಪಾಶಗಳಿಂದ ಬಂಧಿತರಾಗದೆ, ಬ್ರಹ್ಮಮಾರ್ಗದಲ್ಲಿಯೇ ಸಂಚರಿಸು ವರೋ, ಅಂತಹವರಿಗೆ ಮೇಲೆ ಹೇಳಿದ ಆನಂದಗಳು ಲಭಿಸುವುವು ಆತ್ಮಜ್ಞಾನ ಕ್ಕಿಂತ ದೊಡ್ಡದಾದ ಕರ್ಮವು ಯಾವುದೂ ಇಲ್ಲ ಆದರೆ ಕರ್ಮಮಾಡುವ ಬ್ರಾಹ್ಮಣನಿಗೂ ಆನಂದ ಪ್ರಾಪ್ತಿಯುಂಟು ಏಕೆಂದರೆ ಕರ್ಮಠನಿಗೆ ಪಾಪಸಂಬಂಧ ವಿರುವುದಿಲ್ಲ ಅವನನ್ನು ಎಂತಹ ಪಾಪವೂ ಸ್ಪರ್ಶಮಾಡಲಾರದು ಆದರೆ ಕರ್ಮ ದಿಂದ ಜ್ಞಾನವನ್ನು ಅಪೇಕ್ಷಿಸಿದರೆ, ಅದಕ್ಕಿಂತ ಹೆಚ್ಚಿನ ಲಾಭವು ಮತ್ತೊಂದಿಲ್ಲ ಜ್ಞಾನಿಯೇ ಸರ್ವಾಧಿಕನು, ಜ್ಞಾನದಿಂದಲೇ ಮೋಕ್ಷವೆಂಬುದನ್ನು ಮರೆಯಬೇಡ

೪೩–೪೫ ಕೋಟಿ ಬ್ರಾಹ್ಮಣ ಸಮಾರಾಧನೆಯಿಂದ ಎಂತಹ ಸುಕೃತವು ಲಭಿಸುವುದೋ, ಅಷ್ಟೇ ಪುಣ್ಯವು, ಜ್ಞಾನಿಯಾದ ಒಬ್ಬ ಬ್ರಾಹ್ಮಣನಿಗೆ ಭೋಜನ ಮಾಡಿಸುವುದರಿಂದ ಲಭಿಸುವುದು ಜ್ಞಾನಿಗಳಿಗೆ ಕೊಟ್ಟ ಅಲ್ಪ ವಸ್ತುಗಳ ದಾನ ದಿಂದ ಕೋಟಿಗುಣಿತವಾದ ಮಹಾಪುಣ್ಯವು ದೊರೆಯುವುದೆಂಬುದರಲ್ಲಿ ಸಂಶಯವಿಲ್ಲ ಜ್ಞಾನಿಯನ್ನು ಯಾವನು ದ್ವೇಷಿಸುವನೋ, ಅವನು ಪರಮೇಶ್ವರನನ್ನು ದ್ವೇಷಿಸಿ ದಂತೆಯೇ ಸರಿ ಅಂತಹವನು ಎಂದೂ ಸುಖದಿಂದ ಬಾಳಲಾರನು ಶ್ರೀರಾಮನೇ!

ತತ್ಫಲಂ ಸಮವಾಪ್ನೋತಿ ಜ್ಞಾನಿನಂ ಯಸ್ತು ಭೋಜಯೇತ್ |
ಜ್ಞಾನಿಭ್ಯೋ ದೀಯತೇ ಯಚ್ಚ ತತ್ಕೋಟಿಗುಣಿತಂ ಭವೇತ್ || ೪೪ ||

ಜ್ಞಾನವಂತಂ ದ್ವಿಜಂ ಯಸ್ತು ದ್ವಿಷತೇ ಚ ನರಾಧಮಃ |
ಸ ಶುಷ್ಯಮಾಣೋ ಮ್ರಿಯತೇ ಯಸ್ಮಾದೀಶ್ವರ ಏವ ಸಃ || ೪೫ ||

ಉಪಾಸಕೋ ನ ಯಾತ್ಯೇವ ಯಸ್ಮಾತ್ಪುನರಧೋಗತಿಂ |
ಉಪಾಸನಾರತೋ ಭೂತ್ವಾ ತಸ್ಮಾದಾಸ್ವ ಸುಖೀ ನೃಪ || ೪೬ ||

ಇತಿ ಶ್ರೀಪದ್ಮಪುರಾಣೇ ಶಿವಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀ ಶಿವರಾಘವಸಂವಾದೇ ಜೀವಗತಿ
ನಿರೂಪಣಯೋಗೋ ನಾಮ
|| ಏಕಾದಶೋಽಧ್ಯಾಯಃ ||

---

ಲೋಕದಲ್ಲಿ ದೇವತೋಪಾಸನೆಮಾಡುವುದು ಅತ್ಯಂತ ಪುಣ್ಯಪ್ರದವಾದುದು. ಅವನಿಗೆ ಎಂದಿಗೂ ಅಧೋಗತಿಯಿರಲಾರದು ಆದ್ದರಿಂದ ನೀನೂ ಉಪಾಸನಾ ಮಾರ್ಗವನ್ನವಲಂಬಿಸಿ ಸುಖಿಯಾಗು, ಎಂದು ಮಹೇಶ್ವರನು ಶ್ರೀರಾಮನಿಗೆ ಜೀವಗತಿ ನಿರೂಪಣೆಯನ್ನು ವಿವರಿಸಿದನು

ಇಲ್ಲಿಗೆ ಶ್ರೀ ಪದ್ಮಪುರಾಣಾಂತರ್ಗತವಾದ ಶ್ರೀ ಶಿವಗೀತೆಯಲ್ಲಿ ಜೀವಗತಿ
ನಿರೂಪಣಯೋಗವೆಂಬ ಹನ್ನೊಂದನೆಯ ಅಧ್ಯಾಯವು
ಮುಗಿದುದು

॥ ಶ್ರೀಃ ॥

# ಶ್ರೀ ಶಿವಗೀತಾ

---

## ॥ ಅಥ ದ್ವಾದಶೋಽಧ್ಯಾಯಃ ॥

॥ ಶ್ರೀರಾಮ ಉವಾಚ ॥

ಭಗವನ್ ದೇವದೇವೇಶ ನಮಸ್ತೇಽಸ್ತು ಮಹೇಶ್ವರ ।
ಉಪಾಸನವಿಧಿಂ ಬ್ರೂಹಿ ದೇಶಕಾಲಂ ಚ ತಸ್ಯ ತು ॥ ೧ ॥

ಅಂಗಾನಿ ನಿಯಮಾಂಶ್ಚೈವ ಮಯಿ ತೇಽನುಗ್ರಹೋ ಯದಿ ।

॥ ಶ್ರೀ ಮಹಾದೇವ ಉವಾಚ ॥

ಶೃಣು ರಾಮ ಪ್ರವಕ್ಷ್ಯಾಮಿ ದೇಶಕಾಲಮುಪಾಸನೇ ॥ ೨ ॥

## ಹನ್ನೆರಡನೆಯ ಅಧ್ಯಾಯ

೧-೨ ದೇವದೇವನೇ, ಮಹೇಶ್ವರನೇ, ಷಡ್ಗುಣೈಶ್ವರ್ಯಪರಿಪೂರ್ಣನೇ, ನಿನಗೆ ಅನಂತಾನಂತ ವಂದನೆಗಳು 'ಉಪಾಸನಾರತನಾಗಿ ಸುಖಹೊಂದು' ಎಂದು ಹೇಳಿದೆಯಲ್ಲವೆ? ಉಪಾಸನೆಮಾಡುವ ಕ್ರಮ ಹೇಗೆ? ಉಪಾಸನಾಕಾರ್ಯಕ್ಕೆ ತಕ್ಕ ದೇಶವಾವುದು? ಯಾವ ಕಾಲವು ಅದಕ್ಕೆ ಶ್ರೇಷ್ಠವಾದುದು? ಉಪಾಸನೆಗೆ ಬೇಕಾದ ಅಂಗಕಾರ್ಯಗಳೂ, ನಿಯಮಗಳೂ ಯಾವುವು? ಇವುಗಳನ್ನು ದಯೆಯಿಟ್ಟು ಉಪದೇಶಮಾಡು, ಎಂದು ಶ್ರೀರಾಮನು ವಿನಯದಿಂದ ಪ್ರಾರ್ಥಿಸಲು ಆಗ ಮಹಾದೇವನು ಇಂತೆಂದನು.

ಸನ್ವಾಕಾರೋಽಹಮೇವೈಕಃ ಸಚ್ಚಿದಾನಂದವಿಗ್ರಹಃ ।
ಮದಂಶೇನ ಪರಿಚ್ಛಿನ್ನಾ ದೇಹಾಸ್ಸರ್ವೇ ದಿವೌಕಸಾಂ ॥ ೩ ॥

ಯೇ ತ್ವನ್ಯದೇವತಾಭಕ್ತಾ ಯಜಂತೇ ಶ್ರದ್ಧಯಾನ್ವಿತಾಃ ।
ತೇಽಪಿ ಮಾಮೇವ ರಾಜೇಂದ್ರ ಯಜಂತ್ಯವಿಧಿಪೂರ್ವಕಂ ॥ ೪ ॥

ಯಸ್ಮಾತ್ಸರ್ವಮಿದಂ ವಿಶ್ವಂ ಮತ್ತೋ ನ ವ್ಯತಿರಿಚ್ಯತೇ ।
ಸರ್ವಕ್ರಿಯಾಣಾಂ ಭೋಕ್ತಾಹಂ ಸರ್ವಸ್ಯಾಹಂ ಫಲಪ್ರದಃ ॥ ೫ ॥

---

೩–೪ ಶ್ರೀರಾಮನೇ, ಕೇಳು ಉಪಾಸನೆಗೆ ಬೇಕಾದ ದೇಶಕಾಲಗಳ ಸ್ವರೂಪವನ್ನು ಈಗ ನಿನಗೆ ಬೋಧಿಸುವೆನು —ಸಚ್ಚಿದಾನಂದಮಯನಾದ ನಾನೊಬ್ಬನೇ ಶಾಶ್ವತನಾದವನು ನಾನೇ ನನ್ನಿಚ್ಛೆಯಂತೆ ಜಗದ್ರೂಪನಾಗಿ ನಾನಾ ಆಕಾರದಿಂದ ಪ್ರತಿಫಲಿಸುತ್ತಿರುವೆನು ವಿಷ್ಣ್ವಾದಿ ಸಕಲ ದೇವತೆಗಳೂ, ನನ್ನ ಅಂಶದಿಂದ ಉದ್ಭವಿಸಿದವರೇ ಅಂದರೆ, ನನ್ನ ಪ್ರತಿಬಿಂಬಗಳು ಚೈತನ್ಯದಿಂದ ಕೂಡಿ ಭಿನ್ನಭಿನ್ನವಾದ ಅಂತಃಕರಣವೃತ್ತಿಯುಳ್ಳವರಾಗಿ ನನಗಿಂತ ಬೇರೆಯಾಗಿ ಕಾಣುತ್ತಿರುವರು ಅಂತಹ ದೇವತೆಗಳಲ್ಲಿ ಯಾರನ್ನು ಪೂಜಿಸಿದರೂ, ಧ್ಯಾನಿಸಿದರೂ, ನನ್ನನ್ನು ಸೇವಿಸಿದಂತೆಯೇ ಸರಿ ಆದರೆ ಅವರು ಬೇರೆ ನಾಮಗಳಿಂದ ನನ್ನನ್ನು ಪೂಜಿಸಿದಂತಾಗುವುದು ಆದರೆ ಅದು ಅಷ್ಟು ವಿಧಿವತ್ತಾಗುವುದಿಲ್ಲ ಏಕೆಂದರೆ ನಾನು ಸರ್ವಾಂತರ್ಯಾಮಿ ಎಂಬುದನ್ನು ಅವರು ಮರೆತಂತೆ ಕಾಣುವುದು ಅಂತೂ ಯಾರನ್ನು ಪೂಜಿಸಿದರೂ ಅದು ನನಗೇ ಸಲ್ಲುವುದು

೫–೬ ಸರ್ವದೃಶ್ಯವಾದ ಪ್ರಪಂಚವೇ ನಾನಾಗಿರುವಾಗ ನನಗಿಂತ ಬೇರೆ ಯಾವ ವಸ್ತುವೇ ಮತ್ತೊಂದಿಲ್ಲ ಎಲ್ಲ ಕರ್ಮಗಳಿಗೂ ನಾನೇ ವಿಷಯನು ಆಯಾಕರ್ಮಗಳಿಗೆ ತಕ್ಕ ಫಲವನ್ನು ಕರುಣಿಸುವವನೂ ನಾನೇ ಗಣಪತಿ, ವಿಷ್ಣು, ಲಕ್ಷ್ಮೀ ಮುಂತಾದ ಯಾವ ಆಕಾರದಿಂದ ನನ್ನನ್ನು ಸೇವಿಸಿದರೂ, ಆಯಾ

ಯೇನಾಕಾರೇಣ ಯೇ ಮರ್ತ್ಯಾ ಮಾಮೇವೈಕಮುಪಾಸತೇ ।
ತೇನಾಕಾರೇಣ ತೇಭ್ಯೋಽಹಂ ಪ್ರಸನ್ನೋ ವಾಂಛಿತಂ ದದೇ ॥ ೬ ॥

ವಿಧಿನಾವಿಧಿನಾ ವಾಪಿ ಭಕ್ತ್ಯಾ ಯೇ ಮಾಮುಪಾಸತೇ ।
ತೇಭ್ಯಃ ಫಲಂ ಪ್ರಯಚ್ಛಾಮಿ ಪ್ರಸನ್ನೋಽಹಂ ನ ಸಂಶಯಃ ॥ ೭ ॥

ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।
ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ॥ ೮ ॥

ಸ್ವಜೀವತ್ವೇನ ಯೋ ವೇತ್ತಿ ಮಾಮೇವೈಕಮನನ್ಯಧೀಃ ।
ತಂ ನ ಸ್ಪೃಶಂತಿ ಪಾಪಾನಿ ಬ್ರಹ್ಮಹತ್ಯಾದಿಕಾನ್ಯಪಿ ॥ ೯ ॥

---

ಆಕಾರಗಳಿಂದಲೇ ನಾನು ಅವರಿಗೆ ಪ್ರತ್ಯಕ್ಷನಾಗಿ ಅವರ ಇಷ್ಟಾರ್ಥಗಳನ್ನು ಸಲ್ಲಿಸಿ ಬಿಡುವೆನು ಎಲ್ಲವಿಧಗಳಾದ ಆಕಾರಗಳನ್ನೂ ನಾನು ಪಡೆಯ ಬಲ್ಲೆನು.

೭–೮ ವಿಧಿವತ್ತಾಗಿಯೋ, ಅಥವಾ ಮನಸ್ಸುಬಂದಂತೆಯೋ, ಉಪಾಸಕರು ಭಕ್ತಿಯುತರಾಗಿ ನನ್ನನ್ನು ಆರಾಧಿಸಬಹುದು ಭಕ್ತಿಭಾವವೊಂದು ಅವರಲ್ಲಿ ಕಂಡುಬಂದರೆ ಸಾಕು ಅವರ ಸಕಲ ಇಷ್ಟಾರ್ಥಗಳನ್ನೂ ನಾನು ಪ್ರಸನ್ನನಾಗಿ ಸಲ್ಲಿಸುವೆನು ನನ್ನನ್ನು ಭಜಿಸುವವನು ದುರಾಚಾರಿಯೇ ಆಗಿರಲಿ, ಅನನ್ಯಭಾವನೆಯಿಂದ ನನ್ನನ್ನು ಧ್ಯಾನಿಸಿ ತೃಪ್ತಿಪಡಿಸುವುದಾದರೆ ಅಂತಹವನನ್ನು ನಾನು ಸತ್ಪುರುಷನೆಂದೇ ಭಾವಿಸುವೆನು ಅವನೇ ನಿಜವಾದ ಸಂಸ್ಕಾರಿಯೆಂದೂ ನಾನು ತಿಳಿಯುವೆನು

೯–೧೦ "ನೀನೇ ನಾನು ನಿನ್ನ ಪ್ರತಿಬಿಂಬ ರೂಪವೇ ನಾನು ನಿನಗೆ ಯಾವ ವಿಧವಾದ ಪರಿಚ್ಛೇದಗಳೂ ಇಲ್ಲ" ಎಂದು ಜೀವಬ್ರಹ್ಮಾಭೇದವನ್ನು ಯಾವನು ಮನಃಪೂರ್ವಕವಾಗಿ ಅರಿಯುವನೋ, ಅಂತಹ ಬ್ರಹ್ಮಜ್ಞಾನಿಯನ್ನು

ಯೇನಾಕಾರೇಣ ಯೇ ಮರ್ತ್ಯಾ ಮಾಮೇವೈಕಮುಪಾಸತೇ ।
ತೇನಾಕಾರೇಣ ತೇಭ್ಯೋಽಹಂ ಪ್ರಸನ್ನೋ ವಾಂಛಿತಂ ದದೇ ॥ ೬ ॥

ವಿಧಿನಾವಿಧಿನಾ ವಾಪಿ ಭಕ್ತ್ಯಾ ಯೇ ಮಾಮುಪಾಸತೇ ।
ತೇಭ್ಯಃ ಫಲಂ ಪ್ರಯಚ್ಛಾಮಿ ಪ್ರಸನ್ನೋಽಹಂ ನ ಸಂಶಯಃ ॥ ೭ ॥

ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।
ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ॥ ೮ ॥

ಸ್ವಜೀವತ್ವೇನ ಯೋ ವೇತ್ತಿ ಮಾಮೇವೈಕಮನನ್ಯಧೀಃ ।
ತಂ ನ ಸ್ಪೃಶಂತಿ ಪಾಪಾನಿ ಬ್ರಹ್ಮಹತ್ಯಾದಿಕಾನ್ಯಪಿ ॥ ೯ ॥

ಆಕಾರಗಳಿಂದಲೇ ನಾನು ಅವರಿಗೆ ಪ್ರತ್ಯಕ್ಷನಾಗಿ ಅವರ ಇಷ್ಟಾರ್ಥಗಳನ್ನು ಸಲ್ಲಿಸಿಬಿಡುವೆನು ಎಲ್ಲವಿಧಗಳಾದ ಆಕಾರಗಳನ್ನೂ ನಾನು ಪಡೆಯ ಬಲ್ಲೆನು.

೭–೮ ವಿಧಿವತ್ತಾಗಿಯೋ, ಅಥವಾ ಮನಸ್ಸುಬಂದಂತೆಯೋ, ಉಪಾಸಕರು ಭಕ್ತಿಯುತರಾಗಿ ನನ್ನನ್ನು ಆರಾಧಿಸಬಹುದು ಭಕ್ತಿಭಾವವೊಂದು ಅವರಲ್ಲಿ ಕಂಡುಬಂದರೆ ಸಾಕು ಅವರ ಸಕಲ ಇಷ್ಟಾರ್ಥಗಳನ್ನೂ ನಾನು ಪ್ರಸನ್ನನಾಗಿ ಸಲ್ಲಿಸುವೆನು ನನ್ನನ್ನು ಭಜಿಸುವವನು ದುರಾಚಾರಿಯೇ ಆಗಿರಲಿ, ಅನನ್ಯಭಾವನೆಯಿಂದ ನನ್ನನ್ನು ಧ್ಯಾನಿಸಿ ತೃಪ್ತಿಪಡಿಸುವುದಾದರೆ ಅಂತಹವನನ್ನು ನಾನು ಸತ್ಪುರುಷನೆಂದೇ ಭಾವಿಸುವೆನು ಅವನೇ ನಿಜವಾದ ಸಂಸ್ಕಾರಿಯೆಂದೂ ನಾನು ತಿಳಿಯುವೆನು

೯–೧೦ "ನೀನೇ ನಾನು ನಿನ್ನ ಪ್ರತಿಬಿಂಬ ರೂಪವೇ ನಾನು ನಿನಗೆ ಯಾವ ವಿಧವಾದ ಪರಿಚ್ಛೇದಗಳೂ ಇಲ್ಲ" ಎಂದು ಜೀವಬ್ರಹ್ಮಾಭೇದವನ್ನು ಯಾವನು ಮನಃಪೂರ್ವಕವಾಗಿ ಅರಿಯುವನೋ, ಅಂತಹ ಬ್ರಹ್ಮಜ್ಞಾನಿಯನ್ನು

ಕ್ರಿಯಾಯೋಗೇನ ಚೋಪಾಸಾವಿಧಿಸ್ಸಂವರ್ಗ ಉಚ್ಯತೇ ।
ಸಂವರ್ತವಾಯುಃ ಪ್ರಲಯೇ ಭೂತಾನ್ಯೇಕೋಽವಸೀದತಿ ॥ ೧೪ ॥

ಉಪಸಂಗಮ್ಯ ಬುದ್ಧ್ಯಾ ಯದಾಸನಂ ದೇವತಾತ್ಮನಾ ।
ತದುಪಾಸನಮಂತಃ ಸ್ಯಾತ್ತದ್ಬಹಿಸ್ಸಂಪದಾದಯಃ ॥ ೧೫ ॥

ಜ್ಞಾನಾಂತರಾನಂತರಿತಸಜಾತಿಜ್ಞಾನಸಂತತೇಃ ।
ಸಂಪನ್ನದೇವತಾತ್ಮತ್ವಮುಪಾಸನಮುದೀರಿತಂ ॥ ೧೬ ॥

ಸಂಪದಾದಿಷು ಬಾಹ್ಯೇಷು ದೃಢಬುದ್ಧಿರುಪಾಸನಾ ।
ಉಪಾಸನಮಿತಿ ಪ್ರೋಕ್ತಂ ತದಂಗಾನಿ ಬ್ರುವೇ ಶೃಣು ॥ ೧೭ ॥

ವಶಮಾಡಿಕೊಳ್ಳುವಂತೆ ಸಂವರ್ಗರೂಪವಾದ ಉಪಾಸನೆಯು ಸರ್ವಭೂತವನ್ನೂ ವಶೀಕರಿಸಿಕೊಳ್ಳುವುದು ಆವರೆ ಗುರುಮುಖೇನ ಉಪಲಬ್ಧವಾದ ಜ್ಞಾನವನ್ನು ಹೊಂದಿ, ಪರಬ್ರಹ್ಮ ವಸ್ತುವಿನ ಅಭೇದವನ್ನು ತನ್ನಲ್ಲಿ ತಿಳಿಯುತ್ತಾ, ದೇವತಾ ಸಮೀಪದಲ್ಲಿ ಕುಳಿತು, ಪೂಜಾರ್ಥವಾಗಿ ತನ್ನ ಮನಸ್ಸನ್ನು ಸ್ಥಿರಪಡಿಸಿಕೊಳ್ಳುವುದೇ ಆಂತರಂಗಿಕವಾದ ಉಪಾಸನೆಗಳು ಮೇಲೆ ಹೇಳಿದ ನಾಲ್ಕು ವಿಧಗಳಾದ ಉಪಾಸನೆಗಳೂ ಬಾಹ್ಯವಾದವುಗಳು

೧೬–೧೭ ನಿಜವಾಗಿಯೂ ಸ್ಥಿರಮನಸ್ಸಿನಿಂದ ಕುಳಿತು ಕಾಮಿನೀಕಾಂಚನಾದಿಗತವಾದ ಜ್ಞಾನವನ್ನು 'ಅಹಂ ಬ್ರಹ್ಮಾಸ್ಮಿ' ಎಂಬ ಜ್ಞಾನಕ್ಕೆ ಬೆರೆಸದ, ಶುದ್ಧಜ್ಞಾನಸಂತತಿಯಿಂದ ಇಷ್ಟದೇವತಾತ್ಮತ್ವವನ್ನು ಅರಿಯುವುದೇ ಶುದ್ಧವಾದ ಉಪಾಸನೆ ಹಿಂದೆ ಹೇಳಿದ ಸಂಪದಾದಿರೂಪಗಳಾದ ಉಪಾಸನೆಗಳಾದರೋ ಚಂಚಲ ಬುದ್ಧಿಯನ್ನು ದೃಢಪಡಿಸುವುವು ಈಗ ಆ ಉಪಾಸನಾವಿಧಿಗಳಿಗೆ ಅಂಗವಿಧಿಗಳನ್ನು ತಿಳಿಸುವೆನು. ಸಾವಧಾನದಿಂದ ಆಲಿಸು ತೀರ್ಥಕ್ಷೇತ್ರಯಾತ್ರೆ ಮಾಡಬೇಕೆಂಬ

**ತೀರ್ಥಕ್ಷೇತ್ರಾದಿಗಮನಶ್ರದ್ಧಾಂ ತತ್ರ ಪರಿತ್ಯಜೇತ್ ।**
**ಸ್ವಚಿತ್ತೈಕಾಗ್ರತಾ ಯತ್ರ ತತ್ರಾಸೀತ ಸುಖಂ ದ್ವಿಜಃ ॥ ೧೮ ॥**

**ಕಂಬಳೇ ಮೃದುತಲ್ಪೇ ವಾ ವ್ಯಾಘ್ರಚರ್ಮಣಿ ವಾ ಸ್ಥಿತಃ ।**
**ವಿವಿಕ್ತದೇಶೇ ನಿಯತಃ ಸಮಗ್ರೀವಶಿರಸ್ತನುಃ ॥ ೧೯ ॥**

**ಅತ್ಯಾಶ್ರಮಸ್ಥಸ್ಸಕಲಾನೀಂದ್ರಿಯಾಣಿ ನಿರುಧ್ಯ ಚ ।**
**ಭಕ್ತ್ಯಾಥ ಸ್ವಗುರುಂ ನತ್ವಾ ಯೋಗಂ ವಿದ್ವಾನ್ಪ್ರಯೋಜಯೇತ್ ॥ ೨೦ ॥**

**ಯಸ್ತ್ವವಿಜ್ಞಾನವಾನ್ಭವತ್ಯಯುಕ್ತಮನಸಾ ಸಹ ।**
**ತಸ್ಯೇಂದ್ರಿಯಾಣ್ಯವಶ್ಯಾನಿ ದುಷ್ಟಾಶ್ವಾ ಇವ ಸಾರಥೇಃ ॥ ೨೧ ॥**

ಚಪಲತೆಯನ್ನು ಮೊದಲು ದೂರಮಾಡಬೇಕು ತನ್ನ ಮನಶ್ಶುದ್ಧಿಯು ಯಾವ ಸ್ಥಳದಲ್ಲಿ ಆಗುವುದೋ, ಅಂತಹ ಸ್ಥಳದಲ್ಲಿಯೇ ಸ್ಥಿರವಾಗಿ ನಿಲ್ಲಬೇಕು

೧೯–೨೧ ಮೃದುವಾದ ರತ್ನಗಂಬಳಿಯ ಮೇಲಾಗಲಿ, ಮೃದುವಾದ ಹಾಸಿಗೆಯ ಮೇಲಾಗಲಿ, ವ್ಯಾಘ್ರಾಜಿನದ ಮೇಲಾಗಲಿ ಕುಳಿತು, ಪ್ರಾಕೃತಜನರಹಿತವಾದ ವಿಜನಸ್ಥಳದಲ್ಲಿ, ನೇರವಾಗಿ ಕತ್ತು, ತಲೆ, ದೇಹ ಇವುಗಳನ್ನು ನಿಲ್ಲಿಸಿ ಅತ್ಯಾಶ್ರಮಸ್ಥನಾಗಿ ಅಂದರೆ ಭಸ್ಮಧಾರಣೆಮಾಡಿಕೊಂಡು ಇಂದ್ರಿಯ ನಿಗ್ರಹಮಾಡಬೇಕು (ಅಗ್ನಿರಿತ್ಯಾದಿಭಿರ್ಮಂತ್ರೈರ್ಭಸ್ಮನೋದ್ಧೂಲನಂ ತಥಾ । ತ್ರಿಪುಂಡ್ರಧಾರಣಂ ಚಾಪಿ ವದಂತ್ಯತ್ಯಾಶ್ರಮಂ ಬುಧಾಃ । ಎಂಬ ಸ್ಕಾಂದಪುರಾಣದ ವಚನದಂತೆ ಭಸ್ಮತ್ರಿಪುಂಡ್ರಧಾರಣೆಯೇ ಅತ್ಯಾಶ್ರಮವೆನಿಸುವುದು ) ಭಕ್ತಿಯುಕ್ತನಾಗಿ ತನ್ನ ಗುರುವನ್ನು ಧ್ಯಾನಿಸಿ, ಚಿತ್ತವೃತ್ತಿ ನಿರೋಧಕ್ಕೆ ಪ್ರಯೋಜಕವಾದ ಪ್ರಾಣವಾಯುವನ್ನು ತಡೆಯುವ ಅಭ್ಯಾಸ ಮಾಡಬೇಕು ಯಾರು ಚಂಚಲವಾದ ಮನಸ್ಸಿನಿಂದ ಕೂಡಿ ಅವಿವೇಕಿಯೆನಿಸುವನೋ, ಅವನ ವಶಕ್ಕೆ ಇಂದ್ರಿಯಗಳು ಸಿಕ್ಕಲಾರವು ದುಷ್ಟ ಕುದುರೆಗಳು ಸಾರಥಿಗೆ ಬಗ್ಗದಿರುವಂತೆ, ಇಂದ್ರಿಯಗಳು ಮಾನವನ ಅಧೀನವಲ್ಲಿ ಸಾಮಾನ್ಯವಾಗಿ ನಿಲ್ಲಲಾರವು

ವಿಜ್ಞಾನೀ ಯಸ್ತು ಭವತಿ ಯುಕ್ತೇನ ಮನಸಾ ಸಹ ।
ತಸ್ಯೇಂದ್ರಿಯಾಣಿ ವಶ್ಯಾನಿ ಸದಶ್ವಾ ಇವ ಸಾರಥೇಃ ॥ ೨೨ ॥

ಯಸ್ತ್ವವಿಜ್ಞಾನವಾನ್ ಭವತ್ಯಮನಸ್ಕಃ ಸದಾಶುಚಿಃ ।
ನ ಸ ತತ್ಪದಮಾಪ್ನೋತಿ ಸಂಸಾರಮಧಿಗಚ್ಛತಿ ॥ ೨೩ ॥

ವಿಜ್ಞಾನೀ ಯಸ್ತು ಭವತಿ ಸಮನಸ್ಕಃ ಸದಾ ಶುಚಿಃ ।
ಸ ತು ತತ್ಪದಮಾಪ್ನೋತಿ ಯಸ್ಮಾದ್ಭೂಯೋ ನ ಜಾಯತೇ ॥ ೨೪ ॥

ವಿಜ್ಞಾನಸಾರಥಿರ್ಯಸ್ತು ಮನಃಪ್ರಗ್ರಹ ಏವ ಚ ।
ಸೋಽಧ್ವನಃ ಪಾರಮಾಪ್ನೋತಿ ಮುಕ್ತ್ಯೈವ ಪರಮಂ ಪದಂ ॥ ೨೫ ॥

ಹೃತ್ಪುಂಡರೀಕಂ ವಿರಜಂ ವಿಶುದ್ಧಂ ವಿಶದಂ ತಥಾ ।
ವಿಶೋಕಂ ಚ ವಿಚಿಂತ್ಯಾತ್ರ ಧ್ಯಾಯೇನ್ಮಾಂ ಪರಮೇಶ್ವರಂ ॥ ೨೬ ॥

೨೨–೨೪ ದೃಢಮನಸ್ಕನಾಗಿ ಗುರುಮುಖದಿಂದ ಬ್ರಹ್ಮಜ್ಞಾನವನ್ನು ಪಡೆದು ಸೋಽಹಂಭಾವದಿಂದಿರುವ ವಿಜ್ಞಾನಿಗೆ, ಒಳ್ಳೆಯ ಕುದುರೆಗಳು ಸಾರಥಿಗೆ ಸಹಾಯ ಮಾಡುವಂತೆ, ಎಲ್ಲ ಇಂದ್ರಿಯಗಳೂ ಸ್ವಾಧೀನವಾಗಿ ಬ್ರಹ್ಮಜ್ಞಾನಕ್ಕೆ ಸಹಕಾರಿಗಳಾಗುವುವು ಯಾರು ವಿವೇಕವನ್ನು ಪಡೆಯದೆ ಚಂಚಲ ಮನಸ್ಸುಳ್ಳವರೆನಿಸಿ, ಬಾಹ್ಯ ಮತ್ತು ಆಭ್ಯಂತರಿಕವಾದ ಶುಚಿಯನ್ನೂ ಪಡೆಯದೆ ಇರುವರೋ, ಅಂತಹವರು ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯಲಾರರು ಸಾಂಸಾರಿಕವಾದ ಸಕಲ ದುಃಖಗಳಿಗೂ ಅವರು ಭಾಗಿಗಳಾಗುವರು ಯಾರು ಸದಾ ಶುಚಿರ್ಭೂತರಾಗಿ ದೃಢಮನಸ್ಸಿನಿಂದ ವಿಜ್ಞಾನಿಯೆನಿಸುವರೋ, ಅವರೇ ಮುಕ್ತಿಪದವಿಯನ್ನೇರಲು ಸಮರ್ಥರು ಅಂತಹವರಿಗೆ ಪುನರ್ಜನ್ಮವೇ ಇರುವುದಿಲ್ಲ

೨೫–೨೬ ವಿವೇಕವನ್ನೇ ಸಾರಥಿಯನ್ನಾಗಿಯೂ, ಮನಸ್ಸನ್ನೇ ಹಗ್ಗವನ್ನಾಗಿಯೂ ಹೊಂದಿ, ಇಂದ್ರಿಯಗಳೆಂಬ ಕುದುರೆಗಳನ್ನು ಎಳೆದು ಬಿಗಿಹಿಡಿದು, ಶರೀರವೆಂಬ ರಥದಲ್ಲಿ ಪ್ರಯಾಣಮಾಡುವ ಜೀವನು, ಅಪಾರವಾದ ಸಂಸಾರ

ಅಚಿಂತ್ಯರೂಪಮವ್ಯಕ್ತಮನಂತಮಮೃತಂ ಶಿವಂ ।
ಆದಿಮಧ್ಯಾಂತರಹಿತಂ ಪ್ರಶಾಂತಂ ಬ್ರಹ್ಮಕಾರಣಂ ॥ ೨೭ ॥

ಏಕಂ ವಿಭುಂ ಚಿದಾನಂದಮರೂಪಮಜಮದ್ಭುತಂ ।
ಶುದ್ಧಸ್ಫಟಿಕಸಂಕಾಶಮುಮಾದೇಹಾರ್ಧಧಾರಿಣಂ ॥ ೨೮ ॥

ವ್ಯಾಘ್ರಚರ್ಮಾಂಬರಧರಂ ನೀಲಕಂಠಂ ತ್ರಿಲೋಚನಂ ।
ಜಟಾಧರಂ ಚಂದ್ರಮೌಳಿಂ ನಾಗಯಜ್ಞೋಪವೀತಿನಂ ॥ ೨೯ ॥

ವ್ಯಾಘ್ರಚರ್ಮೋತ್ತರೀಯಂ ಚ ವರೇಣ್ಯಮಭಯಪ್ರದಂ ।
ಪರಾಭ್ಯಾಮೂರ್ಧ್ವಹಸ್ತಾಭ್ಯಾಂ ಬಿಭ್ರಾಣಂ ಪರಶುಂ ಮೃಗಂ ॥ ೩೦ ॥

ಮಾರ್ಗವನ್ನು ಸುಲಭವಾಗಿ ದಾಟಿ, ಪರಮಪದವನ್ನು ಅಂದರೆ ಬ್ರಹ್ಮಸಾಯುಜ್ಯವನ್ನು ಪಡೆಯುವನು ಹೀಗೆಂಬುದರಲ್ಲಿ ಸಂಶಯವಿಲ್ಲ ಪರಮಾತ್ಮನನ್ನು ಮನಸಾ ಧ್ಯಾನಿಸುವಾಗ ಈ ಭಾವನೆಯನ್ನು ಪಡೆದಿರಬೇಕು ''ಪರಬ್ರಹ್ಮನು ಸರ್ವರ ಹೃದಯಕಮಲದಲ್ಲಿ ಅಡಗಿರುವವನು ರಜೋಗುಣ ಕಾರ್ಯರಹಿತನು ಸತ್ವಗುಣಕಾರ್ಯವಾದ ಶಮಾದಿ ಸುಗುಣಯುಕ್ತನು ನಿರ್ಮಲನು ತಮೋಗುಣ ಕಾರ್ಯವಾದ ಶೋಕರಹಿತನಾದವನು ಮಾಯಾ ಲೀಲಾವತಾರಿಯು ಊಹೆಯಿಂದ ಸ್ವರೂಪವನ್ನು ತಿಳಿಯಲಾಗದವನು ಅಪರಿಚ್ಛಿನ್ನನು ಆದ್ಯಂತರಹಿತನು ಕ್ರೋಧಾದಿಗಳಿಲ್ಲದವನು ನಾಶವಿಲ್ಲದವನು ಕಲ್ಯಾಣರೂಪನು ವಿವರ್ತಕಾರ್ಯಕ್ಕೆ ಕಾರಣನನಿಸಿದವನು

೨೮—೩೦ ದ್ವಿತೀಯವಸ್ತುರಹಿತನು ಜ್ಞಾನಸುಖ ಸ್ವರೂಪನು ರೂಪರಹಿತನು ಉತ್ಪತ್ತಿ ಶೂನ್ಯನು ಆಶ್ಚರ್ಯಕರ ರೂಪುಳ್ಳವನು ಉಪಾಧಿವಶದಿಂದ ಸ್ಫಟಿಕಮಣಿಯಂತೆ ಶುಭ್ರವರ್ಣದಿಂದ ರಂಜಿಸುವವನು ಪಾರ್ವತಿಯನ್ನೇ ಅರ್ಧಭಾಗದಲ್ಲಿ ಧರಿಸಿದವನು ವ್ಯಾಘ್ರಚರ್ಮವನ್ನು ವಸ್ತ್ರವನ್ನಾಗಿ ಮಾಡಿಕೊಂಡಿರುವವನು ನೀಲವರ್ಣದ ಕಂಠದಿಂದ ವಿರಾಜಿಸುವವನು ಲೋಚನತ್ರಯ ವಿಶಿಷ್ಟನು ಜಟಾಧಾರಿಯು ಚಂದ್ರಮೌಳಿಯು ಸರ್ಪವನ್ನೇ ಯಜ್ಞೋಪವೀತವನ್ನಾಗಿ ಹೊಂದಿರುವವನು ವ್ಯಾಘ್ರಾಜಿನವನ್ನು ಹೊದ್ದಿರುವವನು ಶ್ರೇಷ್ಠನು ಧೈರ್ಯ

ಕೋಟಿಮಧ್ಯಾಹ್ನಸೂರ್ಯಾಭಂ ಚಂದ್ರಕೋಟಿಸುಶೀತಲಂ ।
ಚಂದ್ರಸೂರ್ಯಾಗ್ನಿನಯನಂ ಸ್ಮೇರವಕ್ತ್ರಸರೋರುಹಂ ॥ ೩೧ ॥

ಭೂತಿಭೂಷಿತಸರ್ವಾಂಗಂ ಸರ್ವಾಭರಣಭೂಷಿತಂ ।
ಏವಮಾತ್ಮಾರಣಿಂ ಕೃತ್ವಾ ಪ್ರಣವಂ ಚೋತ್ತರಾರಣಿಂ ॥ ೩೨ ॥

ಜ್ಞಾನನಿರ್ಮಥನಾಭ್ಯಾಸಾತ್ಸಾಕ್ಷಾತ್ಪಶ್ಯತಿ ಮಾಂ ಜನಃ ।
ವೇದವಾಕ್ಯೈರ್ನ ಲಭ್ಯೋಽಹಂ ನ ಶಾಸ್ತ್ರೈರ್ನಾಪಿ ಚೇತಸಾ ॥ ೩೩ ॥

ಧ್ಯಾನೇನ ವೃಣುತೇ ಯೋ ಮಾಂ ಸರ್ವದಾಹಂ ವೃಣೋಮಿ ತಂ ।
ನಾವಿರತೋ ದುಶ್ಚರಿತಾನ್ನಾಶಾಂತೋ ನಾಸಮಾಹಿತಃ ॥ ೩೪ ॥

ವನ್ನು ಕೊಡುವವನು ತನ್ನ ಮೇಲ್ಭಾಗದ ಎರಡು ಕೈಗಳಿಂದಲೂ ಪರಶು ಮತ್ತು ಜಿಂಕೆ ಇವುಗಳನ್ನು ಧರಿಸಿರುವವನು

೩೧–೩೩ "ಕೋಟಿಸಂಖ್ಯೆಯ ಮಧ್ಯಾಹ್ನಕಾಲದ ಸೂರ್ಯನಂತೆ ಹೊಳೆಯುವವನು. ಆದರೆ ಕೋಟಿ ಚಂದ್ರರಂತೆ ತಂಪಾಗಿರುವವನು ಚಂದ್ರ, ಸೂರ್ಯ, ಅಗ್ನಿ ಇವರನ್ನೇ ನೇತ್ರಗಳನ್ನಾಗಿ ಉಳ್ಳವನು ಮನೋಹರವಾದ ನಗುಮುಖವುಳ್ಳವನು. ನಾನಾವಿಧಗಳಾದ ಆಭರಣಗಳಿಂದ ಅಲಂಕೃತನಾಗಿರುವನು" ಹೀಗೆ ಎರಡು ಒನ್ನಿಮರದ ಕೊಂಟುಗಳನ್ನು ಉಜ್ಜುವುದರಿಂದ ಅಗ್ನಿಯು ಹುಟ್ಟುವಂತೆ ಆತ್ಮ ಮತ್ತು ಪ್ರಣವ ಇವುಗಳ ಧ್ಯಾನ ಮತ್ತು ಜಪಗಳಿಂದ ಆತ್ಮಜ್ಞಾನವುದಯಿಸುವುದು ಆತ್ಮಜ್ಞಾನವು ಲಭಿಸಿದೊಡನೆಯೇ ನನ್ನ ಸಾಕ್ಷಾತ್ಕಾರವು ಸುಲಭವಾಗಿ ಆಗುವುದು ವೇದವಾಕ್ಯಗಳಿಂದಾಗಲಿ, ಶಾಸ್ತ್ರಾಧ್ಯಯನಗಳಿಂದಾಗಲಿ ನನ್ನನ್ನು ಸಾಕ್ಷಾತ್ಕರಿಸಿ ಕೊಳ್ಳುವುದು ಅಷ್ಟು ಸುಲಭವಲ್ಲ

೩೪–೩೬ ಧ್ಯಾನದಿಂದ ನನ್ನನ್ನು ತೃಪ್ತಿಪಡಿಸಿದವರಿಗೆ ಸಕಲ ಇಷ್ಟಾರ್ಥಗಳನ್ನೂ ನಾನು ಕರುಣಿಸುವೆನು ಪಾಪಕಾರ್ಯಗಳಲ್ಲಿ ಆಸಕ್ತನಾದವನಿಗೂ ಶಾಂತ ಮನಸ್ಸಿಲ್ಲದವನಿಗೂ, ಸ್ಥಿರಬುದ್ಧಿಯಿಲ್ಲದವನಿಗೂ ನಾನು ಎಂದೂ ಗೋಚರಿಸಲಾರೆನು ಅಶಾಂತ ಮನಸ್ಕನಿಗೆ ಜ್ಞಾನವು ಲಭಿಸಲಾರದು ಜ್ಞಾನವಿಹೀನನಿಗೆ ಮುಕ್ತಿಯಿಲ್ಲ ಜಾಗ್ರತ್ಸ್ವಪ್ನಸುಷುಪ್ತ್ಯಾದಿ ತ್ರಿವಿಧವಾದ ಅವಸ್ಥೆಗಳಲ್ಲಿಯೂ ಸಾಕ್ಷಿ

ನಾಶಾಂತಮಾನಸೋ ವಾಪಿ ಪ್ರಜ್ಞಾನೇನ ಲಭೇತ ಮಾಂ ।
ಜಾಗ್ರತ್ಸ್ವಪ್ನಸುಷುಪ್ತ್ಯಾದಿಪ್ರಪಂಚೋ ಯಃ ಪ್ರಕಾಶತೇ ॥ ೩೫ ॥

ತದ್ಬ್ರಹ್ಮಾಹಮಿತಿ ಜ್ಞಾತ್ವಾ ಸರ್ವಬಂಧೈಃ ಪ್ರಮುಚ್ಯತೇ ।
ತ್ರಿಷು ಧಾಮಸು ಯದ್ಭೋಗ್ಯಂ ಭೋಕ್ತಾ ಭೋಗಶ್ಚ ಯದ್ಭವೇತ್
ತೇಭ್ಯೋ ವಿಲಕ್ಷಣಃ ಸಾಕ್ಷೀ ಚಿನ್ಮಾತ್ರೋಽಹಂ ಸದಾಶಿವಃ ॥ ೩೬ ॥

ಏಕೋ ದೇವಃ ಸರ್ವಭೂತೇಷು ಗೂಢಃ
ಸರ್ವವ್ಯಾಪೀ ಸರ್ವಭೂತಾಂತರಾತ್ಮಾ ।
ಸರ್ವಾಧ್ಯಕ್ಷಃ ಸರ್ವಭೂತಾಧಿವಾಸಃ
ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ ॥ ೩೭ ॥

ರೂಪದಿಂದ ಯಾವನು ಪ್ರಕಾಶಿಸುವನೋ, ಪ್ರಪಂಚಾತ್ಮಕವಾಗಿ ಯಾರು ವಿವರ್ತನಾಗಿರುವನೋ, ಅವನೇ ಪರಬ್ರಹ್ಮನು ಅಂತಹ ಪರಬ್ರಹ್ಮನೇ ನಾನು ಎಂದರಿಯುವವನಿಗೆ ಪ್ರಪಂಚದ ಹವ್ಯಾಸವೊಂದೂ ಇರುವುದಿಲ್ಲ ಭೋಗಪ್ರದನಾದ ಈಶ್ವರನೂ ಭೋಗ್ಯವಾದ ಪ್ರಪಂಚವೂ, ಭೋಕ್ತೃವಾದ ಜೀವವೂ ಬೇರೆ ಬೇರೆಯಲ್ಲ ಬ್ರಹ್ಮಜ್ಞಾನವಿಲ್ಲದವನಿಗೆ ಇವು ಬೇರೆ ಬೇರೆಯಾಗಿ ಕಂಡರೂ, ಜಾಗ್ರತ್ಸ್ವಪ್ನಸುಷುಪ್ತ್ಯವಸ್ಥೆಗಳಲ್ಲಿ ನಾನಾರೀತಿಯಿಂದ ಜಗತ್ತು ಲಭಿಸಿದರೂ, ಅಲ್ಲಿ ಆತ್ಮನು ಸಾಕ್ಷೀಭೂತನಾಗಿರುವನು ಜ್ಞಾನಸ್ವರೂಪನಾದ ಆತ್ಮನೇ ನಾನು ಹೀಗೆಂದು ಯಾರು ಭಾವಿಸಿರುವರೋ, ಅವರೇ ಸದಾಶಿವಸ್ವರೂಪರು ಅವರಿಗೆ ಯಾತ್ವಾವ ಬಂಧನಾದಿಗಳೂ ಇರುವುದಿಲ್ಲ

೩೭ ಸಜಾತೀಯ ದ್ವಿತೀಯ ವಸ್ತುರಹಿತನಾದ ಪರಮಾತ್ಮನೊಬ್ಬನೇ ನಿಜವಾದ ದೇವನು ಅವನೇ ಉಪಾಧಿಭೇದದಿಂದ ನಾನಾ ಭೂತಗಳಲ್ಲಿ ಸೂಕ್ಷ್ಮರೂಪದಿಂದಲೂ, ಸ್ಥೂಲರೂಪದಿಂದಲೂ ತೋರಿಬರುವನು ಆಕಾಶದಂತೆ ಸರ್ವವ್ಯಾಪಿಯಾದವನು ಅವನು ಸಮಸ್ತ ಪ್ರಾಣಿಗಳ ಹೃದಯಾಂತರ್ವರ್ತಿಯು ಜಾಗ್ರದಾದ್ಯವಸ್ಥೆಗಳಲ್ಲಿ ಸಾಕ್ಷೀರೂಪದಿಂದಿರುವವನು ಸೋಪಾಧಿಕನಾಗಿ ಸಗುಣನೆನಿಸಿದರೂ, ಪರಮಾರ್ಥತಃ ಪರಮಾತ್ಮನು ನಿರ್ಗುಣನು

ಏಕೋ ವಶೀ ಸರ್ವಭೂತಾಂತರಾತ್ಮಾ-
ಪ್ಯೇಕಂ ಬೀಜಂ ಬಹುಧಾ ಯಃ ಕರೋತಿ ।
ತಂ ಮಾಂ ನಿತ್ಯಂ ಯೇಽನುಪಶ್ಯಂತಿ ಧೀರಾ-
ಸ್ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಂ || ೩೬

ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋ
ರೂಪಂ ರೂಪಂ ಪ್ರತಿರೂಪೋ ಬಭೂವ ।
ಏಕಸ್ತಥಾ ಸರ್ವಭೂತಾಂತರಾತ್ಮಾ
ನ ಲಿಪ್ಯತೇ ಲೋಕದುಃಖೇನ ಬಾಹ್ಯಃ || ೩೭

೩೬ ಪರಮಾತ್ಮನು ಸೃಷ್ಟಿಗಿಂತಲೂ ಮೊದಲಿದ್ದವನು ಸೃಷ್ಟಿವ ಸಕಲ ವಸ್ತುಗಳಲ್ಲಿದ್ದರೂ, ಮೊದಲು ಮಾಯಾರೂಪವಾದ ಶಕ್ತಿಯಿಂದ ಸೃಷ್ಟಿ ಕಾರಣನೆನಿಸಿದವನು ಆದರೆ ಸಕಲಕ್ಕೂ ಕಾರಣನೆನಿಸಿದರೂ, ಯಾವ ವಿಧವ ಕರ್ತೃತ್ವಾದಿ ಶಕ್ತಿಗಳೂ ಶುದ್ಧಪರಬ್ರಹ್ಮವಸ್ತುವಿನಲ್ಲಿಲ್ಲ ಎಂಬ ತತ್ತ್ವವ ಶಾಸ್ತ್ರಾಭ್ಯಾಸಬಲದಿಂದಲೂ, ಗುರುವಾಕ್ಯೋಪದೇಶದಿಂದಲೂ ಯಾರು ಅರಿ ವರೋ, ಅಂತಹವರಿಗೆ ಮಾತ್ರವೇ ಶಾಶ್ವತವಾದ ಮುಕ್ತಿಯು ಲಭಿಸುವು ಭೇದಜ್ಞಾನಿಗಳಿಗೆ ಎಂದಿಗೂ ಮೋಕ್ಷವು ದೊರೆಯಲಾರದು

೩೭ ಅಗ್ನಿಯು ತನಗೆ ಉಪಾಧಿಭೂತವಾದ ಕಬ್ಬಿಣದ ನಾನಾ ಆಕಾ ವಸ್ತುಗಳೊಡನೆ ಸಂಯೋಗವಾಗಿ, ಆಯಾ ಆಕಾರವನ್ನೇ ಪಡೆದರೂ, ಆ ವಸ ಗಳಿಗೆ ಬೀಳುವ ಚಮ್ಮಟಿಗೆಯ ಏಟು ಹೇಗೆ ಅಗ್ನಿಗೆ ತಟ್ಟಲಾರದೋ, ಅದೇ ರಿ ಶುದ್ಧ ಬ್ರಹ್ಮವಸ್ತುವು ನಾನಾ ವಿಧವಾದ ಉಪಾಧಿಭೇದದಿಂದ ಆಕಾರಾದಿಗಳನ ಪಡೆದು ಭಿನ್ನಭಿನ್ನವಾಗಿ ಕಂಡುಬಂದರೂ, ಲೌಕಿಕವಾದ ದುಃಖಕ್ಕೆ ಮಾ ಅದು ಎಂದೂ ಭಾಗಿಯಾಗುವುದಿಲ್ಲ

ವೇದಾಹಮೇತಂ ಪುರುಷಂ ಮಹಾಂತ-
ಮಾದಿತ್ಯವರ್ಣಂ ತಮಸಃ ಪರಸ್ತಾತ್ ।
ಸ ಏವ ವಿದ್ವಾನಮೃತೋಽತ್ರ ಭೂಯಾ-
ನ್ನಾನ್ಯಸ್ತು ಪಂಥಾ ಅಯನಾಯ ವಿದ್ಯತೇ ॥ ೪೦ ॥

ಹಿರಣ್ಯಗರ್ಭಂ ವಿದಧಾಮಿ ಪೂರ್ವಂ
ವೇದಾಂಶ್ಚ ಯಸ್ಮೈ ಪ್ರಹಿಣೋಮಿ ಯೋಽಹಂ ।
ತಂ ದೇವಮೀಡ್ಯಂ ಪುರುಷಂ ಪುರಾಣಂ
ನಿಶ್ಚಿತ್ಯ ಮಾಂ ಮೃತ್ಯುಮುಖಾತ್ಪ್ರಮುಚ್ಯತೇ ॥ ೪೧ ॥

೪೦ ಯಾವ ಮನುಷ್ಯನು ನನ್ನನ್ನು ಸರ್ವಾಂತರ್ಯಾಮಿಯೆನ್ನಾಗಿಯೂ, ಸರ್ವವ್ಯಾಪಕನನ್ನಾಗಿಯೂ, ಸೂರ್ಯನಂತೆ ಸ್ವಪ್ರಕಾಶಕನೆಂಬುದಾಗಿಯೂ ಅರಿಯುವನೋ, ಅವನೇ ಜ್ಞಾನಿಯು. ಅವನೇ ಮುಕ್ತನಾಗುವವನು. ಮೋಕ್ಷಮಾರ್ಗಾವಲಂಬನೆಗೆ ಈ ಜ್ಞಾನಕ್ಕಿಂತ ಬೇರೆಯಾದ ಸುಲಭವಾರಿಯೇ ಕಾಣಲಾರದು.

೪೧ ಪ್ರಪಂಚದ ಎಲ್ಲ ವಸ್ತು ಸೃಷ್ಟಿಗೂ ಮೊದಲು ಹಿರಣ್ಯಗರ್ಭನನ್ನು ಸೃಷ್ಟಿಮಾಡಿದವನು ನಾನು. ಅವನಿಗೆ ನಾಲ್ಕು ವೇದಗಳನ್ನೂ ಕರುಣಿಸಿ ಕೊಟ್ಟವನು ನಾನು. ಅಂತಹ ಸರ್ವಪೂಜ್ಯನೂ, ಅನಾದಿಪುರುಷನೂ, ನಾಶರಹಿತನೂ ಆದ ನನ್ನ ಸ್ವರೂಪವನ್ನು ಯಾವನು ಸರಿಯಾಗಿ ಅರಿಯುವನೋ, ಅವನೇ ಮೃತ್ಯುವಿಗೆ ಅಧೀನನಾಗದವನು. ಅಂದರೆ ಅವನು ಮುಕ್ತಿಯನ್ನು ಪಡೆದು ಮತ್ತೆ ಸಾಂಸಾರಿಕವಾದ ಯಾವ ವ್ಯಥೆಗೂ ಒಳಪಡಲಾರನು.

ಏವಂ ಶಾಂತ್ಯಾದಿಯುಕ್ತಃ ಸನ್ ವೇತ್ತಿ ಮಾಂ ತತ್ತ್ವತಸ್ತು ಯಃ ।
ನಿರ್ಮುಕ್ತದುಃಖಸಂತಾನಃ ಸೋಂತೇ ಮಯ್ಯೇವ ಲೀಯತೇ ॥ ೪೨ ॥

ಇತಿ ಶ್ರೀಪದ್ಮಪುರಾಣೇ ಶ್ರೀಶಿವಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಶಿವರಾಘವಸಂವಾದೇ ಉಪಾಸನಾವಿಧಿರ್ನಾಮ
॥ ದ್ವಾದಶೋಽಧ್ಯಾಯಃ ॥

೪೨ ಹೀಗೆ ಆತ್ಮಸ್ವರೂಪವನ್ನು ತಿಳಿದು, ಯಾವನು ಶಮದಮಾದಿಗಳಿಂದ ಪರಿಪೂರ್ಣನಾಗಿ ಆತ್ಮಧ್ಯಾನಮಾಡುವನೋ, ಅಂತಹವನು ಸಕಲ ದುಃಖಗಳಿಗೂ ದೂರನೆನಿಸಿ, ಉಪಾಧಿನಾಶದಿಂದ ಪರಬ್ರಹ್ಮಸ್ವರೂಪನಾಗುವನು ಇದರಲ್ಲಿ ಸಂಶಯವಿಲ್ಲ ಎಂದು ಪರಮೇಶ್ವರನು ಶ್ರೀರಾಮನಿಗೆ ಉಪಾಸನಾವಿಧಿಯನ್ನು ವಿವರವಾಗಿ ತಿಳಿಯಪಡಿಸಿದನು

ಇಲ್ಲಿಗೆ ಶ್ರೀ ಪದ್ಮಪುರಾಣದ ಶಿವಗೀತೆಯಲ್ಲಿ ಉಪಾಸನಾವಿಧಿಯೆಂಬ
ಹನ್ನೆರಡನೆಯ ಅಧ್ಯಾಯವು ಮುಗಿದುದು



|| ಶ್ರೀಃ ||

# ಶ್ರೀ ಶಿವಗೀತಾ

---

## || ಅಥ ತ್ರಯೋದಶೋಽಧ್ಯಾಯಃ ||

|| ಸೂತ ಉವಾಚ ||

ಏವಂ ಶ್ರುತ್ವಾ ಕೌಸಲೇಯಸ್ತುಷ್ಟೋ ಮತಿಮತಾಂ ವರಃ ।
ಪಪ್ರಚ್ಛ ಗಿರಿಜಾಕಾಂತಂ ಸುಭಗಂ ಮುಕ್ತಿಲಕ್ಷಣಂ || ೧ ||

|| ಶ್ರೀರಾಮ ಉವಾಚ ||

ಭಗವನ್ ಕರುಣಾಕೃಷ್ಟಹೃದಯ ತ್ವಂ ಪ್ರಸೀದ ಮೇ ।
ಸ್ವರೂಪಂ ಲಕ್ಷಣಂ ಮುಕ್ತೇಃ ಪ್ರಬ್ರೂಹಿ ಪರಮೇಶ್ವರ || ೨ ||

|| ಶ್ರೀ ಮಹಾದೇವ ಉವಾಚ ||

ಸಾಲೋಕ್ಯಮಪಿ ಸಾರೂಪ್ಯಂ ಸಾರ್ಷ್ಟ್ಯಂ ಸಾಯುಜ್ಯಮೇವ ಚ ।
ಕೈವಲ್ಯಂ ಚೇತಿ ತಾಂ ವಿದ್ಧಿ ಮುಕ್ತಿಂ ರಾಘವ ಪಂಚಧಾ || ೩ ||

---

## ಹದಿಮೂರನೆಯ ಅಧ್ಯಾಯ

೧–೨ ಹಿಂದೆ ಹೇಳಿದ ಪರಮೇಶ್ವರೋಪದೇಶವನ್ನೆಲ್ಲಾ ಮಹಾಮೇಧಾವಿಯಾದ ಶ್ರೀರಾಮನು ಸುಲಭವಾಗಿ ಗ್ರಹಿಸಿ, ಮತ್ತೆ ಪರಶಿವನನ್ನು ಕುರಿತು 'ಷಡ್ಗುಣೈಶ್ವರ್ಯಪರಿಪೂರ್ಣನೇ, ನೀನು ದಯಾಸಮುದ್ರನು ನನ್ನಲ್ಲಿ ಪೂರ್ಣಾನುಗ್ರಹವಿಟ್ಟು ಮುಕ್ತಿಸ್ವರೂಪವನ್ನು ತಿಳಿಸುವವನಾಗು '' ಎಂದು ಪ್ರಾರ್ಥಿಸಿದನು

೩–೪ ಪರಮದಯಾಳುವಾದ ಶಂಕರನು ಆಗ ಶ್ರೀರಾಮನಿಗೆ ಈರೀತಿ ಮುಕ್ತಿಲಕ್ಷಣವನ್ನು ಬೋಧಿಸಿದನು "ಶ್ರೀರಾಮನೇ, ಮುಕ್ತಿಯೆಂಬುದು ಐದು ವಿಧ ಅದರಲ್ಲಿ ಏಕಲೋಕರೂಪವಾದ ಸಾಲೋಕ್ಯ, ಸಮಾನರೂಪ ಲಬ್ಧವಾಗುವ

ಮಾಂ ಪೂಜಯತಿ ನಿಷ್ಕಾಮಃ ಸರ್ವದಾಽಜ್ಞಾನವರ್ಜಿತಃ ।
ಸ ಮೇ ಲೋಕಂ ಸಮಾಸಾದ್ಯ ಭುಂಕ್ತೇ ಭೋಗಾನ್ಯಥೇಪ್ಸಿತಾನ್ ॥ ೪ ॥

ಜ್ಞಾತ್ವಾ ಮಾಂ ಪೂಜಯೇದ್ಯಸ್ತು ಸರ್ವಕಾಮವಿವರ್ಜಿತಃ ।
ಮಯಾ ಸಮಾನರೂಪಸ್ಸನ್ಮಮ ಲೋಕೇ ಮಹೀಯತೇ ॥ ೫ ॥

ಇಷ್ಟಾಪೂರ್ತಾದಿಕರ್ಮಾಣಿ ಮತ್ಪ್ರೀತ್ಯೈ ಕುರುತೇ ತು ಯಃ ।
ಯತ್ಕರೋತಿ ಯದಶ್ನಾತಿ ಯಜ್ಜುಹೋತಿ ದದಾತಿ ಯತ್ ॥ ೬ ॥

ಯತ್ತಪಸ್ಯತಿ ತತ್ಸರ್ವಂ ಯಃ ಕರೋತಿ ಮದರ್ಪಣಂ ।
ಮಲ್ಲೋಕೇ ಸ ಶ್ರಿಯಂ ಭುಂಕ್ತೇ ಮತ್ತುಲ್ಯಪ್ರಾಭವಂ ಭಜೇತ್ ॥ ೭ ॥

ಸಾರೂಪ್ಯ, ಸಮಾನವಾದ ಐಶ್ವರ್ಯವನ್ನು ಪಡೆಯುವ ಸಾರ್ಷ್ಟ್ಯ, ಜೊತೆಯಲ್ಲಿ ವ್ಯವಹರಿಸುವ ಅಂದರೆ ಭೂತಾವೇಶನ್ಯಾಯದಂತೆ ಹಿರಣ್ಯಗರ್ಭಾದಿದೇಹದಿಂದ ಸುಖಾನುಭವಮಾಡುವ ಸಾಯುಜ್ಯ, ಈ ನಾಲ್ಕು ಮುಕ್ತಿಶಬ್ದದಿಂದಲೇ ವ್ಯವಹರಿಸಲ್ಪಡುವುವು ಆದರೆ ಐದನೆಯದಾದ ಕೇವಲ ಬ್ರಹ್ಮಭಾವವನ್ನು ಹೊಂದುವುದೇ ಶುದ್ಧ ಮುಕ್ತಿ. (ಕೈವಲ್ಯ) ಹೀಗೆ ಗೌಣ ಮುಖ್ಯ ವ್ಯವಹಾರದಿಂದ ಮುಕ್ತಿಯು ಐದು ವಿಧವಾಗಿದೆ ಅಜ್ಞಾನ ವಿರಹಿತನಾಗಿ, ಯಾವ ವಿಧವಾದ ಇಷ್ಟಾರ್ಥಗಳನ್ನೂ ಬಯಸದೆ ಸರ್ವದಾ ನನ್ನನ್ನೇ ಭೂಲೋಕದಲ್ಲಿ ಯಾವನು ಪೂಜಿಸುವನೋ, ಅವನಿಗೆ ಮರಣಾನಂತರ ನನ್ನ ಲೋಕವು ಪ್ರಾಪ್ತವಾಗಿ ಅಲ್ಲಿ ನಾನಾ ವಿಧಗಳಿಂದ ಸೌಖ್ಯವನ್ನು ಪಡೆಯುವನು ಇದೇ ಮೊದಲನೆಯದಾದ ಸಾಲೋಕ್ಯಮುಕ್ತಿ

೫–೭ ನಿಷ್ಕಾಮನಾಗಿ " ಈಶ್ವರನು ದಯಾಳುವು ದೇವಶ್ರೇಷ್ಠನು " ಇತ್ಯಾದಿಯಾದ ನನ್ನ ಸ್ವರೂಪವನ್ನು ಸದಾ ಅನುಸಂಧಾನಮಾಡುತ್ತಾ ಅರ್ಚಿಸುವವನಿಗೆ, ನನ್ನ ಲೋಕವು ಲಭಿಸಿ, ನನ್ನ ಆಕಾರವೂ ಒದಗಿ, ಘನಸುಖವನ್ನನುಭವಿಸುವ ಯೋಗ್ಯತೆಯೂ ಬರುವುದು ಅದು ಸಾರೂಪ್ಯಮುಕ್ತಿ ತಟಾಕ, ಉದ್ಯಾನ, ದೇವಾಲಯ ಮುಂತಾದ ಧರ್ಮಕಾರ್ಯಗಳನ್ನು ನನಗಾಗಿ ಮಾಡಿಸಿ, ಯಜ್ಞಾದಿ ಕರ್ಮಗಳನ್ನು ನನ್ನ ತೃಪ್ತಿಗಾಗಿ ನಡೆಸುವವನಿಗೆ, ಮತ್ತು ತಾನು ಮಾಡುವ ಸಕಲ

ಯಸ್ತು ಶಾಂತ್ಯಾದಿಯುಕ್ತಸ್ಸನ್ನಾಮಾತ್ಮತ್ವೇನ ಪಶ್ಯತಿ ।
ಸ ಜಾಯತೇ ಪರಂ ಜ್ಯೋತಿರದ್ವೈತಂ ಬ್ರಹ್ಮ ಕೇವಲಂ ॥ ೮ ॥

ಅತಃ ಸ್ವರೂಪಾವಸ್ಥಾನಂ ಮುಕ್ತಿರಿತ್ಯಭಿಧೀಯತೇ ।
ಸತ್ಯಂ ಜ್ಞಾನಮನಂತಂ ಸದಾನಂದಂ ಬ್ರಹ್ಮಕೇವಲಂ ॥ ೯ ॥

ಸರ್ವಧರ್ಮವಿಹೀನಂ ಚ ಯದ್ವದ್ವಾಚಾಮಗೋಚರಂ ।
ಸಜಾತೀಯವಿಜಾತೀಯಪದಾರ್ಥಾನಾಮಸಂಭವಾತ್ ॥ ೧೦ ॥

ಕರ್ಮಗಳನ್ನೂ, ತಿನ್ನುವ ಎಲ್ಲಾ ಆಹಾರವಸ್ತುವನ್ನೂ, ಹೋಮಮಾಡುವ ಸಮಸ್ತ ಹವಿಸ್ಸನ್ನೂ ಚಿತ್ತಶುದ್ಧಿಯಿಂದಾಚರಿಸುವ ಸಂಪೂರ್ಣ ತಪಸ್ಸನ್ನೂ, ಪರಮೇಶ್ವರನ ತೃಪ್ತಿಯಾಗಲೆಂದು ನನಗೆ ಅರ್ಪಿಸುವವರಿಗೆ, ನನ್ನ ಲೋಕವು ಲಭಿಸಿ, ಅಲ್ಲಿ ನನಗೆ ಸಮನಾಗಿ ಭೋಗಾದಿಗಳನ್ನು ಪಡೆಯುವರು ಆದರೆ ಜಗತ್ಕರ್ತೃತ್ವಾದಿ ಶಕ್ತಿಗಳು ಮಾತ್ರ ಅವರಿಗೆ ದೊರಯಲಾರವು ಇದು ಸಾಯುಜ್ಯ ಮುಕ್ತಿ

೮–೧೦ ಶಮಾದಿ ಸದ್ಗುಣಗಳಿಂದಲೂ, ಶ್ರವಣಮನನನಿದಿಧ್ಯಾಸನಗಳಿಂದಲೂ, ಸೋಹಂಭಾವವನ್ನು ಪಡೆದು, ಜಗತ್ತನ್ನೇ ಆತ್ಮಸ್ವರೂಪವೆಂದು ತಿಳಿಯುವವನು ಪರಬ್ರಹ್ಮಸ್ವರೂಪನಾಗುವನು ಇದೇ ಪರಮಮುಕ್ತಿ ಪರಬ್ರಹ್ಮವಸ್ತುವು ಪರಂಜ್ಯೋತಿಯೆನಿಸಿ ಅದ್ವೈತಾತ್ಮಕವಾಗಿರುವುದು "ಬ್ರಹ್ಮವಿದ್ಬ್ರಹ್ಮೈವ ಭವತಿ" ಎಂಬ ಶ್ರುತಿವಾಕ್ಯದಂತೆ ಬ್ರಹ್ಮಜ್ಞಾನಿಯು ಶುದ್ಧಬ್ರಹ್ಮನೆನಿಸುವನು ಒಟ್ಟಿನಲ್ಲಿ ಸ್ವಸ್ವರೂಪವನ್ನರಿಯುವುದೇ ಪರಮಮುಕ್ತಿ ಪರಬ್ರಹ್ಮವಸ್ತುವು ವ್ಯವಹಾರ ದಶೆಯಲ್ಲಿ ಇತರ ವಸ್ತುಗಳನ್ನು ವ್ಯಾವೃತ್ತಿಮಾಡುವುದಕ್ಕಾಗಿ ಸತ್ಯತ್ವಾದಿ ಧರ್ಮ ವಿಶಿಷ್ಟವಸ್ತುವನ್ನಾಗಿ ನಿರೂಪಿಸಿದರೂ, ವಾಸ್ತವಿಕವಾಗಿ ಅದು ಜ್ಞಾನಸ್ವರೂಪವೇ ಆದ್ದರಿಂದಲೇ ಅದು ವಾಕ್ಕಿಗೂ, ಮನಸ್ಸಿಗೂ ಅಗೋಚರವೆನಿಸಿರುವುದು ಕೇವಲ ಆನಂದಮಯವಾದುದು ಅದರಲ್ಲಿ ಯಾವ ಧರ್ಮಗಳೂ ಇಲ್ಲ ಪರಬ್ರಹ್ಮ ವ್ಯತಿರಿಕ್ತವಾಗಿ ಪರಬ್ರಹ್ಮನಿಗೆ ಸಮನಾದುದಾಗಲೀ, ವಿಜಾತೀಯವಾದುದಾಗಲಿ ಮತ್ತೊಂದಿಲ್ಲ ಆದ್ದರಿಂದಲೇ ಅದನ್ನು ಅದ್ವೈತವೆನ್ನುವರು

ಅತಸ್ತದ್ವ್ಯತಿರಿಕ್ತಾನಾಮದ್ವೈತಮಿತಿ ಸಂಜ್ಞಿತಂ ।
ಮತ್ವಾ ರೂಪಮಿದಂ ರಾಮ ಶುದ್ಧಂ ಯದಭಿಧೀಯತೇ ॥ ೧೧ ॥

ಮಯ್ಯೇವ ದೃಶ್ಯತೇ ಸರ್ವಂ ಜಗತ್ಸ್ಥಾವರಜಂಗಮಂ ।
ವ್ಯೋಮ್ನಿ ಗಂಧರ್ವನಗರಂ ಯಥಾ ದೃಷ್ಟಂ ನ ದೃಶ್ಯತೇ ॥ ೧೨ ॥

ಅನಾದ್ಯವಿದ್ಯಯಾ ವಿಶ್ವಂ ಸರ್ವಂ ಮಯ್ಯೇವ ಕಲ್ಪ್ಯತೇ ।
ನಿವರ್ತತೇ ತು ಮಯ್ಯೇವ ಮಯ್ಯೇವೇದಂ ವಿಲೀಯತೇ ॥ ೧೩ ॥

ಮಮ ಸ್ವರೂಪಜ್ಞಾನೇನ ಯದಾऽವಿದ್ಯಾ ಪ್ರಣಶ್ಯತಿ ।
ತದೈಕ ಏವ ವರ್ತೇऽಹಂ ಮನೋವಾಚಾಮಗೋಚರಃ ॥ ೧೪ ॥

ಸದೈವಂ ಪರಮಾನಂದಃ ಸ್ವಪ್ರಕಾಶಶ್ಚಿದಾತ್ಮಕಃ ।
ನ ಕಾಲಃ ಪಂಚಭೂತಾನಿ ನ ದಿಶೋ ವಿದಿಶಶ್ಚ ನ
ಮದನ್ಯನ್ನಾಸ್ತಿ ಯತ್ಕಿಂಚತ್ತದಾ ವರ್ತೇऽಹಮೇಕಲಃ ॥ ೧೫ ॥

೧೧-೧೪ ಎಲೈ ಶ್ರೀರಾಮನೇ, ಇಂತಹ ಶುದ್ಧ ಜ್ಞಾನಾನಂದಸ್ವರೂಪವಾದ ನನ್ನ ಸ್ವರೂಪವನ್ನು ಅರಿಯುವುದೇ ಪರಮಮುಕ್ತಿ ಇಂತಹ ಆತ್ಮವಸ್ತುವಿನಲ್ಲಿಯೇ (ನನ್ನಲ್ಲಿಯೇ) ಈ ಚರಾಚರಾತ್ಮಕವಾದ ಸಕಲ ಪ್ರಪಂಚವೂ, ಅಂತರಿಕ್ಷದಲ್ಲಿ ಗಂಧರ್ವಪುರವು ತೋರಿ ಮಾಯವಾಗುವಂತೆ ಅಜ್ಞಾನಿಗೆ ತೋರುತ್ತಾ, ಜ್ಞಾನಿಗೆ ಮಾಯವಾದಂತೆ ಕಾಣುವುದು ಅನಾದಿಯಾದ ಅವಿದ್ಯಾಮಹಿಮೆಯಿಂದ ಈ ಜಗತ್ತೆಲ್ಲಾ ನನ್ನಲ್ಲಿಯೇ ಇರುವಂತೆ ತೋರುವುದು ಇದೂ ನನ್ನ ಕಲ್ಪನೆ ನನ್ನ ಸ್ವರೂಪ ಜ್ಞಾನವಾದೊಡನೆಯೇ ಅವಿದ್ಯೆಯು (ಅಜ್ಞಾನವು) ನಾಶವಾಗಿ ಕಲ್ಪಿತ ಪ್ರಪಂಚವೆಲ್ಲಾ ನನ್ನಲ್ಲಿಯೇ ಲೀನವಾದಂತೆ ತೋರಿ, ನಾನೊಬ್ಬನೇ ಎಂಬ ಭಾವನೆ ಯುಳಿಯುವುದು ನನ್ನ ಸ್ವರೂಪವು ಮನಸ್ಸಿಗೂ, ವಾಕ್ಕಿಗೂ, ಅಗೋಚರವೆನಿಸಿರುವುದು

೧೫ ಪರಮಾನಂದಸ್ವರೂಪವೆನಿಸಿದ, ಪ್ರಕಾಶಕವೂ, ಜ್ಞಾನಾತ್ಮಕವೂ ಆದ ಆತ್ಮವಸ್ತುವಿಗೆ, ಕಾಲವಾಗಲಿ, ಪಂಚಭೂತಗಳಾಗಲಿ, ದಿಕ್ಕು ವಿದಿಕ್ಕುಗಳಾಗಲಿ, ಇರುವುದಿಲ್ಲ ಬ್ರಹ್ಮಭಿನ್ನವಾದ ವಸ್ತುವೇ ಇರುವುದಿಲ್ಲ ನಾನೊಬ್ಬನೇ ಇರುವವನು

ನ ಸಂದೃಶೇ ತಿಷ್ಠತಿ ಮೇ ಸ್ವರೂಪಂ
ನ ಚಕ್ಷುಷಾ ಪಶ್ಯತಿ ಮಾಂ ತು ಕಶ್ಚಿತ್ ।
ಹೃದಾ ಮನೀಷಾ ಮನಸಾಭಿಕ್ಲೃಪ್ತಂ
ಯೇ ಮಾಂ ವಿದುಸ್ತೇ ಹ್ಯಮೃತಾ ಭವಂತಿ ॥ ೧೬ ॥

॥ ಶ್ರೀರಾಮ ಉವಾಚ ॥

ಕಥಂ ಭಗವತೋ ಜ್ಞಾನಂ ಶುದ್ಧಂ ಮರ್ತ್ಯಸ್ಯ ಜಾಯತೇ ।
ತತ್ರೋಪಾಯಂ ಶಿವ ಬ್ರೂಹಿ ಮಯಿ ತೇಽನುಗ್ರಹೋ ಯದಿ ॥ ೧೭ ॥

॥ ಶ್ರೀ ಮಹಾದೇವ ಉವಾಚ ॥

ವಿರಜ್ಯ ಸರ್ವಭೂತೇಭ್ಯ ಆವಿರಿಂಚಿಪದಾದಪಿ ।
ಘೃಣಾಂ ವಿತತ್ಯ ಸರ್ವತ್ರ ಪುತ್ರಮಿತ್ರಾದಿಕೇಷ್ವಪಿ ॥ ೧೮ ॥

೧೬. ದೃಷ್ಟಿಗೋಚರಗಳಾದ ಯಾವ ವರ್ಣವಿಶಿಷ್ಟ ಆಕಾರವೂ ನಿಜವಾದ ಬ್ರಹ್ಮಸ್ವರೂಪವಲ್ಲ ಆದ್ದರಿಂದಲೇ ಬ್ರಹ್ಮವಸ್ತುವನ್ನು ಕಣ್ಣಿನಿಂದ ನೋಡಿ ತಿಳಿಯಲಾಗುವುದಿಲ್ಲ ಶಬ್ದಾದಿಗಳು ಅಲ್ಲವಾದ್ದರಿಂದ ಶ್ರೋತ್ರಾದಿಗಳಿಗೂ ಅದು ವಿಷಯವಾಗಲಾರದು ಆದರೆ ಶ್ರವಣಮನನನಿದಿಧ್ಯಾಸನಾದಿಗಳಿಂದಲೂ, ಗುರೂಪದೇಶಬಲದಿಂದಲೂ ನನ್ನ ಸ್ವರೂಪವನ್ನು ಅರಿಯಬಹುದು ಹಾಗೆ ಬ್ರಹ್ಮಸ್ವರೂಪವನ್ನರಿತವರು ಮುಕ್ತರಾಗುವರು ಅವರಿಗೆ ಯಾವ ವಿಧವಾದ ದುಃಖಾದ್ಯುಪದ್ರವಗಳೂ ತಟ್ಟಲಾರವು

೧೭–೧೮ ಹೀಗೆ ಮಹೇಶ್ವರನು ಮುಕ್ತಿಸ್ವರೂಪವನ್ನು ತಿಳಿಸಿದಾಗ ಶ್ರೀರಾಮನು ಕುತೂಹಲದಿಂದ ಮಹಾದೇವನನ್ನು ಕುರಿತು " ದೇವದೇವನೇ, ಮಾನವರಿಗೆ ಭಗವದ್ವಿಷಯಕವಾದ ಶುದ್ಧಜ್ಞಾನವು ಲಭಿಸುವುದು ಹೇಗೆ ? ಅಂತಹ ಸುಜ್ಞಾನವನ್ನು ಪಡೆಯಲು ಮಾಡಬೇಕಾದ ಉಪಾಯವೇನು ? ದಯವಿಟ್ಟು ಅದನ್ನು ನನಗೆ ತಿಳಿಸಬೇಕು " ಎಂದು ಪ್ರಶ್ನೆಮಾಡಿದನು ಅದಕ್ಕೆ ಉತ್ತರವಾಗಿ ಪರಮೇಶ್ವರನು ಹೀಗೆ ನುಡಿದನು ಶ್ರೀರಾಮನೇ ಕೇಳು, ಮುಕ್ತಿಕಾಮನಾದವನು

ಶ್ರದ್ಧಾಳುರ್ಭಕ್ತಿಮಾರ್ಗೇಷು ವೇದಾಂತಜ್ಞಾನಲಿಪ್ಸಯಾ ।
ಉಪಾಯನಕರೋ ಭೂತ್ವಾ ಗುರುಂ ಬ್ರಹ್ಮವಿದಂ ವ್ರಜೇತ್ ॥ ೧೯ ॥

ಸೇವಾಭಿಃ ಪರಿತೋಷ್ಯೈನಂ ಚಿರಕಾಲಂ ಸಮಾಹಿತಃ ।
ಸರ್ವವೇದಾಂತವಾಕ್ಯಾರ್ಥಂ ಶೃಣುಯಾತ್ಸುಸಮಾಹಿತಃ ॥ ೨೦ ॥

ಸರ್ವವೇದಾಂತವಾಕ್ಯಾನಾಂ ಮಯಿ ತಾತ್ಪರ್ಯನಿಶ್ಚಯಃ ।
ಶ್ರವಣಂ ನಾಮ ತತ್ಪ್ರಾಹುಃ ಸರ್ವೇ ತೇ ಬ್ರಹ್ಮವಾದಿನಃ ॥ ೨೧ ॥

ಲೋಹಮಣ್ಯಾದಿದೃಷ್ಟಾಂತಯುಕ್ತಿಭಿರ್ಯದ್ವಿಚಿಂತನಂ ।
ತದೇವ ಮನನಂ ಪ್ರಾಹುರ್ವಾಕ್ಯಾರ್ಥಸ್ಯೋಪಬೃಂಹಣಂ ॥ ೨೨ ॥

ಅಥವಾ ಬ್ರಹ್ಮಜ್ಞಾನಜಿಜ್ಞಾಸುವು ಮೊದಲು ಬ್ರಹ್ಮಲೋಕಪರ್ಯಂತವಿರುವ ಸಕಲ ವಸ್ತುಗಳೂ ಮಿಥ್ಯಾಭೂತವಾದವುಗಳೆಂದು ನಂಬಬೇಕು ಪುತ್ರ, ಮಿತ್ರಾದಿಗಳಲ್ಲಿರುವ ವಿಶೇಷವಾದ ಮೋಹವನ್ನು ತ್ಯಜಿಸಬೇಕು

೧೯–೨೦ ಭಕ್ತಿಮಾರ್ಗವನ್ನು ಅವಲಂಬಿಸಿ ವೇದಾಂತ ಶಾಸ್ತ್ರಾರ್ಥವನ್ನು ತಿಳಿಯಬೇಕೆಂಬ ಆಸೆಯಿಂದ ಕೈಗಾಣಿಕೆಯೊಡನೆ ಬ್ರಹ್ಮಜ್ಞಾನಿಯಾದ ಗುರುವಿನ ಬಳಿಗೆ ಹೋಗಬೇಕು ಆ ಗುರುವನ್ನು ಶುಶ್ರೂಷಾದಿಗಳಿಂದ ಬಹುಕಾಲ ತೃಪ್ತಿಪಡಿಸಿ, ಸಮಾಧಾನಮನಸ್ಕನಾಗಿ ಗುರುವಿನಿಂದ ಉಕ್ತವಾದ ಸಕಲ ವೇದಾಂತ ವಾಕ್ಯಗಳ ಅರ್ಥವನ್ನೂ ಮನನಮಾಡಬೇಕು

೨೧–೨೨ ಸಮಸ್ತವೇದಾಂತವಾಕ್ಯಗಳ ಅರ್ಥವೂ, ತಾತ್ಪರ್ಯಬೋಧಕಗಳಾದ ಷಡ್ವಿಧಲಿಂಗಗಳಿಂದ ವಿಶುದ್ಧಬ್ರಹ್ಮಸ್ವರೂಪವನ್ನೇ ಬೋಧಿಸುವುವೆಂಬ ಮಾನಸಿಕ ವ್ಯಾಪಾರವೇ ಶ್ರವಣವೆನಿಸುವುದು ಹೀಗೆಂದು ಬ್ರಹ್ಮಜ್ಞಾನಿಗಳು ಹೇಳುವರು ಲೋಹ, ಮಣಿ ಮುಂತಾದ ದೃಷ್ಟಾಂತಗಳಿಂದಲೂ, ಇನ್ನೂ ನಾನಾ ವಿಧವಾದ ಯುಕ್ತಿವಚನಗಳಿಂದಲೂ, ವಾಕ್ಯಾರ್ಥದಲ್ಲಿರುವ ಆತ್ಮಸ್ವರೂಪವನ್ನು ತಿಳಿಯುವುದು ಮನನವೆನಿಸುವುದು

ನಿರ್ಮಮೋ ನಿರಹಂಕಾರೋ ನಿರ್ಲೇಪಃ ಸಂಗವರ್ಜಿತಃ ।
ಸಮಃ ಶಾಂತ್ಯಾದಿಯುಕ್ತಸ್ಸನ್ನಾತ್ಮನ್ಯಾತ್ಮಾನಮೀಕ್ಷತೇ ॥ ೨೩ ॥

ಯತ್ಸದಾ ಧ್ಯಾನಯೋಗೇನ ತನ್ನಿದಿಧ್ಯಾಸನಂ ಸ್ಮೃತಂ ।
ಸರ್ವಕರ್ಮಕ್ಷಯವಶಾತ್ಸಾಕ್ಷಾತ್ಕಾರೋಽಪಿ ಚಾತ್ಮನಃ ॥ ೨೪ ॥

ಕಸ್ಯಚಿಜ್ಜಾಯತೇ ಶೀಘ್ರಂ ಚಿರಕಾಲೇನ ಕಸ್ಯಚಿತ್ ।
ಕೂಟಸ್ಥಾನೀಹ ಕರ್ಮಾಣಿ ಕೋಟಿಜನ್ಮಾರ್ಜಿತಾನ್ಯಪಿ ॥ ೨೫ ॥

ಜ್ಞಾನೇನೈವ ವಿನಶ್ಯಂತಿ ನ ತು ಕರ್ಮಾಯುತೈರಪಿ ।
ಜ್ಞಾನಾದೂರ್ಧ್ವಂ ತು ಯತ್ಕಿಂಚಿತ್ಪುಣ್ಯಂ ವಾ ಪಾಪಮೇವ ವಾ ॥ ೨೬ ॥

---

೨೩–೨೪ ಶ್ರವಣಮನನಗಳಿಂದ ಅಹಂಕಾರವನ್ನು ತೊರೆದು, ಮಮತಾ ಭಾವನೆಯನ್ನು ಬಿಟ್ಟು, ಸಕಲ ಜೀವಿಗಳ ಸಹವಾಸಕ್ಕೆ ಮನಗೊಡದೆ, ಶಾಂತ್ಯಾದಿ ಸುಗುಣಾವಳಿಯನ್ನು ಹೊಂದಿ, ಸಮಚಿತ್ತನಾಗಿ ಸತತಧ್ಯಾನಯೋಗದಿಂದ ಪರಮಾತ್ಮನನ್ನು ನನ್ನಲ್ಲಿ ಕಾಣುವುದೇ ನಿದಿಧ್ಯಾಸನವು (ವಿಜಾತೀಯವೃತ್ತ್ಯಭಾವದಿಂದ ಸಜಾತೀಯವೃತ್ತಿಧಾರಣವೇ ನಿದಿಧ್ಯಾಸನ) ಹೀಗೆ ಜ್ಞಾನವನ್ನಾರ್ಜಿಸಿ, ಸಕಲ ಕರ್ಮಫಲವನ್ನೂ ಕಳೆದುಕೊಂಡ ಮಾನವನಿಗೆ ಒಹುಕಾಲದ ಅನಂತರ ಬ್ರಹ್ಮ ಸಾಕ್ಷಾತ್ಕಾರವು ಲಭಿಸುವುದು

೨೫–೨೬ ಕೋಟ್ಯಂತರ ಜನ್ಮಗಳಿಂದ ಸಂಪಾದಿಸಿ ತಂದ ಪಾಪರಾಶಿಯು ಮಾನವರಲ್ಲಿ ಕೂಟಸ್ಥವಾಗಿರುವಾಗ, ಅದನ್ನು ಕಳೆಯಲು ಎಷ್ಟು ಸತ್ಕರ್ಮಗಳನ್ನಾಚರಿಸಿದರೂ ಸಾಧ್ಯವಿಲ್ಲ ಅಂತಹ ಪಾಪರಾಶಿಯನ್ನು ಹೊಡೆದಟ್ಟಲು ಜ್ಞಾನವೊಂದೇ ನಿಜವಾದ ಸಾಧನ ಜ್ಞಾನಿಯಾದವನಿಗೆ ಯಾವ ಪ್ರಮಾಣದ ಪುಣ್ಯವಾಗಲಿ ಯಾವರೀತಿಯಿಂದಲೂ ಸಂಬಂಧಿಸಲಾರದ ವಸ್ತು ಪುಣ್ಯಪಾಪಗಳ ಫಲವು ಯಾವ ತೊಂದರೆಯನೂ ಕೊಡಲಾರದು

ಕ್ರಿಯತೇ ಬಹು ವಾಲ್ಪಂ ವಾ ನ ತೇನಾಯಂ ವಿಲಿಪ್ಯತೇ ।
ಶರೀರಾರಂಭಕಂ ಯತ್ತು ಪ್ರಾರಬ್ಧಂ ಕರ್ಮ ತನ್ಮತಂ ॥ ೨೭ ॥

ತದ್ಭೋಗೇನೈವ ನಷ್ಟಂ ಸ್ಯಾನ್ನ ತು ಜ್ಞಾನೇನ ನಶ್ಯತಿ ।
ನಿರ್ಮೋಹೋ ನಿರಹಂಕಾರೋ ನಿರ್ಲೇಪಃ ಸಂಗವರ್ಜಿತಃ ॥ ೨೮ ॥

ಸರ್ವಭೂತೇಷು ಚಾತ್ಮಾನಂ ಸರ್ವಭೂತಾನಿ ಚಾತ್ಮನಿ ।
ಯಃ ಪಶ್ಯನ್ ಸಂಚರತ್ಯೇಷ ಜೀವನ್ಮುಕ್ತೋಽಭಿಧೀಯತೇ ॥ ೨೯ ॥

ಅಹಿನಿರ್ಲ್ವಯಿನೀ ಯದ್ವದ್ದ್ರಷ್ಟುಃ ಪೂರ್ವಂ ಭಯಪ್ರದಾ ।
ತತೋಽಸ್ಯ ನ ಭಯಂ ಕಿಂಚಿತ್ತದ್ವದ್ದ್ರಷ್ಟುರಯಂ ಜನಃ ॥ ೩೦ ॥

ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಸ್ಥಿತಾಃ ।
ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ॥ ೩೧ ॥

೨೭–೨೯ ಆದರೆ ಶರೀರಾರಂಭಕರವಾದ ಒಂದು ಕರ್ಮವಿಶೇಷವನ್ನೇ ಪ್ರಾರಬ್ಧಕರ್ಮವೆನ್ನುವರು ಆ ಪ್ರಾರಬ್ಧಕರ್ಮಜನ್ಯವಾದ ಸುಖದುಃಖಗಳನ್ನು ಮೀರಲು ಜ್ಞಾನಿಗೂ ಸಾಧ್ಯವಿಲ್ಲ ಅದನ್ನು ಅನುಭವಿಸಿಯೇ ತೀರಬೇಕು. ಘೋರವಾದ ಮೋಹವನ್ನೂ, ಅಹಂಕಾರವನ್ನೂ, ಇತರ ಜೀವಿಗಳ ಸಹವಾಸವನ್ನೂ ದೂರಮಾಡಿ, ಸಕಲ ಪ್ರಾಣಿಗಳನ್ನು ತನ್ನಂತೆಯೂ, ತಾನೇ ಸರ್ವ ಪ್ರಪಂಚದಂತೆಯೂ ತಿಳಿದು ಸ್ವೇಚ್ಛೆಯಾಗಿ ಸಂಚರಿಸುವವನಿಗೆ ಜೀವನ್ಮುಕ್ತನೆಂದು ಹೆಸರು

೩೦–೩೧ ದೂರದಿಂದ ಹಾವಿನ ಪೊರೆಯನ್ನು ನೋಡಿದವನು ಹಾವೆಂದು ಭ್ರಮಿಸಿ ಹೆದರುವನು ಆದರೆ ಅದು ಹಾವಿನ ಪೊರೆಯೆಂದು ಅರಿತಾಗ ಧೈರ್ಯದಿಂದ ವರ್ತಿಸುವನು ಹಾಗೆ ಜೀವನ್ಮುಕ್ತನು ಪ್ರಪಂಚದ ಅಸಾರತೆಯನ್ನು ತಿಳಿದು, ಅದಕ್ಕಾಗಿಯೂ, ಅದರಿಂದಲೂ, ಯಾವ ವಿಧವಾದ ಭಯವನ್ನೂ ಪಡೆಯಲಾರನು ಹಾಗೆಯೇ ಹಾವೂ ಸಹ ತನ್ನ ಪೊರೆಯು ತನ್ನ ದೇಹದ ಮೇಲಿದ್ದಾಗ ಅದರಲ್ಲಿ ಆತ್ಮಾಭಿಮಾನವನ್ನಿಟ್ಟಿರುವುದು ತನ್ನ ಪೊರೆಯು ದೇಹದಿಂದ ಕಳಚಿಬಿದ್ದಮೇಲೆ

ಯದಾ ಸರ್ವೇ ಪ್ರಭಿದ್ಯಂತೇ ಹೃದಯಸ್ಯೇಹ ಗ್ರಂಥಯಃ ।
ಅಥ ಮರ್ತ್ಯೋಽಮೃತೋ ಭವತ್ಯೇತಾವದನುಶಾಸನಂ ॥ ೩೨ ॥

ಮೋಕ್ಷಸ್ಯ ನ ಹಿ ವಾಸೋಽಸ್ತಿ ನ ಗ್ರಾಮಾಂತರಮೇವ ವಾ
ಅಜ್ಞಾನಹೃದಯಗ್ರಂಥಿನಾಶೋ ಮೋಕ್ಷ ಇತಿ ಸ್ಮೃತಃ ॥ ೩೩ ॥

ವೃಕ್ಷಾಗ್ರಾಚ್ಚ್ಯುತಪಾದೋ ಯಃ ಸ ತದೈವ ಪತತ್ಯಥಃ ।
ತದ್ವಜ್ಞಾನವತೋ ಮುಕ್ತಿರ್ಜಾಯತೇಽನಿಚ್ಛತೋಽಪಿ ಹಿ ॥ ೩೪ ॥

---

ಆ ಪೊರೆಯಲ್ಲಿ ಯಾವ ಆಸೆಯನ್ನೂ ತೋರಿಸದೆ ಹೋಗುವಂತೆ, ದೇಹಾಭಿಮಾನ ವಿಲ್ಲದ ಮಾನವನು ದೇಹಕ್ಕಾಗಿ ಹೆಚ್ಚು ತೊಂದರೆಯನ್ನು ಅನುಭವಿಸಲಾರನು ಒಟ್ಟಿನಲ್ಲಿ ಮಾನವರ ಹೃದಯಗತವಾಗಿ ವಾಸನಾಲಬ್ಧಗಳಾದ ಕಾಮಾದಿಗಳು ಎಂದು ಸಂಪೂರ್ಣವಾಗಿ ನಾಶವಾಗುವುವೋ, ಅಂದೇ ಅವರು ಬ್ರಹ್ಮಸದೃಶ ರಾಗುವರು ಬ್ರಹ್ಮಾನಂದವು ಅವರಿಗೆ ಒಡನೆಯೇ ಲಭಿಸುವುದು

೩೨-೩೪ ಸುಖದುಃಖಕಾರಣಗಳಾದ ಹೃದಯಗ್ರಂಥಿಗಳು ನಾಶವಾದ ಹೊರತು ಮುಕ್ತಿದೊರೆಯಲಾರದು ಎಷ್ಟೇ ಶಾಸ್ತ್ರಪಾಂಡಿತ್ಯವಿದ್ದರೂ ಕಾಮ ಕ್ರೋಧಾದಿಗಳು ನಾಶವಾಗಿ ವೈರಾಗ್ಯವುತ್ಪನ್ನವಾಗದಿದ್ದರೆ ಅದು ವ್ಯರ್ಥವೇ ಸರಿ ಆದರಿಂದ ಎಂದಿಗೂ ಮೋಕ್ಷವು ಲಭಿಸಲಾರದು ವೈರಾಗ್ಯಪೂರ್ವಕವಾಗಿ ಜ್ಞಾನೋತ್ಪತ್ತಿಯಾದೊಡನೆಯೇ ಮೋಕ್ಷವು ಕರಗತವಾಗುವುದು ಆ ಮೋಕ್ಷಕ್ಕೆ ಕಾಲದೇಶಾದಿಗಳಿಲ್ಲ ಅದನ್ನು ಕೊಡುವವರಿಲ್ಲ ಸುಲಭವಾಗಿ ದೊರೆಯುವ ವಸ್ತುವೂ ಅಲ್ಲ ಅಜ್ಞಾನವೂ ಅದರ ಕಾರ್ಯವಾದ ,ಹೃದಯಗ್ರಂಥಿಯೂ (ಅಹಂಕಾರ ವೃತ್ತ್ಯಾದಿಗಳು) ನಾಶವಾಗುವುದೇ ಮೋಕ್ಷವೆಂದು ಹೇಳಲ್ಪಡುವುದು ಮರದ ಮೇಲೆ ನಿಂತು ಕೈಕಾಲುಗಳನ್ನು ಬಿಟ್ಟವನಿಗೆ ಭೂಮಿಯ ಮೇಲೆ ಬೀಳುವುದು ಹೇಗೆ ಸ್ವತಸ್ಸಿದ್ಧವಾದ ಕಾರ್ಯವೋ, ಅದರಂತೆ ಜ್ಞಾನಿಯಾದವನಿಗೆ ಮುಕ್ತಿ ಯೆಂಬುದು ಕರಗತವಾದ ವಸ್ತು ಯಾರ ಇಚ್ಛೆಯಿಂದಲೂ ಅದನ್ನು ಹೊಂದ ವುದಕ್ಕಾಗದು ಅಥವಾ ತಪ್ಪಿಸುವುದಕ್ಕೂ ಸಾಧ್ಯವಿಲ್ಲ

ತೀರ್ಥೇ ಚಂಡಾಲಗೇಹೇ ವಾ ಯದಿ ವಾ ನಷ್ಟಚೇತನಃ ।
ಪರಿತ್ಯಜನ್ ದೇಹಮಿಮಂ ಜ್ಞಾನಾದೇವ ವಿಮುಚ್ಯತೇ ॥ ೩೫ ॥

ಸಂವೀತೋ ಯೇನ ಕೇನಾಶ್ನನ್ ಭಕ್ಷ್ಯಂ ವಾಭಕ್ಷ್ಯಮೇವ ವಾ ।
ಶಯಾನೋ ಯತ್ರ ಕುತ್ರಾಪಿ ಸರ್ವಾತ್ಮಾ ಮುಚ್ಯತೇ ತು ಸಃ ॥ ೩೬ ॥

ಕ್ಷೀರಾದುದ್ಧೃತಮಾಜ್ಯಂ ಯತ್ಕ್ಷಿಪ್ತಂ ಪಯಸಿ ತತ್ಪುನಃ ।
ನ ತೇನೈವೈಕತಾಂ ಯಾತಿ ಸಂಸಾರೇ ಜ್ಞಾನವಾಂಸ್ತಥಾ ॥ ೩೭ ॥

ನಿತ್ಯಂ ಪಠತಿ ಯೋಽಧ್ಯಾಯಮಿಮಂ ರಾಮ ಶೃಣೋತಿ ವಾ ।
ಸ ಮುಚ್ಯತೇ ದೇಹಬಂಧಾದನಾಯಾಸೇನ ರಾಘವ ॥ ೩೮ ॥

೩೫–೩೭ ಪವಿತ್ರವಾದ ಕ್ಷೇತ್ರಗಳಲ್ಲಿಯೇ ಆಗಲಿ, ಪವಿತ್ರಗಳಾದ ಚಂಡಾಲಗೃಹಗಳಲ್ಲಾಗಲಿ, ಜ್ಞಾನಿಯಾಗಿ ಪ್ರಾಣಬಿಟ್ಟವರಿಗೆ ಮೋಕ್ಷವು ನಿಜವಾಗಿ ದೊರೆಯುವುದು ಮೋಕ್ಷಕ್ಕೆ ಮರಣಕಾಲದ ಸ್ಥಳ ಪಾವಿತ್ರ್ಯವು ಕಾರಣವೆನಿಸುವುದಿಲ್ಲ ಭಕ್ಷ್ಯಾಭಕ್ಷ್ಯ ಭೋಜನದಿಂದ ಜೀವನವನ್ನು ಹೊರೆದು, ಯಾವ ಸ್ಥಳದಲ್ಲಿ ಸತ್ತರೂ ಜೀವನ್ಮುಕ್ತನಿಗೆ ಮೋಕ್ಷವಿದ್ದೇ ಇರುವುದು ಒಟ್ಟಿನಲ್ಲಿ, ಕಾಶೀಮರಣ, ಪುಣ್ಯಕಾಲಮರಣ, ಇತ್ಯಾದಿಗಳು ಅಜ್ಞಾನಿಗೆ ಹೇಳಲ್ಪಟ್ಟ ಮುಕ್ತಿಸಾಧನಗಳೇ ಹೊರತು ಜ್ಞಾನಿಯಾದವನಿಗೆ ಅವೆಲ್ಲಾ ಅಪ್ರಕೃತಗಳೆನಿಸುವುವು ಜೀವನ್ಮುಕ್ತನು ಹೇಗಿದ್ದರೂ, ಎಲ್ಲಿದ್ದರೂ ಮುಕ್ತಿಯು ಸಿದ್ಧವಾಗಿಯೇ ಇರುವುದು ಹಾಲಿನಿಂದಲೇ ತೆಗೆಯಲ್ಪಟ್ಟ ಬೆಣ್ಣೆಯು ಮತ್ತೆ ಹಾಲಿನಲ್ಲಾಗಲಿ, ನೀರಿನಲ್ಲಾಗಲಿ ಹೇಗೆ ಲೀನವಾಗಲಾರದೋ, ಹಾಗೆ ಸಂಸಾರದಲ್ಲಿದ್ದೇ ಜ್ಞಾನಿಯಾದವನು ಮತ್ತೆ ಸಂಸಾರಕ್ಕೆ ಬೀಳಲಾರನು ಸಂಸಾರದ ಸುಖದುಃಖಗಳಲ್ಲಿ ಲೀನನಾಗಲಾರನು ಸಂಸಾರಬಂಧನ ನಿವೃತ್ತಿರೂಪವಾದ ಮೋಕ್ಷವು ಅವನಿಗೆ ನಿಜವಾಗಿ ಲಭಿಸುವುದು

೩೮–೩೯ ಶ್ರೀರಾಮನೇ, ನಾನು ಮುಕ್ತಿಸ್ವರೂಪವನ್ನೂ, ಅದರ ಸಾಧನವನ್ನೂ ಈಗ ನಿನಗೆ ಈ ಅಧ್ಯಾಯದಲ್ಲಿ ತಿಳಿಸಿರುವೆನು ಇಂತಹ ಈ ಅಧ್ಯಾಯ

ತತಃ ಸಂಯತಚಿತ್ತಸ್ತ್ವಂ ನಿತ್ಯಂ ಪಠ ಮಹೀಪತೇ ।
ಅನಾಯಾಸೇನ ತೇನೈವ ಸರ್ವಥಾ ಮೋಕ್ಷಮಾಪ್ಸ್ಯಸಿ ॥ ೩೯ ॥

ಇತಿ ಶ್ರೀಪದ್ಮಪುರಾಣೇ ಶಿವಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಶಿವರಾಘವಸಂವಾದೇ
ಮೋಕ್ಷಯೋಗೋ ನಾಮ

॥ ತ್ರಯೋದಶೋಽಧ್ಯಾಯಃ ॥

ವನ್ನು ಯಾರು ನಿತ್ಯವೂ ತಪ್ಪದೆ ಪಠಿಸುವರೋ, ಅವರು ದೇಹಬಂಧನಾದಿಗಳಿಂದ ಅನಾಯಾಸವಾಗಿ ತಪ್ಪಿಸಿಕೊಳ್ಳುವರು. ಅದರಿಂದ ಅವರಿಗೆ ಸುಜ್ಞಾನವೂ ಲಭಿಸುವುದು ರಾಜಶ್ರೇಷ್ಠನೇ, ಆದ್ದರಿಂದ ನೀನು ತಪ್ಪದೆ ಸಮಾನಚಿತ್ತನಾಗಿ ಪ್ರತಿನಿತ್ಯವೂ ಬಿಡದೆ ಈ ಅಧ್ಯಾಯವನ್ನು ಪಾರಾಯಣಮಾಡುತ್ತಿರು ಇದರಿಂದ ನಿನಗೆ ಚಿತ್ತಶುದ್ಧಿಯೂ, ಕ್ರಮವಾಗಿ ಮುಕ್ತಿಯೂ ಲಭಿಸುವುದರಲ್ಲಿ ಸಂಶಯ ವಿಲ್ಲ ಎಂದು ಮಹಾದೇವನು ಮೋಕ್ಷಯೋಗವನ್ನು ಶ್ರೀರಾಮನಿಗೆ ವಿವರವಾಗಿ ಬೋಧಿಸಿದನು

ಇಲ್ಲಿಗೆ ಶ್ರೀ ಪದ್ಮಪುರಾಣದ ಶಿವಗೀತೆಯಲ್ಲಿ ಮೋಕ್ಷಯೋಗ ನಾಮಕವಾದ
ಹದಿಮೂರನೆಯ ಅಧ್ಯಾಯವು ಮುಗಿದುದು



|| ಶ್ರೀಃ ||

# ಶ್ರೀ ಶಿವಗೀತಾ

|| ಅಥ ಚತುರ್ದಶೋಽಧ್ಯಾಯಃ ||

|| ಶ್ರೀರಾಮ ಉವಾಚ ||

ಭಗವನ್ ಯದಿ ತೇ ರೂಪಂ ಸಚ್ಚಿದಾನಂದವಿಗ್ರಹಂ ।
ನಿಷ್ಕಳಂ ನಿಷ್ಕ್ರಿಯಂ ಶಾಂತಂ ನಿರವದ್ಯಂ ನಿರಂಜನಂ || ೧ ||

ಸರ್ವಧರ್ಮವಿಹೀನಂ ಚ ಮನೋವಾಚಾಮಗೋಚರಂ ।
ಸರ್ವವ್ಯಾಪಿತಯಾತ್ಮಾನಮೀಕ್ಷತೇ ಸರ್ವತಃ ಸ್ಥಿತಂ || ೨ ||

ಆತ್ಮವಿದ್ಯಾತಪೋ ಮೂಲಂ ತದ್ಬ್ರಹ್ಮೋಪನಿಷತ್ಪರಂ ।
ಅಮೂರ್ತಂ ಸರ್ವಭೂತಾತ್ಮಾ ಕಾರ್ಯಕಾರಣಕಾರಣಂ || ೩ ||

## ಹದಿನಾಲ್ಕನೆಯ ಅಧ್ಯಾಯ

೧–೪ ಶ್ರೀರಾಮನು ಪರಶಿವನನ್ನು ಕುರಿತು "ಮಹಾದೇವನೇ, ಈಗ ನಿನ್ನ ಸ್ವರೂಪವೇನೋ ನಿನ್ನ ಮುಖದಿಂದಲೇ ತಿಳಿದಂತಾಯಿತು ನೀನು ಸಚ್ಚಿದಾನಂದಸ್ವರೂಪನು ನಿನ್ನಲ್ಲಿ ಯಾವ ವಿಧವಾದ ಕಲಾದಿಗಳೂ ಇಲ್ಲ ಉತ್ಕ್ಷೇಪಣೆಯೇ ಮೊದಲಾದ ಯಾವ ಕ್ರಿಯೆಗಳೂ ಇಲ್ಲ ಆದ್ದರಿಂದಲೇ ಶಾಂತನೂ, ದೋಷರಹಿತನೂ, ಪಾಪವಿವರ್ಜಿತನೂ ಆಗಿರುವೆ ಧರ್ಮಾಧರ್ಮಕಲ್ಪನೆಗಳೆಲ್ಲಾ ಅವಿದ್ಯಾಮೂಲಕಗಳಾದುದರಿಂದ ಯಾವ ಧರ್ಮವೂ ನಿನ್ನಲ್ಲಿಲ್ಲ ಹಾಗೆ

**ಯತ್ತದದ್ರೇಶ್ಯಮಗ್ರಾಹ್ಯಂ ತದ್ಗ್ರಾಹ್ಯಂ ವಾ ಕಥಂ ಭವೇತ್ ।**
**ಅತ್ರೋಪಾಯಮಜಾನಾನಸ್ತೇನ ಖಿನ್ನೋಽಸ್ಮಿ ಶಂಕರ । ೪ ।**

**॥ ಶ್ರೀ ಮಹಾದೇವ ಉವಾಚ ॥**

**ಶೃಣು ರಾಮ ಪ್ರವಕ್ಷ್ಯಾಮಿ ತತ್ರೋಪಾಯಂ ಮಹಾಭುಜ ।**
**ಸಗುಣೋಪಾಸನಾಭಿಸ್ತು ಚಿತ್ತೈಕಾಗ್ರ್ಯಂ ವಿಧಾಯ ಚ ॥ ೫ ॥**

ನಿರ್ಗುಣನಾಗಿರುವುದರಿಂದಲೇ ನಿನ್ನ ಸ್ವರೂಪವು ಮಾತಿಗೂ, ಮನಸ್ಸಿಗೂ, ಅಗೋಚರವೆನಿಸಿದೆ ನೀನು ಸರ್ವವ್ಯಾಪಿಯಾಗಿರುವುದರಿಂದ ಸರ್ವಕ್ಕೂ ಬಿಂಬಭೂತವಾದ ನೀನೇ ಸರ್ವತ್ರ ಪ್ರಕಾಶಿಸುತ್ತಿರುವೆ ಆ ವಿಧವಾದ ನಿನ್ನ ಸಾಕ್ಷಾತ್ಕಾರಕ್ಕೆ ಆತ್ಮವಿದ್ಯೆಯೂ, ತಪಸ್ಸೂ ಕಾರಣವಾಗುವುದು ಉಪನಿಷದರ್ಥಗಳ ಮಹಾತಾತ್ಪರ್ಯಭೂತವಾದದ್ದೇ ಆ ಬ್ರಹ್ಮವಸ್ತುವು ನಿನ್ನ ಸ್ವರೂಪವು ಎಂದೂ ಅಪರಿಚ್ಛಿನ್ನವೆನಿಸಿದೆ ನಾನಾ ವಿಧವಾದ ಉಪಾಧಿಗಳಿಂದ ಬೇರೆಬೇರೆ ಆಕಾರದಲ್ಲಿ, ರೂಪದಲ್ಲಿ ಕಂಡುಬರುತ್ತಿದೆ ಪರಮಾರ್ಥದೆಸೆಯಲ್ಲಿ ಯಾವ ಕಾರ್ಯ, ಕಾರಣವೂ ಕಂಡುಬರುವುದಿಲ್ಲ. ವ್ಯಾವಹಾರಿಕವಾಗಿ ಹೇಳುವುದಾದರೆ, ಸರ್ವಪ್ರಪಂಚಕ್ಕೂ ಕಾರಣವಾದ ಮಾಯಾದಿಗಳಿಗೂ ನೀನೇ ಕಾರಣನೆನಿಸಿರುವೆ ನಿನ್ನ ರೂಪವನ್ನು ನೋಡಲು ಸಾಧ್ಯವಿಲ್ಲ ಆಕಾರವನ್ನು ಹಿಡಿಯಲು ಶಕ್ಯವಲ್ಲ ಇಂತಹ ತಿಳಿಯಲಸಾಧ್ಯವಾದ ನಿನ್ನ ಸ್ವರೂಪವನ್ನು ಯಾವ ಉಪಾಯದಿಂದ ಸುಲಭವಾಗಿ ತಿಳಿಯಬಹುದು? ಅದು ನನಗೆ ತಿಳಿಯದೇ ನಿನ್ನ ಸ್ವರೂಪಜ್ಞಾನವಾಗದಿರುವುದು ಆದರಿಂದಲೇ ನಾನು ಇನ್ನೂ ಖಿನ್ನನಾಗಿರುವೆನು" ಎಂದು ಮಹಾದೇವನಲ್ಲಿ ಹೇಳಿಕೊಂಡನು.

೫–೬ ಆಗ ಮಹಾದೇವನು, ನಿರ್ಗುಣಬ್ರಹ್ಮಸಾಕ್ಷಾತ್ಕಾರಕ್ಕೆ ಸಾಧನವಾದ ಸಗುಣೋಪಾಸನಾಕ್ರಮವನ್ನು ವಿಸ್ತರಿಸಲುಪಕ್ರಮಿಸಿದನು ,–ಶ್ರೀರಾಮನೇ, ಕೇಳು ನಾನು ಹೇಳಿದ ನಿರ್ಗುಣಬ್ರಹ್ಮಸಾಕ್ಷಾತ್ಕಾರವು ಎಲ್ಲರಿಗೂ ಅಷ್ಟು ಸುಲಭ ಸಾಧ್ಯವಾದುದಲ್ಲ ಅದನ್ನು ಸಗುಣೋಪಾಸನೆಯಿಂದ ಸಾಧಿಸಬಹುದು ಸಗುಣೋ

ಸ್ಥೂಲಸೌರಾಂಭಿಕಾನ್ಯಾಯೋತ್ತತ್ರ ಚಿತ್ತಂ ಪ್ರವರ್ತಯೇತ್ ।
ತಸ್ಮಿನ್ನನ್ನಮಯೇ ಪಿಂಡೇ ಸ್ಥೂಲದೇಹೇ ತನೂಭೃತಾಂ ॥ ೬ ॥

ಜನ್ಮವ್ಯಾಧಿಜರಾಮೃತ್ಯುನಿಲಯೇ ವರ್ತತೇ ದೃಢಾ ।
ಆತ್ಮಬುದ್ಧಿರಹಂಮಾನಾತ್ಕದಾಚಿನ್ನೈವ ಹೀಯತೇ ॥ ೭ ॥

ಆತ್ಮಾ ನ ಜಾಯತೇ ನಿತ್ಯೋ ಮ್ರಿಯತೇ ವಾ ಕಥಂಚನ ।
ವಪುರುತ್ಪದ್ಯತೇ ಲೋಕೇ ವಪುರೇವ ಪ್ರಲೀಯತೇ ॥ ೮ ॥

ವಾಸನೆಯಿಂದ ಮೊದಲು ಚಿತ್ತಶುದ್ಧಿಯೊದಗುವುದು ಸಗುಣೋಪಾಸನೆಯೆಂದರೆ ದೇವರಿಗೆ ಒಂದು ಆಕಾರ, ಗುಣ, ಸೌಂದರ್ಯ ಇವುಗಳನ್ನು ಕಲ್ಪನೆಮಾಡಿಕೊಂಡು ಆರಾಧಿಸುವುದು ಎಂಪರ್ಥ ಆದರೆ ಇದು ಅಷ್ಟು ವಾಸ್ತವವಲ್ಲದಿದ್ದರೂ ಇದರಿಂದ ಚಿತ್ತಶುದ್ಧಿಯುಂಟಾಗಿ ನಿರ್ಗುಣಬ್ರಹ್ಮಸಾಕ್ಷಾತ್ಕಾರಕ್ಕೆ ಅದು ಸಹಕಾರಿಯೆನಿಸುವುದು ಹೇಗೆಂದರೆ ನೀರನ್ನೇ ಕಾಣದೆ ಬಾಯಾರಿಕೆಯಿಂದ ಕಷ್ಟಪಡುವವನಿಗೆ ಬಿಸಿಲ್ಗುದುರೆ (ಮರುಮರೀಚಿಕೆ) ಯನ್ನು ಮೊದಲು ತೋರಿಸಿ, ಹಾಗೆಯೇ ತತ್ಸದೃಶವಾದ ನೀರಿನ ಪರಿಚಯ ಮಾಡಿಕೊಡುವಂತೆ, ಮತ್ತು ಚಂದ್ರನನ್ನು ನೋಡಲು ಅಸಮರ್ಥ ನಾದವನಿಗೆ ಒಂದು ಮರದ ಕೊಂಬೆಯನ್ನು ತೋರಿಸಿ, ಅದರ ಮೇಲೆ ಚಂದ್ರ ನಿರುವನು ನೋಡೆಂದು ಹೇಳುವಂತೆ, ಮೊದಲು ಸಗುಣಬ್ರಹ್ಮನ ಆರಾಧನೆಯನ್ನು ಬೋಧಿಸಬೇಕು "ನಿರ್ವಿಶೇಷಂ ಪರಂ ಬ್ರಹ್ಮ ಸಾಕ್ಷಾತ್ಕರ್ತುಮನೀಶ್ವರಾಃ । ಯೇ ಮಂದಾಸ್ತೇನುಕಂಪ್ಯಂತೇ ಸವಿಶೇಷನಿರೂಪಣೈಃ । ವಶೀಕೃತೇ ಮನಸ್ಯೇಷಾಂ ಸಗುಣಬ್ರಹ್ಮ ಶೀಲನಾತ್ । ತದೇವಾವಿರ್ಭವೇತ್ಸಾಕ್ಷಾದಪೇತೋಪಾಧಿಕಲ್ಪನಾಂ" ಇತ್ಯಾದಿ ವಾಕ್ಯಗಳೂ ಇದೇ ಅರ್ಥವನ್ನೇ ಹೇಳುತ್ತಿವೆ ಪ್ರಾಣಿಗಳ ಸ್ಥೂಲದೇಹವು ಕೇವಲ ಅನ್ನಮಯವಾದುದು ಅದು ಜನನ, ಮರಣ, ಮುಪ್ಪು, ರೋಗ ಇವುಗಳಿಗೆ ಆಶ್ರಯಭೂತವಾದುದು ಇಂತಹ ದೇಹದಲ್ಲಿ ಆತ್ಮನಿಗೆ ಅಂತಃಕರಣತಾದಾತ್ಮ್ಯಾಧ್ಯಾಸವಿರುವುದರಿಂದ ಆತ್ಮಬುದ್ಧಿಯು ದೃಢವಾಗಿಯೇ ನಿಲ್ಲುವುದು

೮-೯ ಆತ್ಮನಿಗೆ ಜನನ, ಮರಣಗಳಿಲ್ಲ ಹುಟ್ಟುವುದು, ಸಾಯು ವುದು ದೇಹವೇ ಹೊರತು ಆತ್ಮನಲ್ಲ ದೇಹಕ್ಕೆ ಹುಟ್ಟುವಿಕೆ, ಇರುವಿಕೆ, ಬದ

ಸಂಜಾಯತೇಽಸ್ತಿ ವಿಪರಿಣಮತೇ ವರ್ಧತೇಽಪಿ ಚ ।
ಕ್ಷೀಯತೇ ನಶ್ಯತೀತ್ಯೇತೇ ಷಡ್ಭಾವಾ ವಪುಷಃ ಸ್ಮೃತಾಃ ॥ ೯ ॥

ಆತ್ಮನೋ ನ ವಿಕಾರಿತ್ವಂ ಘಟಸ್ಥನಭಸೋ ಯಥಾ ।
ಏವಮಾತ್ಮಾ ವಪುಸ್ತಸ್ಮಾದಿತಿ ಸಂಚಿಂತಯೇದ್ಬುಧಃ ॥ ೧೦ ॥

ಮೂಷಾನಿಕ್ಷಿಪ್ತಹೇಮಾಭಃ ಕೋಶಃ ಪ್ರಾಣಮಯೋಽತ್ರ ತು ।
ವರ್ತತೇಂತರತೋ ದೇಹೇ ಬದ್ಧಃ ಪ್ರಾಣಾದಿವಾಯುಭಿಃ ॥ ೧೧ ॥

ಕರ್ಮೇಂದ್ರಿಯೈಃ ಸಮಾಯುಕ್ತಶ್ಚಲನಾದಿಕ್ರಿಯಾತ್ಮಕಃ ।
ಕ್ಷುತ್ಪಿಪಾಸಾಪರಾಭೂತೋ ನಾಯಮಾತ್ಮಾ ಯತೋ ಜಡಃ ॥ ೧೨ ॥

ಚಿದ್ರೂಪ ಆತ್ಮಾ ಯೇನೈವ ಸ್ವದೇಹಮನುಪಶ್ಯತಿ ।
ಆತ್ಮೈವಾಹಂ ಪರಂ ಬ್ರಹ್ಮ ನಿರ್ಲೇಪಸ್ಸುಖನೀರಧಿಃ ॥ ೧೩ ॥

ಲಾವಣ್ಯ, ಬೆಳೆಯುವಿಕೆ, ಕ್ಷೀಣವಾಗುವಿಕೆ, ನಾಶವಾಗುವಿಕೆ ಎಂಬ ಆರು ಭಾವಗಳಿರುವುವು

೧೦–೧೩ ಆತ್ಮನಿಗೆ ಈ ವಿಕಾರಗಳಿಲ್ಲ ಘಟಾಂತರ್ಗತವಾದ ಆಕಾಶದಂತೆ ಅದು ಎಂದೂ ಬದಲಾವಣೆಹೊಂದತಕ್ಕುದಲ್ಲ ಈ ಕಾರಣದಿಂದಲೇ ಅನ್ನಮಯವಾದ ಕೋಶವು ಆತ್ಮವಲ್ಲವೆಂದು ನಿರ್ಧರಿಸಬಹುದು ಇನ್ನು ಪ್ರಾಣಮಯವಾದ ಕೋಶವು ಆತ್ಮವೆಂದು ಹೇಳುವುದಾದರೆ, ಪ್ರಾಣಮಯ ಕೋಶವು ಅನ್ನಮಯ ಕೋಶದ ಒಳಭಾಗದಲ್ಲಿ ಮೂಸೆಯಲ್ಲಿಡಲ್ಪಟ್ಟ ಚಿನ್ನದಂತೆ ಪ್ರಕಾಶಿಸುವುದು ಇದರಲ್ಲಿ ಪಂಚಪ್ರಾಣಗಳೂ, ಕರ್ಮೇಂದ್ರಿಯಗಳೂ ಇರುವುವು ಚಲನಾದಿಕ್ರಿಯೆಗಳು ಇದಕ್ಕುಂಟು ಹಸಿವು, ಬಾಯಾರಿಕೆಗಳಿಂದ ಕೂಡಿರುವುದು ಈ ಕೋಶ ಈ ಪ್ರಾಣಮಯ ಕೋಶಕ್ಕಿರುವ ಯಾವ ಗುಣವೂ ಆತ್ಮನಲ್ಲಿ ಇಲ್ಲದುದರಿಂದ ಇದನ್ನೇ ಆತ್ಮನೆಂದು ಹೇಳಲು ಸಾಧ್ಯವಿಲ್ಲ ಈ ಕೋಶವು ಜಡವಾದದ್ದು ಆತ್ಮನಾದರೋ ಜ್ಞಾನಸ್ವರೂಪನು. ಆತ್ಮನಿಂದಲೇ ದೇಹವನ್ನು ನೋಡು

ನ ತೇದಶ್ನಾತಿ ಕಂ ಚೈತನ್ನ ತದಶ್ನಾತಿ ಕಶ್ಚನ ।
ತತ್ರ ಪ್ರಾಣಮಯೇ ಕೋಶೇ ಕೋಶೋऽಸ್ತ್ಯೇವ ಮನೋಮಯಃ ॥೧೪॥

ಸ ಸಂಕಲ್ಪವಿಕಲ್ಪಾತ್ಮಾ ಬುದ್ಧೀಂದ್ರಿಯಸಮಾಯುತಃ ।
ಕಾಮಃಕ್ರೋಧಸ್ತಥಾಲೋಭೋ ಮೋಹೋ ಮಾತ್ಸರ್ಯಮೇವ ಚ ॥೧೫॥

ಮದಶ್ಚೇತ್ಯರಿಷಡ್ವರ್ಗೋ ಮಮತೇಚ್ಛಾದಯೋ ನೃಪ ।
ಮನೋಮಯಸ್ಯ ಕೋಶಸ್ಯ ಧರ್ಮಾ ಏತಸ್ಯ ತತ್ರ ತು ॥ ೧೬ ॥

ಯಾ ಕರ್ಮವಿಷಯಾ ಬುದ್ಧಿರ್ವೇದಶಾಸ್ತ್ರಾರ್ಥನಿಶ್ಚಿತಾ ।
ಸಾ ತು ಜ್ಞಾನೇಂದ್ರಿಯೈಸ್ಸಾರ್ಧಂ ವಿಜ್ಞಾನಮಯಕೋಶತಃ ॥ ೧೭ ॥

ವುದು ಆತ್ಮನೇ ಪರಬ್ರಹ್ಮನು ಅವನು ದುಃಖಲೇಪರಹಿತನು ಆದ್ದರಿಂದಲೇ ಸುಖಕ್ಕೆ ಆನಂದಕ್ಕೆ ಸಮುದ್ರನಂತಿರುವನು ಅಜ್ಞಾನವು ಬ್ರಹ್ಮನನ್ನು ವಶಪಡಿಸಿ ಕೊಳ್ಳಲಾರದು ಆದರೆ ಬ್ರಹ್ಮವಸ್ತುವು ಮಾತ್ರ ಅಜ್ಞಾನವನ್ನು ಅಧೀನಮಾಡಿ ಕೊಳ್ಳಬಲ್ಲುದು ಇಂತಹ ಬ್ರಹ್ಮವಸ್ತುವು ಪ್ರಾಣಮಯಕೋಶವು ಹೇಗಾದೀತು ?

೧೪–೧೬ ಪ್ರಾಣಮಯ ಕೋಶದ ಒಳಭಾಗದಲ್ಲಿ ಮನೋಮಯವಾದ ಕೋಶವಿರುವುದು ಅದು ಸಂಕಲ್ಪವಿಕಲ್ಪಾತ್ಮಕವಾದದ್ದು ಬುದ್ಧೀಂದ್ರಿಯದೊಡನೆ ಕೂಡಿರುವುದು ಈ ಮನೋಮಯ ಕೋಶವು, ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ ಅರಿಷಡ್ವರ್ಗಗಳಿಗೂ, ಮಮತಾ, ಇಚ್ಛಾ ಭಯಾದಿಗಳಿಗೂ ಆಶ್ರಯಸ್ಥಾನವಾಗಿರುವುದು ಮನೋಮಯಕೋಶದ ಧರ್ಮಗಳೇ ಅವು "ಕುರುತೇ ವಪುಸ್ಯಹಂ ತಾಂ ಗೇಹಾದೌ ಯಃ ಕರೋತಿ ಮಮತಾಂ ಚ । ರಾಗದ್ವೇಷವಿಧೌ ಯೋ ನಾಸಾವಾತ್ಮಾ ಮನೋಮಯಃ ಕೋಶಃ" ಹೀಗೆ ಆಚಾರ್ಯಪಾದರು ಮನೋಮಯ ಕೋಶವು ಆತ್ಮವಲ್ಲವೆಂದು ಹೇಳಿರುವರು

೧೭–೧೮ ಇದರಂತೆಯೇ ವಿಜ್ಞಾನಮಯ ಕೋಶವಿರುವುದು ಬುದ್ಧಿ ಜ್ಞಾನೇಂದ್ರಿಯಗಳು ವಿಜ್ಞಾನಮಯಕೋಶದಲ್ಲಿರುವುವು ಹಾಗೆಯೇ ವೇದ,

ಇಹ ಕರ್ತೃತ್ವಾಭಿಮಾನೀ ಸ ಏವ ತು ನ ಸಂಶಯಃ ।
ಇಹಾಮುತ್ರ ಗತಿಸ್ತಸ್ಯ ಸ ಜೀವೋ ವ್ಯಾವಹಾರಿಕಃ ॥ ೧೮ ॥

ವ್ಯೋಮಾದಿಸಾತ್ತ್ವಿಕಾಂಶೇಭ್ಯೋ ಜಾಯಂತೇ ಧೀಂದ್ರಿಯಾಣಿ ತು ।
ವ್ಯೋಮ್ನಃ ಶ್ರೋತ್ರಂ ಭುವೋ ಘ್ರಾಣಂ ಜಲಾಜ್ಜಿಹ್ವಾಥ ತೇಜಸಃ ॥ ೧೯ ॥

ಚಕ್ಷುರ್ವಾಯೋಸ್ತ್ವಗುತ್ಪನ್ನಾ ತೇಷಾಂ ಭೌತಿಕತಾ ತತಃ ।
ವ್ಯೋಮಾದೀನಾಂ ಸಮಸ್ತಾನಾಂ ಸಾತ್ತ್ವಿಕಾಂಶೇಭ್ಯ ಏವ ತು ॥ ೨೦ ॥

ಜಾಯೇತೇ ಬುದ್ಧಿಮನಸೀ ಬುದ್ಧಿಸ್ಸ್ಯಾನ್ನಿಶ್ಚಯಾತ್ಮಿಕಾ ।
ವಾಕ್ಪಾಣಿಪಾದಪಾಯೂಪಸ್ಥಾನಿ ಕರ್ಮೇಂದ್ರಿಯಾಣಿ ತು ॥ ೨೧ ॥

ಶಾಸ್ತ್ರ, ಲೋಕ ಇವುಗಳಿಂದ ನಡೆಯುವ ಸಕಲಕರ್ಮವಿಷಯಕವಾದ ಬುದ್ಧಿಗೂ ಇದು ಆಶ್ರಯವು ಹಿಂದೆ ಹೇಳಿದಂತೆ ಅನ್ನಪರಿಣಾಮವಾದ ಅನ್ನಮಯ ಕೋಶವೇ ಸ್ಥೂಲದೇಹವು ಪ್ರಾಣಮಯ, ಮನೋಮಯ, ವಿಜ್ಞಾನಮಯಗಳೆಂಬ ಮೂರು ಕೋಶಾತ್ಮಕವಾದುದಕ್ಕೆ ಸೂಕ್ಷ್ಮಶರೀರವೆಂದು ಹೆಸರು ಇವರಲ್ಲಿ ವಿಜ್ಞಾನಮಯಕೋಶವೇ ಕರ್ತೃತ್ವ, ಭೋಕ್ತೃತ್ವ, ಸುಖ, ದುಃಖ, ಇಚ್ಛೆ, ರಾಗ, ದ್ವೇಷ, ಪುಣ್ಯಪಾಪ, ಪರಲೋಕಸಂಚಾರ ಇವೇ ಮೊದಲಾದ ವ್ಯಾಪಾರವುಳ್ಳದ್ದು ಇದನ್ನೇ ವ್ಯಾವಹಾರಿಕ ಜೀವವೆನ್ನುವರು ಸೂಕ್ಷ್ಮಶರೀರವೇ ಲಿಂಗ ಶರೀರವು ಇದು ಹದಿನೇಳು ಕಲಾತ್ಮಕವಾದದ್ದು ಇಂತಹ ಸ್ಥೂಲಸೂಕ್ಷ್ಮ ಶರೀರಕ್ಕೆ ಕಾರಣವಾಗಿರುವ ಅವಿದ್ಯೆ ಎಂಬ ಅಜ್ಞಾನವೇ ಜೀವಾತ್ಮನಿಗೆ ಕಾರಣ ಶರೀರವಾಗಿಯೂ, ಕೋಶದಂತೆ ಆವರಣರೂಪವಾಗಿಯೂ, ಆನಂದಪ್ರಚುರವಾಗಿಯೂ ಇರುವುದು ಸುಷುಪ್ತ್ಯವಸ್ಥೆಯಲ್ಲಿ, ಸ್ಥೂಲಸೂಕ್ಷ್ಮ ಶರೀರಗಳ ಉಪಯೋಗವಿಲ್ಲದೆ ಇದ್ದರೂ ಅವಿದ್ಯಾಶಕ್ತಿಯಿಂದ ಸುಖಾನುಭವವಾಗುವುದು ಈ ಕಾರಣಶರೀರದಲ್ಲಿ, ಇದನ್ನೇ ಆನಂದಮಯಕೋಶವೆನ್ನುವರು

೧೯–೨೨ ಸತ್ತ್ವಗುಣಪ್ರಧಾನವಾದ ಪಂಚಭೂತಗಳಿಂದ ಕ್ರಮವಾಗಿ ಚಕ್ಷುರಾದಿ ಪಂಚ ಜ್ಞಾನೇಂದ್ರಿಯಗಳು, ಮಿಲಿತವಾದ ಪಂಚಭೂತ ಸಮುದಾಯ

ವ್ಯೋಮಾದೀನಾಂ ರಜೋಂಶೇಭ್ಯೋ ವ್ಯಸ್ತೇಭ್ಯಸ್ತಾನ್ಯನುಕ್ರಮಾತ್ ।
ಸಮಸ್ತೇಭ್ಯೋ ರಜೋಂಶೇಭ್ಯಃ ಪಂಚ ಪ್ರಾಣಾದಿವಾಯವಃ ॥ ೨೨ ॥

ಜಾಯಂತೇ ಸಪ್ತದಶಕಮೇವಂ ಲಿಂಗಶರೀರಕಂ ।
ಏತಲ್ಲಿಂಗಶರೀರಂ ತು ತಪ್ತಾಯಃ ಪಿಂಡವದ್ಯತಃ ॥ ೨೩ ॥

ಪರಸ್ಪರಾಧ್ಯಾಸಯೋಗಾತ್ಸಾಕ್ಷಿಚೈತನ್ಯಸಂಯುತಂ ।
ತದಾನಂದಮಯಃ ಕೋಶೋ ಭೋಕ್ತೃತ್ವಂ ಪ್ರತಿಪದ್ಯತೇ ॥ ೨೪ ॥

ದಿಂದ ಮನಸ್ಸು, ಬುದ್ಧಿ, (ಅಹಂಕಾರ, ಚಿತ್ತಗಳೆಂಬ ನಾಲ್ಕು) ಗಳೆಂಬ ಅಂತಃ ಕರಣಗಳೂ ಹುಟ್ಟುವುವು, ಅದರಲ್ಲಿ ಆಕಾಶದಿಂದ ಶ್ರೋತ್ರೇಂದ್ರಿಯವೂ ಭೂಮಿಯಿಂದ ಘ್ರಾಣೇಂದ್ರಿಯವೂ, ಜಲದಿಂದ ಜಿಹ್ವೇಂದ್ರಿಯವೂ, ತೇಜಸ್ಸಿನಿಂದ ಚಕ್ಷುರಿಂದ್ರಿಯವೂ, ವಾಯುವಿನಿಂದ ತ್ವಗಿಂದ್ರಿಯವೂ ಉತ್ಪನ್ನವಾಗಿರುವುವು ಬುದ್ಧಿಯು ನಿಶ್ಚಯಾತ್ಮಕವಾದದ್ದು, ಮನಸ್ಸು ಸಂಶಯಾತ್ಮಕವಾದುದು ವಾಕ್, ಪಾಣಿ, ಪಾದ, ಪಾಯು, ಉಪಸ್ಥಗಳೆಂಬುವುಗಳೇ ಪಂಚ ಕರ್ಮೇಂದ್ರಿಯಗಳು ಇವು ರಜೋಗುಣಪ್ರಧಾನವಾದ ಪಂಚಭೂತಗಳಿಂದ ಹುಟ್ಟುವುವು ಹಾಗೆಯೇ ರಜೋಗುಣ ಪ್ರಧಾನವಾದ ಪಂಚಭೂತಗಳ ಸಮುದಾಯದಿಂದ ಪ್ರಾಣಾಪಾನ ವ್ಯಾನೋದಾನಸಮಾನಗಳೆಂಬ ಪಂಚಪ್ರಾಣಾದಿವಾಯುಗಳು ಉತ್ಪನ್ನವಾಗುವುವು

೨೩–೨೪ ಹೀಗೆ ಬುದ್ಧಿ, ಮನಸ್ಸು, ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಪಂಚಪ್ರಾಣಗಳೂ ಸೇರಿ ಜೀವಾತ್ಮನಿಗೆ ಹದಿನೇಳು ಅವಯವಗಳುಳ್ಳ ಲಿಂಗಶರೀರವುತ್ಪನ್ನವಾಗಿ ಮೋಕ್ಷಪರ್ಯಂತವಿರುವುದು ಈ ಲಿಂಗಶರೀರವು ಜಾಗ್ರತ್ಸ್ವಪ್ನಾವಸ್ಥೆಗಳಲ್ಲಿ ಕಾದ ಕಬ್ಬಿಣದ ಗುಂಡಿನಂತೆ, ಪರಸ್ಪರಾಧ್ಯಾಸಯೋಗದಿಂದ ಸಾಕ್ಷಿಚೈತನ್ಯದಿಂದ ಕೂಡಿರುವುದು ಆನಂದಮಯ ಕೋಶವು ಲಿಂಗಶರೀರಾಧ್ಯಾಸದಿಂದ ಸರ್ವಕರ್ಮಫಲಭೋಕ್ತೃತ್ವವನ್ನು ಪಡೆಯು

ವಿದ್ಯಾಕರ್ಮಫಲಾದೀನಾಂ ಭೋಕ್ತೇಹಾಮುತ್ರ ಸ ಸ್ಮೃತಃ ।
ಯದಾಧ್ಯಾಸಂ ವಿಹಾಯೈಷ ಸ್ವಸ್ವರೂಪೇಣ ತಿಷ್ಠತಿ ॥ ೨೫ ॥

ಅವಿದ್ಯಾಮಾತ್ರಸಂಯುಕ್ತಃ ಸಾಕ್ಷ್ಯಾತ್ಮಾ ಜಾಯತೇ ತದಾ ।
ದ್ರಷ್ಟಾಂತಃಕರಣಾದೀನಾಮನುಭೂತೇಃ ಸ್ಮೃತೇರಪಿ ॥ ೨೬ ॥

ಅತೋಂತಃಕರಣಾಧ್ಯಾಸಾದಧ್ಯಸ್ತತ್ವೇನ ಚಾತ್ಮನಿ ।
ಭೋಕ್ತೃತ್ವಂ ಸಾಕ್ಷಿತಾ ಚೇತಿ ದ್ವೈಧಂ ತಸ್ಯೋಪಪದ್ಯತೇ ॥ ೨೭ ॥

ಆತಪಶ್ಚಾಪಿ ತಚ್ಛಾಯಾ ತತ್ಪ್ರಕಾಶೇ ವಿರಾಜತೇ ।
ಏಕೋ ಭೋಜಯಿತಾ ತತ್ರ ಭುಙ್ಕ್ತೇಽನ್ಯಃ ಕರ್ಮಣಃ ಫಲಂ ॥ ೨೮ ॥

ವುದು ಉಪಾಸನಾದಿ ವಿದ್ಯೆಗಳ ಶ್ರೌತಾದಿಕರ್ಮಗಳ ಸಕಲಫಲವನ್ನೂ ಅನುಭವಿಸುವ ಶಕ್ತಿಯು ಆನಂದಮಯಕೋಶಾವಚ್ಛಿನ್ನನಾದ ಜೀವನಿಗೆ ಸಲ್ಲುವುದು.

೨೬–೨೮ ಸುಷುಪ್ತ್ಯವಸ್ಥೆಯಲ್ಲಿ ಈ ಆತ್ಮನು ಲಿಂಗಾಧ್ಯಾಸವನ್ನು ಬಿಟ್ಟು ತನ್ನಲ್ಲಿ ಪ್ರತಿಬಿಂಬರೂಪದಿಂದಲೇ, ಸಮುದ್ರದಲ್ಲಿ ಮುಳುಗಿರುವ ಗಡಿಗೆ (ಘಟ) ಯಂತೆ ಇರುವನು ಅವಿದ್ಯಾಮಾತ್ರಸಂಯುಕ್ತನಾಗಿ ಆತ್ಮನು ಆಗ ಸಾಕ್ಷಿಯಾಗಿರುವನು "ಏಷ ಸಂಪ್ರಸಾದೋಽಸ್ಮಚ್ಛರೀರಾತ್ಸಮುತ್ಥಾಯ ಪರಂ ಜ್ಯೋತೀರೂಪಂ ಸಂಪದ್ಯತೇ'' ಎಂಬ ಶ್ರುತಿಯೂ ಇದನ್ನೇ ವಿವರವಾಗಿ ತಿಳಿಸುವುದು ಅಂತಃಕರಣವೇ ಮೊದಲಾದ ಸಮಸ್ತ ಇಂದ್ರಿಯಗಳಿಗೂ, ಅವುಗಳ ವೃತ್ತಿಗಳಿಗೂ, ಅವುಗಳಿಂದ ಉಂಟಾಗುವ ಅನುಭವಕ್ಕೂ, ಸ್ಮೃತಿಗೂ, ಸಾಕ್ಷೀರೂಪನಾಗಿಯೂ ಭೋಕ್ತೃವಾಗಿಯೂ ಆಗುವನು ಅಂದರೆ ಅಂತಃಕರಣದ ಅಧ್ಯಾಸವು ಆತ್ಮನಿಗಿದ್ದಾಗ ಆತ್ಮನು ಭೋಕ್ತೃವೆನಿಸುವನು ಅಂತಃಕರಣಾಧ್ಯಾಸವಿಲ್ಲದಾಗ ಆತ್ಮನು ಸಾಕ್ಷಿಯಾಗುವನು ಈ ಎರಡು ಅವಸ್ಥೆಗಳೂ ಆತ್ಮನಿಗುಂಟು ಹೇಗೆಂದರೆ ಸೂರ್ಯನ ಪ್ರಕಾಶದಲ್ಲಿ ಬಿಸಿಲೂ, ನೆರಳೂ ಈ ಎರಡೂ ಇರುತ್ತವೆ ಅದರಲ್ಲಿ ಒಂದು ಕರ್ಮಫಲ ಭೋಕ್ತೃವಾಗಿಯೂ ಮತ್ತೊಂದು ಸಾಕ್ಷಿರೂಪವಾಗಿಯೂ ಇರುವಂತೆ, ಆತ್ಮನಿಗೂ ಅಧ್ಯಾಸಭಾವರೂಪದಿಂದ ಆ ಎರಡು ಧರ್ಮಗಳೂ ಇರುತ್ತವೆ

ಕ್ಷೇತ್ರಜ್ಞಂ ರಥಿನಂ ವಿದ್ಧಿ ಶರೀರಂ ರಥಮೇವ ಚ ।
ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ ॥ ೨೯ ॥

ಇಂದ್ರಿಯಾಣಿ ಹಯಾನ್ವಿದ್ಧಿ ವಿಷಯಾಂಸ್ತೇಷು ಗೋಚರಾನ್ ।
ಇಂದ್ರಿಯೈರ್ಮನಸಾ ಯುಕ್ತಂ ಭೋಕ್ತಾರಂ ವಿದ್ಧಿ ಪೂರುಷಂ ॥ ೩೦ ॥

ಏವಂ ಶಾಂತ್ಯಾದಿಯುಕ್ತಸ್ಸನ್ನುಪಾಸ್ತೇ ಯಃ ಸದಾ ದ್ವಿಜಃ ।
ಉದ್ಘಾಟ್ಯೋದ್ಘಾಟ್ಯೈಕಮೇಕಂ ಯಥೈವ ಕದಲೀತರೋಃ ॥ ೩೧ ॥

ವಲ್ಕಲಾನಿ ತತಃ ಪಶ್ಚಾಲ್ಲಭತೇ ಸಾರಮುತ್ತಮಂ ।
ತಥೈವ ಪಂಚಕೋಶೇಷು ಮನಃ ಸಂಕ್ರಾಮಯನ್ ಕ್ರಮಾತ್ ॥ ೩೨ ॥

೨೯–೩೦ ಶ್ರೀರಾಮನೇ, ಕ್ಷೇತ್ರಜ್ಞನೆನಿಸಿದ ಆತ್ಮನನ್ನು ರಥಿಕನಂತೆಯೂ ಅವನಿಗಾಶ್ರಯವಾದ ದೇಹವನ್ನೇ ರಥದಂತೆಯೂ, ತಿಳಿ ಮನಸ್ಸನ್ನೇ ಹಗ್ಗನೆಂದೂ ಇಂದ್ರಿಯಗಳನ್ನೇ ಕುದುರೆಗಳೆಂದೂ, ಪೃಥುಲವಾದ ವಿಷಯಗಳನ್ನೇ ಬೀದಿಗಳೆಂದೂ, ಮತಿಯನ್ನೇ ಸಾರಥಿಯೆಂದೂ ಭಾವಿಸು ಹೀಗೆ ಆತ್ಮನು ಇಂದ್ರಿಯಗಳಿಂದಲೂ ಅಂತಃಕರಣಗಳಿಂದಲೂ ಯುಕ್ತನಾದಾಗ ಪುರುಷನನ್ನು ಫಲಭೋಕ್ತೃವನ್ನಾಗಿ ತಿಳಿ ಹಾಗೆ ಇಂದ್ರಿಯಾಂತಃಕರಣಗಳಿಲ್ಲದಿದ್ದರೆ ಅವನು ಶುದ್ಧಾತ್ಮನೆನಿಸಿ ಸಕಲವಿಧವಾದ ಫಲಾನುಭವಕ್ಕೆ ದೂರನಾಗಿ ಅವನು ಆನಂದಮಯನಾಗುವನು

೩೧–೩೨ ಈ ರೀತಿ ಆತ್ಮಸ್ವರೂಪವನ್ನರಿತು, ಶಮದಮಾದಿಗುಣಯುಕ್ತನಾಗಿ, ಬಾಳೆ ಕಂಬದ ಮೇಲಿರುವ ನಾರಿನ ಪಟ್ಟೆಗಳಲ್ಲಿ ಒಂದೊಂದನ್ನಾಗಿ ತೆಗೆದು, ಕೊನೆಯಲ್ಲಿ ಸಾರವಾದ ಬಾಳೆಯ ದಿಂಡನ್ನು ಪಡೆಯುವಂತೆ, ಪಂಚಕೋಶಗಳೆಂಬ ಆವರಣಗಳಲ್ಲಿ ಒಂದೊಂದರ ಸ್ವರೂಪವನ್ನೇ ಕ್ರಮವಾಗಿ ಅರಿತು, ಒಂದೊಂದನ್ನೇ ನಿರಾಕರಿಸುತ್ತಾ ಕೊನೆಗೆ ಸಾರವಾದ ಆತ್ಮಭಾವವನ್ನು ಅರಿಯಬೇಕು ಪಂಚಕೋಶಗಳಲ್ಲಿ ಅಧಿಷ್ಠಾನರೂಪವಾಗಿರುವ ಬ್ರಹ್ಮ ವಸ್ತುವಿನಲ್ಲಿ ಮನಸ್ಸನ್ನು

ತೇಷಾಂ ಮಧ್ಯೇ ತತಃ ಸಾರಮಾತ್ಮಾನಮಪಿ ವಿಂದತಿ ।
ಏವಂ ಮನಸ್ಸಮಾಧಾಯ ಸಂಯತೋ ಮನಸಿ ದ್ವಿಜಃ ॥ ೩೩ ॥

ಅಥ ಪ್ರವರ್ತಯೇಚ್ಚಿತ್ತಂ ನಿರಾಕಾರೇ ಪರಾತ್ಮನಿ ।
ತತೋ ಮನಃ ಪ್ರಗೃಹ್ಣಾತಿ ಪರಮಾತ್ಮಾನಮೇಕಲಂ ॥ ೩೪ ॥

ಯತ್ತದದ್ರೇಶ್ಯಮಗ್ರಾಹ್ಯಮಸ್ಥೂಲಾದ್ಯುಕ್ತಿಗೋಚರಂ ।

॥ ಶ್ರೀರಾಮ ಉವಾಚ ॥

ಭಗವನ್ ಶ್ರವಣೇನೈವ ಪ್ರವರ್ತಂತೇ ಜನಾಃ ಕಥಂ ॥ ೩೫ ॥

ವೇದಶಾಸ್ತ್ರಾರ್ಥಸಂಪನ್ನಾ ಯಜ್ವಾನಃ ಸತ್ಯವಾದಿನಃ ।
ಶೃಣ್ವಂತೋಽಪಿ ತಥಾತ್ಮಾನಂ ಜಾನತೇ ನೈವ ಕೇಚನ ॥ ೩೬ ॥

---

ಸ್ಥಿರವಾಗಿಟ್ಟು, ಮನನದಿಂದ ಭಾವಸ್ಥಿರಪಡಿಸಿಕೊಂಡು, ಅನಂತರ ನಿರಾಕಾರನಾದ ಪರಮಾತ್ಮನಲ್ಲಿ ನಿದಿಧ್ಯಾಸದಿಂದ ಚಿತ್ತವನ್ನು ನಿಶ್ಚಲವಾಗಿ ಆತ್ಮನಲ್ಲಿಡಬೇಕು

೩೪ ಹಿಂದೆ ಹೇಳಿದಂತೆ ಸಗುಣೋಪಾಸನಾಕ್ರಮದಿಂದ ಪುರುಷನಲ್ಲಿಟ್ಟ ಮನಸ್ಸನ್ನು, ಮನಸ್ಸಿಗೂ, ಮಾತಿಗೂ, ಅಗೋಚರನೆನಿಸಿರುವ ನಿರ್ಗುಣನಿರಾಕಾರ ಬ್ರಹ್ಮನಲ್ಲಿ ನಿಲ್ಲಿಸಿದರೆ, ಆಗ ಬ್ರಹ್ಮಸಾಕ್ಷಾತ್ಕಾರವಾಗುವುದು ಇದೇ ಸಗುಣೋಪಾಸನೆಯಿಂದ ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುವ ರೀತಿ, ಎಂದು ಪರಮೇಶ್ವರನು ಸೀತಾಪತಿಯಾದ ಶ್ರೀರಾಮನಿಗೆ ಬೋಧಿಸಿದನು

೩೫–೩೬ ಇದನ್ನು ಕೇಳಿ ಶ್ರೀರಾಮನು ಮತ್ತೆ ಪರಶಿವನನ್ನು ಕುರಿತು "ಮಹಾದೇವನೇ, ಇಷ್ಟು ಆತ್ಮವಿಷಯಗಳಿದ್ದರೂ ಯಾಗಾದಿ ಸತ್ಕರ್ಮನಿರತರಾದವರೂ, ಸತ್ಯವಾದಿಗಳೂ, ವೇದಶಾಸ್ತ್ರಜ್ಞರೂ, ಸಂಪೂರ್ಣ ವಿದ್ಯೆಯಲ್ಲಿ ಪೂರ್ಣ ಪಾಂಡಿತ್ಯವನ್ನು ಪಡೆದಿದ್ದರೂ ಕೂಡ, ಏತಕ್ಕಾಗಿ ಈ ಆತ್ಮವಿದ್ಯಾಶ್ರವಣದಲ್ಲಿ ಹೆಚ್ಚು ಆಸಕ್ತಿವಹಿಸುವುದಿಲ್ಲ? ಒಂದುವೇಳೆ ಆಸಕ್ತರಾಗಿದ್ದರೂ ಆತ್ಮನ ಸ್ವರೂಪವನ್ನೇ

ಜ್ಞಾತ್ವಾಪಿ ಮನ್ವತೇ ಮಿಥ್ಯಾ ಕಿಮೇತತ್ತ್ವವ ಮಾಯಯಾ ।

॥ ಶ್ರೀ ಮಹಾದೇವ ಉವಾಚ ॥

ಏವಮೇವ ಮಹಾಬಾಹೋ ನಾತ್ರ ಕಾರ್ಯಾ ವಿಚಾರಣಾ ॥ ೩೭ ॥

ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।
ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ॥ ೩೮ ॥

ಅಭಕ್ತಾ ಯೇ ಮಹಾಬಾಹೋ ಮಮ ಶ್ರದ್ಧಾವಿವರ್ಜಿತಾಃ ।
ಫಲಂ ಕಾಮಯಮಾನಾಸ್ತೇ ತ್ವೈಹಿಕಾಮುಷ್ಮಿಕಾದಿಕಂ ॥ ೩೯ ॥

ಕ್ಷಯಿಷ್ಣ್ವಲ್ಪಂ ಸಾತಿಶಯಂ ಯತಃ ಕರ್ಮಫಲಂ ಮತಂ ।
ತದವಿಜ್ಞಾಯ ಕರ್ಮಾಣಿ ಯೇ ಕುರ್ವಂತಿ ನರಾಧಮಾಃ ॥ ೪೦ ॥

ಪೂರ್ಣವಾಗಿ ಅರಿಯರು ತಿಳಿದರೂ ಇದು ಸುಳ್ಳೆನ್ನುವರು ಇದಕ್ಕೇನು ಕಾರಣ? ಇದೆಲ್ಲವೂ ನಿನ್ನ ಮಾಯೆಯೋ! ಏನೋ, ಇದರ ತತ್ತ್ವಂ"ವೇನು ಹೇಳು" ಎಂದು ಪ್ರಾರ್ಥಿಸಲು ಆಗ ಪರಮೇಶ್ವರನು ಹೀಗೆ ನುಡಿದನು

೩೭–೪೦ ಎಲೈ ಜ್ಞಾನಿಯಾದ ಶ್ರೀರಾಮನೇ, ಕೇಳು ನೀನು ಹೇಳುವಂತೆ ವಿದ್ವಜ್ಜನರೂ ಆತ್ಮಸ್ವರೂಪವನ್ನರಿಯದಿರುವುದಕ್ಕೆ ನನ್ನ ಮಾಯೆಯೇ ಕಾರಣ ನನ್ನ ಮಾಯೆಯು ತ್ರಿಗುಣಭರಿತವಾದದ್ದು ಲೀಲಾಚರಿತವುಳ್ಳದ್ದು. ಯಾರಿಗೂ ಆ ಮಾಯೆಯನ್ನು ಮೀರಲು ಅಸದಳ ಜಗತ್ತನ್ನೆಲ್ಲಾ ಮೋಹಕ್ಕೊಳಪಡಿಸುವ ಶಕ್ತಿ ಆ ಮಾಯೆಗಿದೆ ಆದರೆ ಯಾರು ನನ್ನನ್ನು ಬಹಳವಾಗಿ ಮೊರೆಹೊಕ್ಕು ಸ್ಥಿರ ಭಕ್ತಿಯುಳ್ಳವರಾಗಿರುವರೋ, ಅವರಿಗೆ ಮಾತ್ರ ಆ ಮಾಯೆಯ ಉಪದ್ರವವು ತಟ್ಟಲಾರದು ನನ್ನಲ್ಲಿ ಅಷ್ಟು ಭಕ್ತಿ ವಿಶ್ವಾಸಗಳನ್ನಿಡದೆ, ಐಹಿಕವಾದ ಮತ್ತು ಆಮುಷ್ಮಿಕವಾದ ಕ್ಷಣಿಕ ಸುಖಗಳನ್ನು ಬಯಸುತ್ತಾ, ಅಂತಹ ಕ್ಷಣಿಕ ಸೌಖ್ಯವನ್ನು ಒದಗಿಸುವ ಕರ್ಮಮಾರ್ಗವನ್ನವಲಂಬಿಸಿ ಕಾಲಕಳೆಯುವರು ಅದರಿಂದಲೇ ಈ ಜನನ ಮರಣಾತ್ಮಕವಾದ ಸಂಸಾರಚಕ್ರದಲ್ಲಿ ಸುತ್ತಿ ಅವರು ನರಳುವರು

ಮಾತುಃ ಪತಂತಿ ತೇ ಗರ್ಭೇ ಮೃತ್ಯೋರ್ವಕ್ತ್ರೇ ಪುನಃ ಪುನಃ ॥
ನಾನಾಯೋನಿಷು ಜಾತಸ್ಯ ದೇಹಿನೋ ಯಸ್ಯ ಕಸ್ಯಚಿತ್ ॥ ೪೧ ॥

ಕೋಟಿಜನ್ಮಾರ್ಜಿತೈಃ ಪುಣ್ಯೈರ್ಮಯಿ ಭಕ್ತಿಃ ಪ್ರಜಾಯತೇ ।
ಸ ಏವ ಲಭತೇ ಜ್ಞಾನಂ ಮದ್ಭಕ್ತಃ ಶ್ರದ್ಧಯಾನ್ವಿತಃ ॥ ೪೨ ॥

ನಾನ್ಯಃ ಕರ್ಮಾಣಿ ಕುರ್ವಾಣೋ ಜನ್ಮಕೋಟಿಶತೈರಪಿ ।
ತತಃ ಸರ್ವಂ ಪರಿತ್ಯಜ್ಯ ಮದ್ಭಕ್ತಿಂ ಸಮುದಾಹರ ॥ ೪೩ ॥

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥ ೪೪ ॥

---

೪೧–೪೩ ಆರೀತಿ ಕರ್ಮಮಾರ್ಗದಲ್ಲಿ ಪ್ರವೇಶಿಸಿ, ಕರ್ಮಾನುಗುಣವಾಗಿ ನಾನಾ ಯೋನಿಗಳಲ್ಲಿ ಜನ್ಮತಾಳುವರು ಕೋಟ್ಯಂತರ ಜನ್ಮಗಳಲ್ಲಿ ಸಂಪಾದಿಸಿದ ಪುಣ್ಯವಶದಿಂದ ಯಾವುದೋ ಒಂದು ಜನ್ಮದಲ್ಲಿ ನನ್ನ ವಿಷಯಕವಾದ ಭಕ್ತಿಯುದಯಿಸಿ, ಆದರಿಂದ ನನ್ನನ್ನು ಆರಾಧಿಸಿ, ನನ್ನ ಮಾಯೆಗೊಳಗಾಗದೆ ಆತ್ಮಜ್ಞಾನವನ್ನು ಪಡೆದು ನನ್ನ ಸ್ವರೂಪವನ್ನೇ ಹೊಂದುವರು ಹಾಗಲ್ಲದೆ ಯಾವಾಗಲೂ ಕರ್ಮಮಾರ್ಗದಲ್ಲಿಯೇ ನಡೆಯುವವನಿಗೆ ಎಂದಿಗೂ ದುಃಖರಹಿತವಾದ ಮುಕ್ತಿಯು ದೊರೆಯಲಾರದು

೪೪–೪೫ ಆದ್ದರಿಂದ ಎಲೈ ಶ್ರೀರಾಮನೇ, ನೀನು ಎಲ್ಲ ಕರ್ಮಮಾರ್ಗವನ್ನೂ ತ್ಯಜಿಸಿ, ಇತರ ಧರ್ಮಾದಿಗಳಿಗೆ ಮನಗೊಡದೆ, ನನ್ನನ್ನೇ ಶರಣುಹೊಂದು ನಾನು ನಿನ್ನ ಸಮಸ್ತ ಪಾಪರಾಶಿಯನ್ನೂ ದೂರಮಾಡಿ ನಿನಗೆ ಶುದ್ಧಜ್ಞಾನವನ್ನು ಕರುಣಿಸಿ ಮುಕ್ತನನ್ನಾಗಿ ಮಾಡುವೆನು ನೀನು ಮಾಡುವ ಸಮಸ್ತಕಾರ್ಯವನ್ನೂ, ತಿನ್ನುವ ಸಕಲ ಆಹಾರವನ್ನೂ, ಹೋಮಮಾಡುವ ಸಕಲ ಆಹುತಿಗಳನ್ನೂ, ತಪಃಫಲವನ್ನೂ ನನಗೆ ಸಮರ್ಪಣೆ ಮಾಡು ನನ್ನನ್ನೇ ಶರಣುಹೊಂದು ಆ ಶರಣುಹೊಂದುವುದಾವದೋ, “ತಸ್ಯೈವಾಹಂ, ಮಮೈವಾಸೌ, ಸ ಏವಾಹಮಿತಿ ತ್ರಿಧಾ

ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।
ಯತ್ತಪಸ್ಯಸಿ ರಾಮ ತ್ವಂ ತತ್ಕುರುಷ್ವ ಮದರ್ಪಣಂ ॥
ತತಃ ಪರತರಂ ನಾಸ್ತಿ ಭಕ್ತಿರ್ಯದಿ ರಘೂತ್ತಮ ॥ ೪೫ ॥

ಇತಿ ಶ್ರೀ ಪದ್ಮಪುರಾಣೇ ಶ್ರೀಶಿವಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಶಿವರಾಘವಸಂವಾದೇ ಪಂಚಕೋ
ಶೋಪಾಸನಯೋಗೋ ನಾಮ

॥ ಚತುರ್ದಶೋಽಧ್ಯಾಯಃ ॥

ಭಗವಚ್ಛರಣತ್ವಂ ಸ್ಯಾತ್ಸಾಧನಾಭ್ಯಾಸ ಪಾಕತಃ" ಎಂಬ ರೀತಿಯಂತೆ, ದೇವರಿಗಾಗಿ ನಾನು, ನನಗಾಗಿ ದೇವರು, ನಾನೇ ದೇವರು ಈ ರೀತಿ ಮೂರು ವಿಧವಾದ ಭಾವನೆಯುಳ್ಳದ್ದಾಗಿರುವುದು ಈ ಕ್ರಮಿಕ ಭಾವನೆಗಳಿಂದ ಯಾರು ನನ್ನನ್ನು ಭಕ್ತಿಯಿಂದ ತೃಪ್ತಿಪಡಿಸುವರೋ, ಅವರಿಗೆ ಸ್ವಸ್ವರೂಪವನ್ನು ಕರುಣಿಸುವೆನು. ನನ್ನ ವಿಷಯಕವಾದ ಭಕ್ತಿಗಿಂತ ದೊಡ್ಡ ವಸ್ತುವೇ ಬೇರೊಂದಿಲ್ಲ ಎಂದು ಪರಮೇಶ್ವರನು ಶ್ರೀರಾಮನಿಗೆ ಶಿವಭಕ್ತಿಯ ಪಾರಮ್ಯವನ್ನು ವಿವರಿಸಿದನು

ಇಲ್ಲಿಗೆ ಶ್ರೀ ಪದ್ಮಪುರಾಣದ ಶಿವಗೀತೆಯಲ್ಲಿ ಪಂಚಕೋಶೋಪಾಸನಯೋಗವೆಂಬ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

# ಶ್ರೀ ಶಿವಗೀತಾ

---

## ॥ ಅಥ ಪಂಚದಶೋಽಧ್ಯಾಯಃ ॥

॥ ಶ್ರೀರಾಮ ಉವಾಚ ॥

ಭಕ್ತಿಸ್ತೇ ಕೀದೃಶೀ ದೇವ ಜಾಯತೇ ವಾ ಕಥಂಚನ ।
ಯಯಾ ನಿರ್ವಾಣರೂಪತ್ವಂ ಲಭತೇ ಮೋಕ್ಷಮುತ್ತಮಮ್ ॥ ೧ ॥

ತದ್ಬ್ರೂಹಿ ಗಿರಿಜಾಕಾಂತ ಪ್ರಾಪ್ಯತೇ ಯೇನ ಸರ್ವತಃ ।
॥ ಶ್ರೀ ಮಹಾದೇವ ಉವಾಚ ॥
ಯೋ ವೇದಾಧ್ಯಯನಂ ಯಜ್ಞಂ ದಾನಾನಿ ವಿವಿಧಾನಿ ಚ ॥ ೨ ॥

## ಹದಿನೈದನೆಯ ಅಧ್ಯಾಯ

೧-೨ ಶ್ರೀರಾಮನು ಶಿವಭಕ್ತಿಯ ಮಹಿಮೆಯನ್ನು ಶಿವನಿಂದಲೇ ಕೇಳಿ, ಅದರ ವಿಶೇಷಲಕ್ಷಣವನ್ನೂ, ಅದನ್ನು ಪಡೆಯುವ ಉಪಾಯವನ್ನೂ ತಿಳಿಯ ಲಿಚ್ಛೆಯಿಂದ ಮಹೇಶ್ವರನನ್ನು ಕುರಿತು, "ದೇವದೇವನೇ, ಶಿವಭಕ್ತಿಯುತನಾದವ ನಿಗೆ ಆನಂದಮಯವಾದ ಮೋಕ್ಷವೂ, ಸಂಸಾರನಿವೃತ್ತಿಯೂ ಆಗುವುದೆಂದು ಹೇಳಿದೆಯಲ್ಲವೆ! ಅಂತಹ ಭಕ್ತಿಸ್ವರೂಪವನ್ನೂ, ಭಕ್ತಿಸಾಧನಾ ಮಾರ್ಗವನ್ನೂ ಉಪದೇಶಿಸು" ಎಂದು ಕೇಳಿಕೊಳ್ಳಲು, ದಯೊಳುವಾದ ಶಂಕರನು ಹೀಗೆಂದನು

ಮದರ್ಪಣಧಿಯಾ ಕುರ್ಯಾತ್ಸ ಮೇ ಭಕ್ತಃ ಸ ಮೇ ಪ್ರಿಯಃ ।
ಅವಿಮುಕ್ತೇ ದಂಡಕಾಯಾಂ ಶ್ರೀಶೈಲೇ ಪುಂಡರೀಕಕೇ ॥ ೩ ॥

ಯ ಉಪಾಸ್ತೇ ಸದಾಕಾರಂ ಸ ಮೇ ಭಕ್ತಃ ಸ ಮೇ ಪ್ರಿಯಃ ।
ಯೋ ಹಿ ಭಸ್ಮ ಸಮಾದಾಯ ವಿಶುದ್ಧಂ ಶ್ರೋತ್ರಿಯಾಲಯಾತ್ ॥ ೪ ॥

ಅಗ್ನಿರಿತ್ಯಾದಿಭಿರ್ಮಂತ್ರೈರಭಿಮಂತ್ರ್ಯ ಯಥಾವಿಧಿ ।
ಉದ್ಧೂಳಯತಿ ಗಾತ್ರಾಣಿ ತೇನ ಚಾರ್ಚತಿ ಮಾಮಪಿ ॥ ೫ ॥

ತಸ್ಮಾತ್ಪರತರೋ ಭಕ್ತೋ ಮಮ ರಾಮ ನ ವಿದ್ಯತೇ ।
ಸರ್ವದಾ ಶಿರಸಾ ಕಂಠೇ ರುದ್ರಾಕ್ಷಾನ್ಧಾರಯೇತ್ತು ಯಃ ॥ ೬ ॥

೩–೫ ಶ್ರೀರಾಮನೇ ಕೇಳು ಯಾರು ವೇದಾಧ್ಯಯನಾದಿಗಳನ್ನು ನಡೆಸಿ ಯಾಗಾದಿ ಕರ್ಮನಿರತರಾಗಿ, ತಾವು ಮಾಡಿದ ಸಕಲ ಕರ್ಮಗಳನ್ನೂ ನನಗೆ ಸಮರ್ಪಣೆಮಾಡುವರೋ, ಅಂದರೆ ನನ್ನ ತೃಪ್ತಿಗಾಗಿ ಸಮಸ್ತ ಕರ್ಮಗಳನ್ನೂ ಕೈಗೊಳ್ಳುವರೋ, ಅವರೇ ನನ್ನ ಪ್ರಿಯಭಕ್ತರು ಯಾರು ಕಾಶೀಕ್ಷೇತ್ರ, ದಂಡ ಕಾರಣ್ಯ, ಶ್ರೀಶೈಲ, ಪುಂಡರೀಕಕ್ಷೇತ್ರ ಇಂತಹ ಪವಿತ್ರ ಸ್ಥಳಗಳಲ್ಲಿ ಆಕಾಶಸಹಿತನಾದ ನನ್ನನ್ನು ಭಯಭಕ್ತಿಗಳಿಂದ ಆರಾಧಿಸುವರೋ, ಅವರೇ ನನ್ನ ಪ್ರಿಯಭಕ್ತರು ಶುದ್ಧಶ್ರೋತ್ರಿಯರ ಗೃಹದಲ್ಲಿ ಅಗ್ನಿಹೋತ್ರಾದಿ ಕರ್ಮಾಂಗವಾಗಿ ನಡೆಸಿದ ಅಗ್ನಿಯಿಂದ ಉಪಲಬ್ಧವಾದ ಭಸ್ಮವನ್ನು ತಂದು, ಅದನ್ನು 'ಅಗ್ನಿರಿತಿಭಸ್ಮ' ಮುಂತಾದ ಭಸ್ಮಶುದ್ಧಿಕರವಾದ ಮಂತ್ರದಿಂದ ಅಭಿಮಂತ್ರಿಸಿ, ಅದರಿಂದ ತನ್ನ ದೇಹಕ್ಕೂ ಉದ್ಧೂಲನ ಮಾಡಿಕೊಂಡು, ನನ್ನನ್ನು ಅರ್ಚಿಸುವರೋ, ಅವರನ್ನೂ ನಾನು ಭಕ್ತರೆಂದು ತಿಳಿಯುವೆನು ಇಂತಹವರಿಗಿಂತ ಶ್ರೇಷ್ಠರಾದ ಭಕ್ತರು ನನಗಿಲ್ಲವೆಂದೇ ಭಾವಿಸುವೆನು.

೬–೮ ಯಾವಾಗಲೂ, ಶಿರಸ್ಸಿನಲ್ಲಿಯೂ, ಕಂಠಪ್ರದೇಶದಲ್ಲಿಯೂ, ರುದ್ರಾಕ್ಷ ಮಾಲೆಗಳನ್ನು ಧರಿಸಿ, ಶಿವಪಂಚಾಕ್ಷರಿಯನ್ನು ಜಪಿಸುವವನೂ ನನ್ನ ಭಕ್ತನೆನಿಸು

ಪಂಚಾಕ್ಷರೀಜಪಪರಃ ಸ ಮೇ ಭಕ್ತಃ ಸ ಮೇ ಪ್ರಿಯಃ ।
ಭಸ್ಮಚ್ಛನ್ನೋ ಭಸ್ಮಶಾಯೀ ಸರ್ವದಾ ವಿಜಿತೇಂದ್ರಿಯಃ ॥ ೭ ॥

ಯಸ್ತು ರುದ್ರಂ ಜಪೇನ್ನಿತ್ಯಂ ಚಿಂತಯೇನ್ಮಾಮನನ್ಯಧೀಃ ।
ಸ ತೇನೈವ ಚ ದೇಹೇನ ಶಿವಃ ಸಂಜಾಯತೇ ಸ್ವಯಂ ॥ ೮ ॥

ಜಪೇದ್ಯೋ ರುದ್ರಸೂಕ್ತಾನಿ ತಥಾಥರ್ವಶಿರಃ ಪರಂ ।
ಕೈವಲ್ಯೋಪನಿಷತ್ಸೂಕ್ತಂ ಶ್ವೇತಾಶ್ವತರಮೇವ ಚ ॥ ೯ ॥

ತತಃ ಪರತರೋ ಭಕ್ತೋ ಮಮ ಲೋಕೇ ನ ವಿದ್ಯತೇ ।
ಅನ್ಯತ್ರ ಧರ್ಮಾದನ್ಯಸ್ಮಾದನ್ಯತ್ರಾಸ್ಮಾತ್ಕೃತಾಕೃತಾತ್ ॥ ೧೦ ॥

ಅನ್ಯತ್ರ ಭೂತಾದ್ಭವ್ಯಾಚ್ಚ ಯತ್ಪ್ರವಕ್ಷ್ಯಾಮಿ ತಚ್ಛೃಣು ।
ವದಂತಿ ಯತ್ಪದಂ ವೇದಾಃ ಶಾಸ್ತ್ರಾಣಿ ವಿವಿಧಾನಿ ಚ ॥ ೧೧ ॥

---

ವನು ಜಿತೇಂದ್ರಿಯನಾಗಿ ಭಸ್ಮಧಾರಣೆ ಮಾಡಿಕೊಂಡು ಬಸ್ಮಶಾಯಿಯಾಗಿ ಶ್ರೀರುದ್ರಾಧ್ಯಾಯಪಾರಾಯಣ ಮಾಡುತ್ತಾ ನನ್ನನ್ನೇ ಧ್ಯಾನಿಸುತ್ತಿರುವವನು ಸಶರೀರನಾಗಿ ಶಿವಸಾರೂಪ್ಯವನ್ನು ಪಡೆಯುವನು

೯–೧೦ ಮೇಲೆ ಹೇಳಿದ ನಿಯಮಗಳಿಂದ ರುದ್ರಸೂಕ್ತಮಂತ್ರಗಳನ್ನೂ, ಶ್ವೇತಾಶ್ವತರೋಪನಿಷತ್ತು, ಅಥರ್ವಶೀರ್ಷೋಪನಿಷತ್ತು, ಕೈವಲ್ಯೋಪನಿಷತ್ತು ಇವೇ ಮೊದಲಾದ ರುದ್ರಮಹಿಮಾರ್ಥಬೋಧಕಗಳಾದ ಮಂತ್ರಪಾರಾಯಣ ಮಾಡುತ್ತಾ, ಕಾಲಕಳೆಯುವವನಿಗಿಂತಲೂ ನನಗೆ ಪರಮಭಕ್ತರು ಬೇರೆ ಇರಲಾರರು ಇದಿರಲಿ ಸಕಲಧರ್ಮವಿಲಕ್ಷಣವಾಗಿ, ಕಾರ್ಯಕಾರಣರಹಿತವಾಗಿ, ಕಾಲತ್ರಯ ಗಳಲ್ಲಿಯೂ ದೊರೆಯದಂತಹ ಒಂದು ವಿಶೇಷ ವಿಷಯವನ್ನು ನಿನಗಾಗಿ ಹೇಳುವೆನು ಕೇಳು

೧೧–೧೨ ಈಗ ನಾನು ಹೇಳಲಿರುವ ಒಂದು ಮಂತ್ರಮಹಿಮೆಯನ್ನು ಸಮಸ್ತ ವೇದಗಳೂ, ಉಪನಿಷತ್ತುಗಳೂ, ಶಾಸ್ತ್ರಗಳೂ, ನಾನಾಮುಖದಿಂದ

ಸರ್ವೋಪನಿಷದಾಂ ಸಾರಂ ದಧ್ನೋ ಘೃತಮಿವೋದ್ಧೃತಂ ।
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ಮುನಯಃ ಸದಾ ॥ ೧೨ ॥

ತತ್ತೇ ಪದಂ ಸಂಗ್ರಹೇಣ ಬ್ರವೀಮ್ಯೋಮಿತಿ ಯತ್ಪದಂ ।
ಏತದೇವಾಕ್ಷರಂ ಬ್ರಹ್ಮ ಹ್ಯೇತದೇವಾಕ್ಷರಂ ಪರಂ ॥ ೧೩ ॥

ಏತದೇವಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್ ।
ಏತದಾಲಂಬನಂ ಶ್ರೇಷ್ಠಮೇತದಾಲಂಬನಂ ಪರಂ ॥ ೧೪ ॥

ಏತದಾಲಂಬನಂ ಜ್ಞಾತ್ವಾ ಬ್ರಹ್ಮಲೋಕೇ ಮಹೀಯತೇ ।
ಛಂದಸಾಂ ಯಸ್ತು ಧೇನೂನಾಂ ವೃಷಭತ್ವೇನ ಚೋದಿತಃ ॥ ೧೫ ॥

---

ನಿರೂಪಿಸುತ್ತಿರುವುವು ಮೊಸರಿನ ರಾಶಿಯಿಂದ ಸಾರವಾದ ಬೆಣ್ಣೆಯನ್ನು ತೆಗೆದು ಅದರ ಸಾರಭೂತವಾದ ತುಪ್ಪವನ್ನು ಪರಿಗ್ರಹಿಸುವಂತೆ, ಸಕಲ ಮಂತ್ರರಾಶಿಯ ಸಾರವನ್ನು ತೆಗೆದು ನಿನಗೆ ಈಗ ಕೊಡಲಿರುವೆನು. ಈ ಮಂತ್ರಸಿದ್ಧಿಗಾಗಿಯೇ ಸಮಸ್ತ ಮಹರ್ಷಿಗಳೂ ಸರ್ವದಾ ಬ್ರಹ್ಮಚರ್ಯವ್ರತಧಾರಿಗಳಾಗಿ ಕಾಡಿನಲ್ಲಿ ತಪಶ್ಚರ್ಯೆಯಿಂದ ಕಾಲಕಳೆಯುತ್ತಿರುವುದು ಅಂತಹ ಮಂತ್ರವಾವುದೆಂದರೆ ಪ್ರಣವವೆನಿಸಿದ ಓಂಕಾರ

೧೩–೧೫ ಈ ಓಂಕಾರವೇ ಪರಬ್ರಹ್ಮಸ್ವರೂಪವು ಇದರ ಸ್ವರೂಪವನ್ನರಿತವನಿಗೆ ಸಮಸ್ತ ಸಿದ್ಧಿಯೂ ಕೈಗೂಡುವುದು ಇದೇ ಪರಮಶ್ರೇಷ್ಠವೆನಿಸಿದ ಆಲಂಬನ ವಸ್ತು. ಈ ಆಲಂಬನವನ್ನು ಆಶ್ರಯಿಸಿ ಇದರಿಂದ ಬ್ರಹ್ಮಜ್ಞಾನವನ್ನು ಪಡೆದವನಿಗೆ ಮತ್ತೆ ಎಂದಿಗೂ ದುಃಖವು ಸಂಭವಿಸದೆ ಮುಕ್ತಿಯು ಹಸ್ತಗತವಾಗುವುದು. ವೇದಗಳೆಂಬ ಧೇನು ಸಮೂಹಕ್ಕೆ ವೃಷಭಪ್ರಾಯದಂತಿರುವುದು ಈ ಪ್ರಣವಮಂತ್ರ ಅಮೃತತ್ವವೆಂಬ ಮಹಾಮೋಕ್ಷಪ್ರಾಪ್ತಿಗೆ ಈ ಓಂಕಾರವೇ ಸೇತುವೆಯಂತಿರುವುದು. "ಯಶ್ಛಂದಸಾಮೃಷಭೋ ವಿಶ್ವರೂಪಃ" ಇತ್ಯಾದಿ ಶ್ರುತಿಗಳು ಹೀಗಿಯೇ ಹೇಳು

ಇದಮೇವ ಯತಃ ಸೇತುರಮೃತತ್ವಸ್ಯ ಧಾರಣಾತ್ ।
ಮೇಧಯಾ ಪಿಹಿತೇ ಕೋಶೇ ಬ್ರಹ್ಮ ಯತ್ಪರಮೇಮಿತಿ ॥ ೧೬ ॥
ಚತಸ್ರಸ್ತಸ್ಯ ಮಾತ್ರಾಃ ಸ್ಯುರಕಾರೋಕಾರಕೌ ತಥಾ ।
ಮಕಾರಶ್ಚಾವಸಾನೇಽರ್ಧಮಾತ್ರೇತಿ ಪರಿಕೀರ್ತಿತಾಃ ॥ ೧೭ ॥
ಪೂರ್ವತ್ರ ಭೂಶ್ಚ ಋಗ್ವೇದೋ ಬ್ರಹ್ಮಾಷ್ಟವಸವಸ್ತಥಾ ।
ಗಾರ್ಹಪತ್ಯಶ್ಚ ಗಾಯತ್ರೀ ಗಂಗಾ ಪ್ರಾತಸ್ಸವಸ್ತಥಾ ॥ ೧೮ ॥
ದ್ವಿತೀಯಾ ಚ ಭುವೋ ವಿಷ್ಣೂ ರುದ್ರೋಽನುಷ್ಟುಬ್ಯಜುಸ್ತಥಾ ।
ಯಮುನಾ ದಕ್ಷಿಣಾಗ್ನಿಶ್ಚ ಮಾಧ್ಯಂದಿನಸ್ತವಸ್ತಥಾ ॥ ೧೯ ॥
ತೃತೀಯಾ ಚ ಸುವಸ್ಸಾಮಾನ್ಯಾದಿತ್ಯಶ್ಚ ಮಹೇಶ್ವರಃ
ಅಗ್ನಿರಾಹವನೀಯಶ್ಚ ಜಗತೀ ಚ ಸರಸ್ವತೀ ॥ ೨೦ ॥

೧೬ ವೇದಃಪಿಹಿತ ಕೋಶಗತವಾದ ಪರಬ್ರಹ್ಮ ಸ್ವರೂಪವೇ ಈ ಓಂಕಾರ ಇದನ್ನು ಭಾವನೆ ಮಾಡುವವರಿಗೆ ಕ್ರಮವಾಗಿ ನಿರವಧಿಕವಾದ ಮುಕ್ತಿಯು ಲಭಿಸುವುದು

೧೭–೧೮ ಈ ಪ್ರಣವ ಮಂತ್ರದಲ್ಲಿ ನಾಲ್ಕು ಮಾತ್ರಾಕಾಲದ ಅಕ್ಷರಗಳಿರುವುವು ಅಕಾರ, ಉಕಾರ, ಮಕಾರ ಮತ್ತು ಕೊನೆಯಲ್ಲಿರುವ ಅರ್ಧಮಾತ್ರಾಕಾಲದ ಅಕ್ಷರ, ಇವೇ ಆ ನಾಲ್ಕು ಮಾತ್ರೆಗಳ ಅಕ್ಷರಗಳು ಅದರಲ್ಲಿ ಮೊದಲನೆಯದಾದ ಅಕಾರದಲ್ಲಿ ಋಗ್ವೇದ, ಪರಬ್ರಹ್ಮ, ಅಷ್ಟವಸುಗಳು, ಗಾಯತ್ರೀ, ಗಂಗಾ, ಪ್ರಾತಸ್ಸವನ ಇವುಗಳಿರುವುವೆಂದು ಭಾವಿಸಬೇಕು

೧೯–೨೦ ಎರಡನೆಯದಾದ ಉಕಾರದಲ್ಲಿ ಭುವರ್ಲೋಕವೂ, ಹರಿಯೂ, ರುದ್ರನೂ, ಅನುಷ್ಟುಪ್ ಛಂದಸ್ಸೂ, ಯಜುರ್ವೇದವೂ, ಯಮುನಾ ನದಿಯೂ, ದಕ್ಷಿಣಾಗ್ನಿ ಎಂಬ ಅಗ್ನಿಯೂ ಮಾಧ್ಯಂದಿನಸವನವೂ ಇವು ಇರುವುವೆಂದು ಅರಿಯಬೇಕು ಮೂರನೆಯದಾದ ಮಕಾರದಲ್ಲಿ ಸುವರ್ಲೋಕವೂ, ಈಶ್ವರನೂ, ಆದಿತ್ಯರೂ ಆಹವನೀಯಾಗ್ನಿಯೂ, ಜಗತೀ ಛಂದಸ್ಸೂ, ಸರಸ್ವತೀ ನದಿಯೂ, ಸಾಂಧ್ಯಸವನವೂ, ಅಡಗಿರುವುವೆಂದು ನಂಬಬೇಕು

ತೃತೀಯಂ ಸವನಂ ಪ್ರೋಕ್ತಮಥರ್ವತ್ವೇನ ಯನ್ಮತಂ ।
ಚತುರ್ಥೀ ಯಾವಸಾನೇऽರ್ಧಮಾತ್ರಾ ಸಾ ಸೋಮಲೋಕಗಾ ॥ ೨೦ ॥

ಅಥರ್ವಾಂಗಿರಸಸ್ಸೋಮಲೋಕೋऽಗ್ನಿಶ್ಚ ಮಹಸ್ತಥಾ ।
ವಿರಾಟ್ಸಭ್ಯಾವಸಥ್ಯೌ ಚ ಶುತುದ್ರಿರ್ಯಜ್ಞಪುಚ್ಛಕಃ ॥ ೨೦ ॥

ಪ್ರಥಮಾ ರಕ್ತವರ್ಣಾ ಸ್ಯಾದ್ದ್ವಿತೀಯಾ ಭಾಸ್ಕರಾ ಮತಾ ।
ತೃತೀಯಾ ವಿದ್ಯುದಾಭಾ ಸಾ ಚತುರ್ಥೀ ಶುಕ್ಲವರ್ಣಿನೀ ॥ ೨೩ ॥

ಸರ್ವಂ ಜಾತಂ ಜಾಯಮಾನಂ ತದೋಂಕಾರೇ ಪ್ರತಿಷ್ಠಿತಂ ।
ವಿಶ್ವಂ ಭೂತಂ ಚ ಭುವನಂ ವಿಚಿತ್ರಂ ಬಹುಧಾ ತಥಾ ॥ ೨೪ ॥

ಜಾತಂ ಚ ಜಾಯಮಾನಂ ಯತ್ತತ್ಸರ್ವಂ ರುದ್ರ ಉಚ್ಯತೇ ।
ತಸ್ಮಿನ್ನೇವ ಪುನಃ ಪ್ರಾಣಾಃ ಸರ್ವಮೋಂಕಾರ ಉಚ್ಯತೇ ॥ ೨೫ ॥

---

೨೧–೨೩ ಇನ್ನು ನಾಲ್ಕನೆಯದಾದ ಅರ್ಧಮಾತ್ರೆಯಲ್ಲಿ ಸೋಮಲೋಕವೂ, ಅಥರ್ವಾಂಗಿರಸರೂ, ಮರುತ್ತುಗಳೂ, ವಿರಾಟ್ಪುರುಷನೂ, ಯಜ್ಞಪುಚ್ಛವೂ, ಸಭ್ಯ ಅವಸಥ್ಯಾಗ್ನಿಗಳೂ, ಶುತುದ್ರಿ ನದಿಯೂ, ಸಂವರ್ತಾಗ್ನಿಯೂ ಇರುವುವೆಂದು ಮನಸಾ ಭಾವಿಸಬೇಕು ಮತ್ತು ನಾಲ್ಕು ಮಾತ್ರೆಗಳೂ ಪ್ರಣವದಲ್ಲಿ ಕ್ರಮವಾಗಿ, ರಕ್ತವರ್ಣ, ಭಾಸ್ವರವರ್ಣ, ವಿದ್ಯುದ್ವರ್ಣ, ಶುಕ್ಲವರ್ಣವುಳ್ಳವುಗಳೆಂದು ತಿಳಿಯಬೇಕು

೨೪–೨೬ ಹಿಂದೆ ಹುಟ್ಟಿದ ಸಮಸ್ತ ವಸ್ತುಗಳೂ, ಮುಂದೆ ಹುಟ್ಟುವ ಸಕಲ ಪ್ರಪಂಚವೂ ಈ ಪ್ರಣವದಲ್ಲಿಯೇ ಪ್ರತಿಷ್ಠಿತಗಳಾಗಿರುವುವು ಚಿತ್ರವಿಚಿತ್ರವಾಗಿ ಕಂಡುಬರುವ ಪ್ರಪಂಚವೆಲ್ಲವೂ ಪ್ರಕಾಶಿಸುವುದು. ಇವರಲ್ಲಿಯೇ ಪ್ರಪಂಚಾತ್ಮಕನಾದ ರುದ್ರದೇವನೂ, ಪ್ರಾಣವಾಯುಗಳೂ, ಅಡಗಿರುವುವು ನಿತ

ಪ್ರವಿಲೀನಂ ತದೋಂಕಾರೇ ಪರಂ ಬ್ರಹ್ಮ ಸನಾತನಂ ।
ತಸ್ಮಾದೋಂಕಾರಜಾಪೀ ಯಃ ಸ ಮುಕ್ತೋ ನಾತ್ರ ಸಂಶಯಃ ॥ ೨೬ ॥

ತ್ರೇತಾಗ್ನೇಃ ಸ್ಮಾರ್ತವಹ್ನೇರ್ವಾ ಶೈವಾಗ್ನೇರ್ವಾ ಸಮಾಹೃತಂ ।
ಭಸ್ಮಾಭಿಮಂತ್ರ್ಯ ಯೋ ಮಾಂ ತು ಪ್ರಣವೇನ ಪ್ರಪೂಜಯೇತ್ ॥ ೨೭ ॥

ತಸ್ಮಾತ್ಪರತರೋ ಭಕ್ತೋ ಮಮ ಲೋಕೇ ನ ವಿದ್ಯತೇ ।
ಶಾಲಾಗ್ನೇರ್ದಾವವಹ್ನೇರ್ವಾ ಭಸ್ಮಾನೀಯಾಭಿಮಂತ್ರಿತಂ ॥ ೨೮ ॥

ಯೋ ವಿಲಿಂಪತಿ ಗಾತ್ರಾಣಿ ಸ ಶೂದ್ರೋಽಪಿ ವಿಮುಚ್ಯತೇ ।
ಕುಶಪುಷ್ಪೈರ್ಬಿಲ್ವದಳೈಃ ಪುಷ್ಪೈರ್ವಾ ಗಿರಿಸಂಭವೈಃ ॥ ೨೯ ॥

ವಾದ ಪರಬ್ರಹ್ಮವಸ್ತುವೇ ಅದು ಅದನ್ನು ಜಪಿಸುವವನಿಗೆ ಜನ್ಮ ಮರಣಾದಿ ರಹಿತವಾದ ಶುದ್ಧಮುಕ್ತಿಯು ಸುಲಭವಾಗಿ ದೊರೆಯುವುದು ಇದರಲ್ಲಿ ಸಂಶಯ ಪಡಬೇಡ

೨೭–೨೮ ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿಗಳೆಂಬ ಮೂರುವಿಧಗಳಾದ ಶ್ರೌತಾಗ್ನಿಯಿಂದಾಗಲಿ, ಶೈವ ಸಂಸ್ಕಾರಗಳನ್ನು ನಡೆಸುವ ಶೈವಾಗ್ನಿಯಿಂದಾಗಲಿ, ಪವಿತ್ರವಾದ ಭಸ್ಮವನ್ನು ತಂದು, ಅದನ್ನು ಪ್ರಣವದಿಂದ ಅಭಿಮಂತ್ರಿಸಿ, ಅದನ್ನು ಲೇಪಿಸಿಕೊಂಡು, ಆದರಿಂದಲೇ ನನ್ನನ್ನು ಪೂಜಿಸುವವನು ನನ್ನ ಪ್ರಿಯ ಭಕ್ತನೆನಿಸುವನು ಶೂದ್ರನಾದರೋ, ತನ್ನ ಮನೆಯ ಒಲೆಯ ಭಸ್ಮವನ್ನಾಗಲಿ, ಕಾಡುಕಿಚ್ಚಿನಿಂದ ಹುಟ್ಟಿದ ದಾವಾಗ್ನಿಯ ಭಸ್ಮವನ್ನಾಗಲಿ ತಂದು, ತಾನು ಮೊದಲು ಉದ್ಧೂಳನ ಮಾಡಿಕೊಂಡು, ಶಿವಾರ್ಚನೆ ಮಾಡಿದರ ಅವನಿಗೂ ಮುಕ್ತಿದೊರೆಯುವುದರಲ್ಲಿ ಸಂಶಯಲೇಶವೂ ಇಲ್ಲ

೨೯–೩೦ ಬಿಲ್ವಪತ್ರೆ, ಬೆಟ್ಟ, ಕಾಡು ಇವುಗಳಲ್ಲಿ ಬೆಳೆದ ಪುಷ್ಪಗಳು, ದರ್ಭೆಯ ಹೂವು, ಇವೇ ಮೊದಲಾದವುಗಳನ್ನು ತಂದು, ಪ್ರಣವಪರನ ಪುರಸ್ಸರವಾಗಿ ಯಾರು ನನ್ನನ್ನು ಅರ್ಚಿಸುವರೋ, ಅವರು ನನ್ನ ಪರಮಭಕ್ತರು

ಯೋ ಮಾಮರ್ಚಯತೇ ನಿತ್ಯಂ ಪ್ರಣವೇನ ಪ್ರಿಯೋ ಹಿ ಸಃ ।
ಪುಷ್ಪಂ ಫಲಂ ಸಮೂಲಂ ವಾ ಪತ್ರಂ ಸಲಿಲಮೇವ ವಾ ॥ ೩೦ ॥

ಯೋ ದದ್ಯಾತ್ಪ್ರಣವೈರ್ಮಹ್ಯಂ ತತ್ಕೋಟಿಗುಣಿತಂ ಭವೇತ್ ।
ಅಹಿಂಸಾ ಸತ್ಯಮಸ್ತೇಯಂ ಶೌಚಮಿಂದ್ರಿಯನಿಗ್ರಹಃ ॥ ೩೧ ॥

ಯಸ್ಯಾಸ್ತ್ಯಧ್ಯಯನಂ ನಿತ್ಯಂ ಸ ಮೇ ಭಕ್ತಃ ಸ ಮೇ ಪ್ರಿಯಃ ।
ಪ್ರದೋಷೇ ಯೋ ಮಮ ಸ್ಥಾನಂ ಗತ್ವಾ ಪೂಜಯತೇ ತು ಮಾಂ ॥ ೩೨ ॥

ಸ ಪರಾಂ ಶ್ರಿಯಮಾಪ್ನೋತಿ ಪಶ್ಚಾನ್ಮಯಿ ವಿಲೀಯತೇ ।
ಅಷ್ಟಮ್ಯಾಂ ಚ ಚತುರ್ದಶ್ಯಾಂ ಪರ್ವಣೋರುಭಯೋರಪಿ ॥ ೩೩ ॥

ಭೂತಿಭೂಷಿತಸರ್ವಾಂಗೋ ಯಃ ಪೂಜಯತಿ ಮಾಂ ನಿಶಿ ।
ಕೃಷ್ಣಪಕ್ಷೇ ವಿಶೇಷೇಣ ಸ ಮೇ ಭಕ್ತಃ ಸ ಮೇ ಪ್ರಿಯಃ ॥ ೩೪ ॥

ಎನಿಸುವರು ಹೂವು, ಗೆಡ್ಡೆ, ಗೆಣಸು, ನೀರು, ಇವುಗಳಲ್ಲಿ ಯಾವುದೊಂದ ನ್ನಾದರೂ ಪ್ರಣವ ಪೂರ್ವಕವಾಗಿ ಭಕ್ತಿಯಿಂದ ನನಗರ್ಪಿಸಿದರೆ, ಅದು ಕೋಟಿ ಗುಣಿತವಾದ ಫಲರಾಶಿಯನ್ನು ಕೊಡುವುದು. ಇದರಲ್ಲಿ ಸಂಶಯವಿಲ್ಲ

೩೧–೩೨ ಭೂಲೋಕದಲ್ಲಿ ಯಾರು ಸತ್ಯವಂತರೆನಿಸಿ ನಿರ್ಮಲ ಮನಸ್ಸು ಳ್ಳವರಾಗಿ ಕಳವು, ಕೊಲೆ ಮಾಡದೆ ಜಿತೇಂದ್ರಿಯನೂ, ಇಂದ್ರಿಯನಿಗ್ರಹವುಳ್ಳವನಾ ಗಿರುವವನೂ, ವೇದಾಧ್ಯಯನ ಸಂಪನ್ನನೂ ಎನಿಸಿದವನು ನನ್ನ ಭಕ್ತನೆನಿಸು ವನು ಪ್ರತಿಪ್ರದೋಷಕಾಲದಲ್ಲಿಯೂ ತಪ್ಪದೆ ಶಿವಾಲಯಕ್ಕೆ ಬಂದು ನನ್ನನ್ನು ಭಕ್ತಿಯಿಂದಾರಾಧಿಸಿದವರಿಗೆ ಅನಂತವಾದ ಸಂಪತ್ತು ದೊರೆಯುವುದಲ್ಲದೆ ಮುಕ್ತಿ ಸಾಮ್ರಾಜ್ಯವೂ ಲಭಿಸುವುದು

೩೩–೩೪ ಕೃಷ್ಣಾಷ್ಟಮಿ, ಕೃಷ್ಣಪಕ್ಷದ ಚತುರ್ದಶೀ ಈ ಪರ್ವತಿಥಿಗಳಲ್ಲಿ ಭಸ್ಮಭೂಷಿತ ಗಾತ್ರನಾಗಿ ಯಾವನು ನನ್ನನ್ನು ವಿಶೇಷ ಭಕ್ತಿಯಿಂದರ್ಚಿಸುವನೋ ಮತ್ತು, ಪ್ರತಿ ಏಕಾದಶೀ ತಿಥಿಯಲ್ಲಿಯೂ, ಸೋಮವಾರಗಳಲ್ಲಿಯೂ, ಹಗಲು

ಏಕಾದಶ್ಯಾಮುಪೋಷ್ಯೈವ ಯಃ ಪೂಜಯತಿ ಮಾಂ ನಿಶಿ ।
ಸೋಮವಾರೇ ವಿಶೇಷೇಣ ಸ ಮೇ ಭಕ್ತೋ ನ ನಶ್ಯತಿ ॥ ೩೫ ॥

ಪಂಚಾಮೃತೈಃ ಸ್ನಾಪಯೇದ್ಯಃ ಪಂಚಗವ್ಯೇನ ವಾ ಪುನಃ ।
ಪುಷ್ಪೋದಕೈಃ ಕಲಶಜಲೈಸ್ತಸ್ಮಾನ್ನಾನ್ಯಃ ಪ್ರಿಯೋ ಮಮ ॥ ೩೬ ॥
ಪಯಸಾ ಸರ್ಪಿಷಾ ವಾಪಿ ಮಧುನೇಕ್ಷುರಸೇನ ವಾ ।
ಪಕ್ವಾಮ್ರಫಲಜೇನಾಪಿ ನಾರಿಕೇಳಜಲೇನ ವಾ ॥ ೩೭ ॥
ಗಂಧೋದಕೇನ ವಾ ಮಾಂ ಯೋ ರುದ್ರಮಂತ್ರಮನುಸ್ಮರನ್ ।
ಅಭಿಷಿಂಚೇತ್ತತೋ ನಾನ್ಯಃ ಕಶ್ಚಿತ್ಪ್ರಿಯತರೋ ಮಮ ॥ ೩೮ ॥

ಆದಿತ್ಯಾಭಿಮುಖೋ ಭೂತ್ವಾ ಊರ್ಧ್ವಬಾಹುರ್ಜಲೇ ಸ್ಥಿತಃ ।
ಮಾಂ ಧ್ಯಾಯನ್ ರವಿಬಿಂಬಸ್ಥಮಥರ್ವಾಂಗಿರಸಂ ಜಪೇತ್ ॥ ೩೯ ॥

ಪ್ರವಿಶೇನ್ಮೇ ಶರೀರೇಽಸೌ ಗೃಹಂ ಗೃಹಪತಿರ್ಯಥಾ ।
ಬೃಹದ್ರಥಂತರಂ ವಾಮದೇವ್ಯಂ ದೇವವ್ರತಾನಿ ಚ ॥ ೪೦ ॥

ಪೂರ್ತಿ ಉಪವಾಸಮಾಡಿ, ಅರ್ಧರಾತ್ರಿಯ ವೇಳೆಯಲ್ಲಿ ಯಾವನು ನನ್ನನ್ನು ಭಯ ಭಕ್ತಿಯಿಂದಾರಾಧಿಸುವನೋ, ಅವನೂ ನನ್ನ ಅತ್ಯಂತ ಪ್ರಿಯಭಕ್ತನೆನಿಸುವನು ಅವರಿಗೆ ಎಂದೂ ನಾಶವೇ ಇರುವುದಿಲ್ಲ

೩೬–೩೮ ಪಂಚಾಮೃತ ದ್ರವ್ಯಗಳು, ಪಂಚಗವ್ಯ ವಸ್ತುಗಳು, ಪುಷ್ಪೋದಕ, ಕುಶೋದಕ, ಹಾಲು, ತುಪ್ಪ, ಜೇನುತುಪ್ಪ, ಕಬ್ಬಿನರಸ, ಮಾವಿನಹಣ್ಣಿನ ರಸ, ಎಳನೀರು, ಗಂಧೋದಕ, ಇವುಗಳಿಂದ ಯಾರು ನನಗೆ ರುದ್ರಾಭಿಷೇಕ ಮಾಡುವರೋ, ಅವರಿಗಿಂತ ನನಗೆ ಪ್ರಿಯಭಕ್ತರಾದವರು ಎಲ್ಲಾದರೂ ಉಂಟೆ ?

೩೯–೪೦ ಶ್ರೀರಾಮನೇ, ಕೇಳು ಸೂರ್ಯನಿಗೆ ಅಭಿಮುಖನಾಗಿ ನಡು ನೀರಿನಲ್ಲಿ ನಿಂತು, ತೋಳುಗಳನ್ನು ಮೇಲಕ್ಕೆತ್ತಿಕೊಂಡು, ರವಿಬಿಂಬಮಧ್ಯವರ್ತಿ ಯಾಗಿರುವ ನನ್ನನ್ನೇ ಯಾರು ಧ್ಯಾನಿಸುತ್ತಾ ಅಥರ್ವಾಂಗಿರಸೋಪನಿಷತ್ಪಾರಾ ಯಣ ಮಾಡುವರೋ, ಅವರು, ಯಜಮಾನನು ತನ್ನ ಮನೆಯನ್ನು ಧೈರ್ಯವಾಗಿ ಪ್ರವೇಶಮಾಡುವಂತೆ, ನನ್ನ ದೇಹದಲ್ಲಿ ಐಕ್ಯಹೊಂದುವರು ಅಂದರೆ ಶಿವ ಸಾರೂಪ್ಯವೇ ದೊರೆಯುವುದು

ತದ್ಭ್ಯೋಗಾನಾಜ್ಯದೋಹಾಂಶ್ಚ ಯೋ ಗಾಯತಿ ಮಮಾಗ್ರತಃ ।
ಇಹ ಶ್ರಿಯಂ ಪರಾಂ ಭುಕ್ತ್ವಾ ಮಮ ಸಾಯುಜ್ಯಮಾಪ್ನುಯಾತ್ ॥ ೪೧ ॥
ಈಶಾವಾಸ್ಯಾದಿಮಂತ್ರಾನ್ ಯೋ ಜಪೇನ್ನಿತ್ಯಂ ಮಮಾಗ್ರತಃ ।
ಮತ್ಸಾಯುಜ್ಯಮವಾಪ್ನೋತಿ ಮಮ ಲೋಕೇ ಮಹೀಯತೇ ॥ ೪೨ ॥
ಭಕ್ತಿಯೋಗೋ ಮಯಾ ಪ್ರೋಕ್ತಂ ಏವಂ ರಘುಕುಲೋದ್ವಹ ।
ಸರ್ವಕಾಮಪ್ರದೋ ಮತ್ತಃ ಕಿಮನ್ಯಚ್ಛ್ರೋತುಮಿಚ್ಛಸಿ ॥ ೪೩ ॥

ಇತಿ ಶ್ರೀಪದ್ಮಪುರಾಣೇ ಶ್ರೀಶಿವಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಶಿವರಾಘವಸಂವಾದೇ ಭಕ್ತಿಯೋಗೋ ನಾಮ
॥ ಪಂಚದಶೋಽಧ್ಯಾಯಃ ॥

೪೧-೪೨ ವಾಮದೇವ್ಯ, ಬೃಹದ್ರಥಂತರ ಮೊದಲಾದ ಸಾಮವೇದಗಳಿಂದ ನನ್ನನ್ನು ತೃಪ್ತಿಪಡಿಸುತ್ತಾ ದೇವವ್ರತಗಳನ್ನೂ, ಆಜ್ಯದೋಹಗಳೆಂಬ ಯೋಗಮಾರ್ಗನಿಯಮಗಳನ್ನೂ, ವೇದವ್ರತಾದಿ ಸಾಮಗಾನಗಳನ್ನೂ, ಯಾರು ನನ್ನೆದುರಿಗೆ ನಡೆಸುವರೋ, ಅವರು ಐಹಿಕವಾದ ಸಕಲಭೋಗ್ಯಗಳನ್ನೂ ಪಡೆದು, ದೇಹತ್ಯಾಗಾನಂತರ ಶಿವಸಾಯುಜ್ಯವನ್ನು ಹೊಂದುವರು ಇದರಲ್ಲಿ ಸಂಶಯವಿಲ್ಲ

೪೨-೪೩ ಶ್ರೀರಾಮಚಂದ್ರನೇ, ಈಶಾವಾಸ್ಯಾದಿ ಮಹಾ ಮಂತ್ರಗಳನ್ನು ಯಾರು ಭಕ್ತಿಯಿಂದ ನನ್ನ ಸನ್ನಿಧಿಯಲ್ಲಿ ಪಾರಾಯಣ ಮಾಡುವರೋ ಅವರಿಗೂ ನಿರತಿಶಯಾನಂದಪ್ರದವಾದ ಶಿವಸಾಯುಜ್ಯವು ದೊರೆಯುವುದರಲ್ಲಿ ಸಂಶಯವಿಲ್ಲ ರಘುಕುಲೋದ್ಭವನಾದ ದಾಶರಥಿಯೇ, ಇಲ್ಲಿನವರೆಗೂ ನಿನಗೆ ಪ್ರೀತಿಯಿಂದ ಭಕ್ತಿಯೋಗವನ್ನರುಹಿದೆನು ಇದನ್ನು ಭಕ್ತಿಯಿಂದ ಕೇಳಿದವರಿಗೂ, ಓದಿದವರಿಗೂ, ಸಕಲ ಇಷ್ಟಾರ್ಥಗಳನ್ನೂ ಕರುಣಿಸುವೆನು ಶ್ರೀರಾಮಚಂದ್ರನೇ, ನೀನು ಹೆದರಬೇಡ ನೀನು ಮತ್ತೇನನ್ನು ಕೇಳಲಪೇಕ್ಷಿಸುವೆಯೋ, ಅದನ್ನು ತಿಳಿಸುವವನಾಗು ಸಂತೋಷದಿಂದ ಹೇಳುವೆನು ಎಂದು ಪರಮೇಶ್ವರನು ಶ್ರೀರಾಮನಿಗೆ ಅಭಯ ಪ್ರದಾನಮಾಡಿದನು

ಇಲ್ಲಿಗೆ ಶ್ರೀ ಪದ್ಮಪುರಾಣದ ಶಿವಗೀತೆಯಲ್ಲಿ ಉಪಾಸನಾವಿಧಿಯೆಂಬ
ಹದಿನೈದನಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಶ್ರೀ ಶಿವಗೀತಾ

---

## ॥ ಅಥ ಷೋಡಶೋಽಧ್ಯಾಯಃ ॥

॥ ಶ್ರೀರಾಮ ಉವಾಚ ॥

ಭಗವನ್ ಮೋಕ್ಷಮಾರ್ಗೋ ಯಸ್ತ್ವಯಾ ಸಮ್ಯಗುದಾಹೃತಃ ।
ತತ್ರಾಧಿಕಾರಿಣಂ ಬ್ರೂಹಿ ಸಂಶಯೋಽತ್ರ ಮಹಾನ್ಮಮ ॥ ೧ ॥

॥ ಶ್ರೀ ಮಹಾದೇವ ಉವಾಚ ॥

ಬ್ರಹ್ಮಕ್ಷತ್ರವಿಶಶ್ಶೂದ್ರಾಃ ಸ್ತ್ರಿಯಶ್ಚಾತ್ರಾಧಿಕಾರಿಣಃ ।
ಬ್ರಹ್ಮಚಾರೀ ಗೃಹಸ್ಥೋ ವಾನುಪನೀತೋಽಥವಾ ದ್ವಿಜಃ ॥ ೨ ॥

### ಹದಿನಾರನೆಯ ಅಧ್ಯಾಯ

೧–೩ ಪರಮೇಶ್ವರನ ಅಭಯವಚನದಿಂದ ತೃಪ್ತನಾಗಿ ಶ್ರೀರಾಮನು ಪರಮೇಶ್ವರನನ್ನು ಕುರಿತು "ಷಡ್ಗುಣೈಶ್ವರ್ಯಪರಿಪೂರ್ಣನಾದ ಪರಮಾತ್ಮನೇ, ಇಲ್ಲಿನ ವರೆಗೂ, ಮೋಕ್ಷಸ್ವರೂಪವನ್ನೂ, ಮೋಕ್ಷಮಾರ್ಗವನ್ನೂ ಸ್ಪಷ್ಟವಾಗಿ ತಿಳಿಯ ಪಡಿಸಿರುವೆ ಆ ಮುಕ್ತಿಗೆ ಸರಿಯಾದ ಅಧಿಕಾರಿ ಯಾರು? ಎಂತಹವರಿಗೆ ಮೋಕ್ಷವು ಕರಗತವಾಗುವುದು? ಎಂಬುದನ್ನು ದಯೆಯಿಟ್ಟು ವಿವರಿಸುವವನಾಗು" ಎಂದ ಪ್ರಾರ್ಥಿಸಿದನು ಆಗ ಶಂಕರನು ಹೀಗೆಂದನು "ಶ್ರೀರಾಮಚಂದ್ರನೇ, ಕೇಳು ಮೋಕ್ಷವನ್ನು ಪಡೆಯಲು ಎಲ್ಲರಿಗೂ ಅಧಿಕಾರವಿದೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಚಾತುರ್ವರ್ಣ್ಯದವರಿಗೂ, ಸ್ತ್ರೀಯರಿಗೂ ಮುಕ್ತಿಯಲ್ಲಿ ಅಧಿಕಾರ ವುಂಟು ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸೀ, ಅಥವಾ ಅನುಪನೀತ

ವನಸ್ಥೋ ವಾऽವನಸ್ಥೋ ವಾ ಯತಿಃ ಪಾಶುಪತವ್ರತೀ ।
ಬಹುನಾತ್ರ ಕಿಮುಕ್ತೇನ ಯಸ್ಯ ಭಕ್ತಿಃ ಶಿವಾರ್ಚನೇ ॥ ೩ ॥
ಸ ಏವಾತ್ರಾಧಿಕಾರೀ ಸ್ಯಾನ್ನಾನ್ಯಚಿತ್ತಃ ಕಥಂಚನ ।
ಜಡೋಂಧೋ ಬಧಿರೋ ಮೂಕೋ ನಿಶ್ಶೌಚಃ ಕರ್ಮವರ್ಜಿತಃ ॥ ೪ ॥
ಅಜ್ಞೋಪಹಾಸಾಭಕ್ತಾಶ್ಚ ಭೂತಿರುದ್ರಾಕ್ಷಧಾರಿಣಃ ।
ಲಿಂಗಿನೋ ಯಶ್ಚ ವಾ ದ್ವೇಷ್ಟಿ ತೇ ನೈವಾತ್ರಾಧಿಕಾರಿಣಃ ॥ ೫ ॥
ಯೋ ಮಾಂ ಗುರುಂ ಪಾಶುಪತಂ ವ್ರತಂ ದ್ವೇಷ್ಟಿ ನರಾಧಮಃ ।
ವಿಷ್ಣುಂ ವಾ ಸ ನ ಮುಚ್ಯೇತ ಜನ್ಮಕೋಟಿಶತೈರಪಿ ॥ ೬ ॥
ಅನೇಕಕರ್ಮಸಕ್ತೋऽಪಿ ಶಿವಜ್ಞಾನವಿವರ್ಜಿತಃ ।
ಶಿವಭಕ್ತಿವಿಹೀನಶ್ಚ ಸಂಸಾರಾನ್ನೈವ ಮುಚ್ಯತೇ ॥ ೭ ॥

---

ನಾದ ದ್ವಿಜ ಪಾಶುಪತವ್ರತಧಾರಿ, ಇವರೆಲ್ಲರೂ ಸುಲಭವಾಗಿ ಮೋಕ್ಷವನ್ನು ಪಡೆಯುಬಹುದು. ಹೆಚ್ಚೇನು? ಭಕ್ತಿಯಿಂದ ಯಾರು ಶಿವಾರ್ಚನೆಮಾಡುವರೋ, ಅವರೆಲ್ಲರನ್ನೂ ಮುಕ್ತಿಗೆ ಅಧಿಕಾರಿಗಳೆಂದೇ ತಿಳಿಯಬಹುದು

೪-೬ ಆದರೆ ಯಾರು ಇತರ ಕಾರ್ಯಗಳಲ್ಲಿಯೇ ಆಸಕ್ತರಾಗಿ ದೇವಪೂಜಾವಿಹೀನರಾಗಿರುವರೋ, ಜಡರು, ಕುರುಡರು, ಮೂಕರು ಕೊಳಕು ಸ್ವಭಾವದವರು, ಕರ್ಮಬಾಹಿರರು, ಅಜ್ಞಾನಿಗಳು, ನನ್ನ ಭಕ್ತರನ್ನು ಅಪಹಾಸ್ಯಮಾಡುವವರು, ವಿಭೂತಿರುದ್ರಾಕ್ಷಗಳನ್ನು ಧರಿಸದೆ ಇರುವವರು, ವಿಭೂತಿ, ರುದ್ರಾಕ್ಷ, ಶಿವಲಿಂಗಗಳನ್ನು ಧರಿಸಿದವರನ್ನು ಅಪಹಾಸ್ಯ ಮಾಡುವವರು, ಮುಕ್ತಿಗೆ ಅನಧಿಕಾರಿಗಳೆನಿಸುವರು ಯಾರು ನನ್ನನ್ನೂ, ಜ್ಞಾನೋಪದೇಶಕನಾದ ಗುರುವನ್ನೂ, ಪಾಶುಪತವ್ರತವನ್ನೂ, ವಿಷ್ಣುವನ್ನೂ, ದ್ವೇಷಿಸುವರೋ ಅಂತಹವರಿಗೆ ಎಷ್ಟು ಕೋಟಿ ಜನ್ಮವೆತ್ತಿದರೂ ಮುಕ್ತಿಯು ದೊರೆಯಲಾರದು.

೭-೯ ಅನೇಕ ಕರ್ಮಾಚರಣೆಗಳಲ್ಲಿ ಆಸಕ್ತರಾಗಿದ್ದರೂ ಶಿವಜ್ಞಾನವಿವರ್ಜಿತನಾಗಿ ಶಿವಭಕ್ತಿರಹಿತನಾಗಿದ್ದರೆ ಅವರಿಗೆ ಎಂದೂ ಸಾಂಸಾರಿಕವಾದ ತೊಂದರೆ

ಆಸಕ್ತಾಃ ಫಲರಾಗೇಣ ಯೇ ತು ವೈದಿಕಕರ್ಮಣಿ ।
ದೃಷ್ಟಮಾತ್ರಫಲಾಸ್ತೇ ತು ನ ಭಕ್ತಾವಧಿಕಾರಿಣಃ ॥ ೮ ॥

ಅವಿಮುಕ್ತೇ ದ್ವಾರವತ್ಯಾಂ ಶ್ರೀಶೈಲೇ ಪುಂಡರೀಕಕೇ ।
ದೇಹಾಂತೇ ತಾರಕಂ ಬ್ರಹ್ಮ ಲಭತೇ ಮದನುಗ್ರಹಾತ್ ॥ ೯ ॥

ಯಸ್ಯ ಹಸ್ತೌ ಚ ಪಾದೌ ಚ ಮನಶ್ಚೈವ ಸುಸಂಯತಂ ।
ವಿದ್ಯಾ ತಪಶ್ಚ ಕೀರ್ತಿಶ್ಚ ಸ ತೀರ್ಥಫಲಮಶ್ನುತೇ ॥ ೧೦ ॥

ವಿಪ್ರಸ್ಯಾನುಪನೀತಸ್ಯ ವಿಧಿರೇವಮುದಾಹೃತಃ ।
ನಾಭಿವ್ಯಾಹಾರಯೇದ್ಬ್ರಹ್ಮ ಸ್ವಧಾನಿನಯನಾದೃತೇ ॥ ೧೧ ॥

ಗಲಿಂದ ನಿವೃತ್ತಿ ಇರುವುದಿಲ್ಲ ವೇದೋಕ್ತಗಳಾದ ಕಾಮ್ಯಕರ್ಮಗಳಲ್ಲಿ ಆಸಕ್ತ ರಾಗಿ, ದೃಷ್ಟಫಲದಲ್ಲಿ ಮಾತ್ರ ಆಸಕ್ತರಾದವರಿಗೆ ಭಕ್ತಿಮಾರ್ಗವು ಎಂದೂ ಫಲ ಕೊಡಲಾರದು ಮತ್ತು ಅವೈದಿಕಕರ್ಮಗಳೆನಿಸಿದ ವಾಮಾಚಾರಗಳಲ್ಲಿ ಆಸಕ್ತರಾಗಿ ಮದ್ಯಮಾಂಸಾದಿಗಳಿಂದ ಪೂಜಾದಿಗಳನ್ನೆಸಗುತ್ತಾ, ತಮ್ಮ ಇಷ್ಟಾರ್ಥಪೂರ್ತಿಗಾಗಿ ದುಡಿಯುವವರು ಭಕ್ತಿಗೆ ಅನಧಿಕಾರಿಗಳನಿಸುವರು ಅವಿಮುಕ್ತ ಕ್ಷೇತ್ರವೆನಿಸಿದ ಕಾಶಿಯಲ್ಲಿ, ದ್ವಾರಾವತಿಯಲ್ಲಿ, ಶ್ರೀಶೈಲದಲ್ಲಿ, ಪುಂಡರೀಕಕ್ಷೇತ್ರವೆನಿಸಿದ ವ್ಯಾಘ್ರ ಪುರದಲ್ಲಿ ಯಾರು ದೇಹತ್ಯಾಗ ಮಾಡುವರೋ, ಅವರಿಗೆ ನನ್ನ ಅನುಗ್ರಹದಿಂದ, ಮರಣಕಾಲದಲ್ಲಿ ತಾರಕಮಂತ್ರೋಪದೇಶವು ಲಭಿಸುವುದು

೧೦–೧೨ ಯಾರು ತೀರ್ಥಕ್ಷೇತ್ರಗಳಲ್ಲಿ ಕೈಕಾಲುಗಳನ್ನೂ, ಮನಸ್ಸನ್ನೂ, ಸ್ಥಿರವಾಗಿಟ್ಟು ವಿದ್ಯೆಯನ್ನೂ, ತಪಸ್ಸನ್ನೂ, ಕೀರ್ತಿಯನ್ನೂ ಆರ್ಜಿಸುವರೋ ಅವರು ಆಯಾ ಕ್ಷೇತ್ರಗಳ ಫಲವನ್ನು ಹೊಂದುತ್ತಾರೆ ಇದರಲ್ಲಿ ಸಂಶಯವಿಲ್ಲ ಇದಿಷ್ಟು ಉಪನಯನ ಸಂಸ್ಕಾರ ಹೊಂದಿದ ಬ್ರಾಹ್ಮಣನ ಮಾತು ಇನ್ನು ಅನುಪನೀತ ನಾದ ಬ್ರಾಹ್ಮಣನು ವೇದಮಂತ್ರವನ್ನುಚ್ಚರಿಸಬಾರದು ಪಿತೃಯಜ್ಞದಲ್ಲಿ ಮಾತ್ರ ಸ್ವಧಾಕಾರವನ್ನುಚ್ಚರಿಸಬಹುದು ಉಳಿದ ಯಾವ ವೈದಿಕ ಕರ್ಮಗಳನ್ನೂ ಆತನು

ಸ ಶೂದ್ರೇಣ ಸಮಸ್ತಾವದ್ಯಾವದ್ವೇದಾನ್ನ ಜಾಯತೇ ।
ನಾಮಸಂಕೀರ್ತನೇ ಧ್ಯಾನೇ ಸರ್ವ ಏವಾಧಿಕಾರಿಣಃ ॥ ೧೨ ॥

ಸಂಸಾರಾನ್ಮುಚ್ಯತೇ ಜಂತುಃ ಶಿವತಾದಾತ್ಮ್ಯಭಾವನಾತ್ ।
ತಥಾ ದಾನಂ ತಪೋ ವೇದಾಧ್ಯಯನಂ ಚಾನ್ಯಕರ್ಮ ವಾ ॥ ೧೩ ॥

ಸಹಸ್ರಾಂಶಂ ತು ನಾರ್ಹಂತಿ ಸರ್ವದಾ ಧ್ಯಾನಕರ್ಮಣಃ ।
ಜಾತಿಮಾತ್ರಮಮಂಗಾನಿ ದೇಶಂ ಕಾಲಮಥಾಪಿ ವಾ ॥ ೧೪ ॥

ಆಸನಾದೀನಿ ಕರ್ಮಾಣಿ ಧ್ಯಾನಂ ನಾಪೇಕ್ಷತೇ ಕ್ವಚಿತ್ ।
ಗಚ್ಛಂಸ್ತಿಷ್ಠಂಶ್ಚರನ್ವಾಪಿ ಶಯಾನೋ ವಾನ್ಯಕರ್ಮಣಿ ॥ ೧೫ ॥

ಪಾತಕೇನಾಪಿ ವಾ ಯುಕ್ತೋ ಧ್ಯಾನಾದೇವ ವಿಮುಚ್ಯತೇ ।
ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ॥ ೧೬ ॥

ನಡಸಬಾರದು ಉಪನಯನ ಮತ್ತು ವೇದಾಧ್ಯಯನವಿಲ್ಲದ ದ್ವಿಜನು ಶೂದ್ರನಿಗೆ ಸಮನೆನಿಸುವನು. ಅವನು ಶಿವನಾಮಗಳನ್ನು ಮಾತ್ರ ಜಪಿಸಬಹುದು ಶಿವನಾಮ ಪಾರಾಯಣಕ್ಕೆ ಎಲ್ಲರೂ ಅಧಿಕಾರಿಗಳೇ

೧೩–೧೫ 'ಶಿವೋಽಹಂ' ಎಂಬ ಭಾವನೆಯಿಂದ ಸರ್ವದಾ ಶಿವತಾದಾತ್ಮ್ಯ ಭಾವವನ್ನು ಹೊಂದುತ್ತಾ ಧ್ಯಾನಿಸುವವನಿಗೆ ಶಿವಸಾಯುಜ್ಯವು ಲಭಿಸುವುದು ಇಂತಹ ಧ್ಯಾನದ ಸಹಸ್ರಾಂಶಕ್ಕೂ, ಧ್ಯಾನ, ಜಪತಪಾದಿಗಳು ಸರಿಸಮವಾಗಲಾರವು ಶಿವಧ್ಯಾನಕ್ಕೆ ದೇಶ, ಕಾಲ, ಸಾಧನ, ಜಾತಿ, ಆಶ್ರಮ, ಆಸನಾದಿಗಳು, ಇತರ ಅಂಗ ಕರ್ಮಗಳು ಇವುಗಳ ಯಾವ ರೀತಿಯ ನಿರ್ಬಂಧವೂ ಇರುವುದಿಲ್ಲ ಸಂಚರಿಸುವಾಗ, ನಿಂತಿರುವಾಗ, ಮಲಗಿರುವಾಗ, ಮತ್ತಾವ ಕಾರ್ಯದಲ್ಲಿ ನಿರತನಾಗಿದ್ದರೂ ಶಿವಧ್ಯಾನವನ್ನು ಮಾಡಬಹುದು ಶಿವಧ್ಯಾನಬಲದಿಂದ ಸಮಸ್ತಪಾಪರಾಶಿಯನ್ನೂ ನಿವಾರಿಸಿಕೊಳ್ಳಬಹುದು

೧೬–೧೮. ಶಿವಧ್ಯಾನದಲ್ಲಿ ಕರ್ಮಾತಿಕ್ರಮದೋಷವಾಗಲಿ, ಕರ್ಮನ್ಯೂನವಾಯಿತೆಂಬ ಭಯವಾಗಲಿ, ಇರುವುದಿಲ್ಲ ಆಶ್ಚರ್ಯದಲ್ಲಾಗಲಿ, ಭಯ, ದುಃಖ,

ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ।
ಆಶ್ಚರ್ಯೇ ವಾ ಭಯೇ ಶೋಕೇ ಕ್ಷುತೇ ವಾ ಮಮ ನಾಮ ಯಃ ॥ ೧೭ ॥

ವ್ಯಾಜೇನ ವಾ ಸ್ಮರೇದ್ಯಸ್ತು ಸ ಯಾತಿ ಪರಮಾಂ ಗತಿಂ ।
ಮಹಾಪಾಪೈರಪಿ ಸ್ಪೃಷ್ಟೋ ದೇಹಾಂತೇ ಯಸ್ತು ಮಾಂ ಸ್ಮರೇತ್ ॥ ೧೮ ॥

ಪಂಚಾಕ್ಷರೀಂ ಚೋಚ್ಚರತಿ ಸ ಮುಕ್ತೋ ನಾತ್ರ ಸಂಶಯಃ ।
ವಿಶ್ವಂ ಶಿವಮಯಂ ಯಸ್ತು ಪಶ್ಯತ್ಯಾತ್ಮಾನಮಾತ್ಮನಾ ॥ ೧೯ ॥

ತಸ್ಯ ಕ್ಷೇತ್ರೇಷು ತೀರ್ಥೇಷು ಕಿಂ ಕಾರ್ಯಂ ವಾನ್ಯಕರ್ಮಸು ।
ಸರ್ವೇಣ ಸರ್ವದಾ ಕಾರ್ಯಂ ಭೂತಿರುದ್ರಾಕ್ಷಧಾರಣಂ ॥ ೨೦ ॥

ಈ ಕಾಲಗಳಲ್ಲಾಗಲಿ, ಸೀನುವಾಗ, ಆಕಲಿಸುವಾಗ, ಅಥವಾ ಮತ್ತಾವ ಕಾರಣ ದಿಂದಾಗಲಿ ನನ್ನ ನಾಮಗಳನ್ನು ಯಾರು ಆಗಾಗ ಸ್ಮರಿಸುವರೋ, ಅವರು ಪರಮ ಗತಿಯನ್ನು ಹೊಂದುವರು ದೇಹಾಂತ್ಯಕಾಲದಲ್ಲಿ ಯಾವನು ನನ್ನ ನಾಮಸ್ಮರಣೆ ಮಾಡುವನೋ, ಅಂತಹವನು ಎಂತಹ ಪಾಪಿಷ್ಠನಾಗಿದ್ದರೂ ಮುಕ್ತಿಯನ್ನು ಪಡೆಯುವನು

೧೯–೨೧ ಪಂಚಭೂತಾತ್ಮಕವಾದ ಈ ಶರೀರವು ನಾಶವಾಗುವಾಗ ಪಂಚ ಮುಖನಾದ ನನ್ನ ಧ್ಯಾನ, ಪಂಚಾಕ್ಷರೀಮಂತ್ರದ ಪುರಶ್ಚರಣೆ, ಇವುಗಳನ್ನು ನಡೆಸುವವರು ಮುಕ್ತರಾಗುವರು ಈ ಪ್ರಪಂಚವೆಲ್ಲಾ ನಶ್ವರವೆಂದು ಭಾವಿಸಿ, ಪರಬ್ರಹ್ಮವಸ್ತುವೊಂದೇ ಸತ್ಯವಾದುದೆಂದೂ, ಆ ಬ್ರಹ್ಮಸ್ವರೂಪವೇ ಈ ಜಗತ್ತೆಂದೂ ಭಾವಿಸಿ, ಆತ್ಮಧ್ಯಾನ ಮಾಡುವವರಿಗೆ ಯಾವ ತೀರ್ಥಕ್ಷೇತ್ರಗಳಾಗಲೀ ವೈದಿಕಕರ್ಮಾಚರಣೆಗಳಾಗಲಿ ಪ್ರಯೋಜನಕೊಡಲಾರವು ಯೋಗಿಯಾಗಲಿ, ಗೃಹಸ್ಥನಾಗಲಿ ತನಗೆ ಭೋಗಿಭೂಷಣನೆನಿಸಿದ ಪರಶಿವನ ಅನುಗ್ರಹವನ್ನು ಪಡೆಯ ಲಿಚ್ಛಿಸುವವರು, ವಿಭೂತಿರುದ್ರಾಕ್ಷಿಗಳನ್ನು ಧರಿಸಿರಲೇ ಬೇಕು ತಿರ್ಯಕ್

ಯೇನ ಕೇನಾಪ್ಯುಪಾಯೇನ ಶಿವಭಕ್ತಿಮಭೀಪ್ಸತಾ ।
ತಿರ್ಯಗ್ಭಸ್ಮಸಮಾಯುಕ್ತೋ ರುದ್ರಾಕ್ಷಾನ್ಯಸ್ತು ಧಾರಯೇತ್ ॥ ೨೧ ॥

ಮಹಾಪಾಪೈರಪಿ ಸ್ಪೃಷ್ಟೋ ಮುಚ್ಯತೇ ನಾತ್ರ ಸಂಶಯಃ ।
ಅನ್ಯಾನಿ ಶೈವಕರ್ಮಾಣಿ ಕರೋತು ನ ಕರೋತು ವಾ ॥ ೨೨ ॥

ಶಿವನಾಮ ಜಪೇದ್ಯಸ್ತು ಸರ್ವದಾ ಮುಚ್ಯತೇ ತು ಸಃ ।
ಅಂತಕಾಲೇ ತು ರುದ್ರಾಕ್ಷಾನ್ ವಿಭೂತಿಂ ಧಾರಯೇತ್ತು ಯಃ ॥ ೨೩ ॥

ಮಹಾಪಾಪೋಪಪಾಪೌಘೈರಪಿ ಸ್ಪೃಷ್ಟೋ ನರಾಧಮಃ ।
ಸರ್ವಥಾ ನೋಪಸರ್ಪಂತಿ ತಂ ಜನಂ ಯಮಕಿಂಕರಾಃ ॥ ೨೪ ॥

ಬಿಲ್ವಮೂಲಮೃದಾ ಯಸ್ತು ಶರೀರಮುಪಲಿಂಪತಿ ।
ಅಂತಕಾಲೇಂತಕಜನೈಃ ಸ ದೂರೀಕ್ರಿಯತೇ ನರಃ ॥ ೨೫ ॥

ಭಸ್ಮತ್ರಿಪುಂಡ್ರವನ್ನೂ, ರುದ್ರಾಕ್ಷಮಾಲೆಯನ್ನೂ ಧರಿಸಿದವರಿಗೆ ಯಾವ ಮಹಾಪಾಪಗಳ ಸಂಸರ್ಗವೂ ಇರಲಾರದು

೨೨–೨೫ ಶೈವಕರ್ಮಗಳನ್ನು ನಡೆಸಿದರೂ ಸರಿಯೆ, ತ್ಯಜಿಸಿದರೂ ಸರಿಯೆ, ಯಾರು ತಪ್ಪದೆ ಶಿವನಾಮಗಳನ್ನು ತಪ್ಪದೆ ಜಪಿಸುವರೋ, ಅಂತಹವರಿಗೆ ಮೋಕ್ಷವು ಕರಗತವಾದುದು ಎಂತಹ ಪಾಪಿಯಾಗಿದ್ದರೂ ನೀಚನಾಗಿದ್ದರೂ ಮನುಷ್ಯನು ಮರಣಕಾಲದಲ್ಲಿ ಭಸ್ಮ ರುದ್ರಾಕ್ಷಿಗಳನ್ನು ಧರಿಸಿದ್ದರೆ, ಅವನಿಗೆ ನರಕವಾಸವಿರುವುದಿಲ್ಲ ನರಕಕ್ಕೆ ಒಯ್ಯುವ ಯಮದೂತರು ಅವನ ಸಮೀಪಕ್ಕೇ ಬರುವುದಿಲ್ಲ ಮತ್ತು ಮರಣಕಾಲದಲ್ಲಿ ಬಿಲ್ವವೃಕ್ಷದ ಬುಡದಲ್ಲಿರುವ ಮೃತ್ತಿಕೆಯಿಂದ ಯಾರು ತಮ್ಮ ಶರೀರವನ್ನು ಪೂರ್ಣವಾಗಿ ಲೇಪಿಸಿಕೊಳ್ಳುವರೋ, ಅಂತಹವರಿಗೆ ಯಮದೂತರ ಬಾಧೆಯಿರುವುದಿಲ್ಲ

|| ಶ್ರೀರಾಮ ಉವಾಚ ||

ಭಗವನ್ ಪೂಜಿತಃ ಕುತ್ರ ಕುತ್ರ ವಾ ತ್ವಂ ಪ್ರಸೀದಸಿ ।
ತದ್ಬ್ರೂಹಿ ಮಮ ಜಿಜ್ಞಾಸಾ ವರ್ತತೇ ಮಹತೀ ವಿಭೋ || ೨೬ ||

|| ಶ್ರೀ ಮಹಾದೇವ ಉವಾಚ ||

ಮೃದಾ ವಾ ಗೋಮಯೇನಾಪಿ ಭಸ್ಮನಾ ಚಂದನೇನ ವಾ ।
ಸಿಕತಾಭಿರ್ದಾರುಣಾ ವಾ ಪಾಷಾಣೇನಾಥ ನಿರ್ಮಿತಾ || ೨೭ ||

ಲೋಹೇನ ವಾಥ ರಂಗೇಣ ಕಾಂಸ್ಯಖರ್ಪರಪಿತ್ತಳೈಃ ।
ತಾಮ್ರರೌಪ್ಯಸುವರ್ಣೈರ್ವಾ ರತ್ನೈರ್ನಾನಾವಿಧೈರಪಿ || ೨೮ ||

ಅಥವಾ ಪಾರದೇನೈವ ಕರ್ಪೂರೇಣಾಥವಾ ಕೃತಾ ।
ಪ್ರತಿಮಾ ಶಿವಲಿಂಗಂ ವಾ ದ್ರವ್ಯೈರೇತೈಃ ಕೃತಂ ತು ಯತ್ || ೨೯ ||

೨೬—೨೯. ಪರಶಿವನ ಈ ಮಾತುಗಳನ್ನು ಕೇಳಿ ಶ್ರೀರಾಮನು ಮತ್ತೆ "ಸ್ವಾಮಿ, ನಿನ್ನನ್ನು ಎಲ್ಲಿ ವಿಶೇಷವಾಗಿ ಪೂಜಿಸಿದರೆ, ಕ್ಷಿಪ್ರದಲ್ಲಿ ನೀನು ಪ್ರಸನ್ನನಾಗುವೆ ? ಈ ರಹಸ್ಯವನ್ನು ನನಗಾಗಿ ತಿಳಿಸಬೇಕು'' ಎಂದು ಪ್ರಾರ್ಥಿಸಲು, ಆಗ ಮಹಾದೇವನು, ಶ್ರೀರಾಮನ ಕೋರಿಕೆಯಂತೆ ಆ ವಿಷಯವನ್ನೇ ಈ ರೀತಿ ನಿರೂಪಿಸಿದನು—ಶ್ರೀರಾಮನೇ ಕೇಳು, ಮೃತ್ತಿಕೆ, ಗೋಮಯ ಭಸ್ಮ, ಚಂದನ, ಮರಳು, ಮರ, ಕಲ್ಲು, ಲೋಹ, ತವರ, ಕಂಚು, ಖರ್ಪರ (ಚಿಪ್ಪು) ಹಿತ್ತಾಳೆ, ತಾಮ್ರ, ಚಿನ್ನ, ಬೆಳ್ಳಿ, ರತ್ನ, ಪಾದರಸ, ಕರ್ಪೂರ, ಈ ವಸ್ತುಗಳಲ್ಲಿ ಯಾವುದರಿಂದ ಬೇಕಾದರೂ ಶಿವಲಿಂಗವನ್ನು ನಿರ್ಮಾಣಮಾಡಿಕೊಳ್ಳಬಹುದು ಅಥವಾ ಮೇಲೆ ಹೇಳಿದ ವಸ್ತುಗಳಿಂದ ಶಿವಪ್ರತಿಮೆಯನ್ನಾದರೂ ಮಾಡಿಸಬಹುದು ಹೀಗೆ ನಿರ್ಮಿತವಾದ ಶಿವಲಿಂಗದ ಆರಾಧನೆಯಿಂದ ಕೋಟಿಗುಣಿತವಾದ ಫಲವು ಅಧಿಕವಾಗಿ ದೊರೆಯುವುದು ಆದರೆ ಶಿವಲಿಂಗ ನಿರ್ಮಾಣಕ್ಕೆ ಮೇಲೆ ಹೇಳಿದ ವಸ್ತುಗಳೆಲ್ಲಾ ಉತ್ತರೋತ್ತರವಾಗಿ ಶ್ರೇಷ್ಠಗಳೆನಿಸಿವೆ.

ತತ್ರ ಮಾಂ ಪೂಜಯೇತ್ತೇಷು ಫಲಂ ಕೋಟಿಗುಣೋತ್ತರಂ ।
ಮೃದ್ದಾರುಕಾಂಸ್ಯಲೋಹೈಶ್ಚ ಪಾಷಾಣೇನಾಪಿ ನಿರ್ಮಿತಾ ॥ ೩೦ ॥

ಗೃಹಿಣಾ ಪ್ರತಿಮಾ ಕಾರ್ಯಾ ಶಿವಂ ಶಶ್ವದಭೀಪ್ಸಿತಾ ।
ಆಯುಃಶ್ರಿಯಂ ಕುಲಂ ಧರ್ಮಂ ಪುತ್ರಾನಾಪ್ನೋತಿ ತೈಃ ಕ್ರಮಾತ್ ॥ ೩೧ ॥

ಬಿಲ್ವವೃಕ್ಷೇ ತತ್ಫಲೇ ವಾ ಯೋ ಮಾಂ ಪೂಜಯತೇ ನರಃ ।
ಪರಾಂ ಶ್ರಿಯಮನುಪ್ರಾಪ್ಯ ಮಮ ಲೋಕೇ ಮಹೀಯತೇ ॥ ೩೨ ॥

ಬಿಲ್ವವೃಕ್ಷಂ ಸಮಾಶ್ರಿತ್ಯ ಯೋ ಮಂತ್ರಾನ್ ವಿಧಿನಾ ಜಪೇತ್ ।
ಏಕೇನ ದಿವಸೇನೈವ ತತ್ಪುರಶ್ಚರಣಂ ಭವೇತ್ ॥ ೩೩ ॥

ಯಸ್ತು ಬಿಲ್ವವನೇ ನಿತ್ಯಂ ಕುಟೀಂ ಕೃತ್ವಾ ವಸೇನ್ನರಃ ।
ಸರ್ವೇ ಮಂತ್ರಾಃ ಪ್ರಸಿಧ್ಯಂತಿ ಜಪಮಾತ್ರೇಣ ಕೇವಲಂ ॥ ೩೪ ॥

---

೩೦–೩೨ ಆದರೆ ಗೃಹಸ್ಥನಾದವನು, ಮೃತ್ತಿಕೆ, ಮರ, ಕಂಚು, ಲೋಹ, ಕಲ್ಲು ಇವುಗಳಿಂದ ನಿರ್ಮಿತವಾದ ಶಿವಲಿಂಗವನ್ನೇ ಆರಾಧಿಸಬೇಕು ಆದರಿಂದ ಗೃಹಸ್ಥನಿಗೆ ಆಯುಸ್ಸೂ, ಸಂಪತ್ತೂ, ಧರ್ಮ, ಸಂತಾನ ಇವು ಅಭಿವೃದ್ಧಿ ಹೊಂದುವುವು ಮತ್ತು ಬಿಲ್ವವೃಕ್ಷದಲ್ಲಾಗಲೀ, ಆದರ ಹಣ್ಣಿನಲ್ಲಾಗಲೀ ಶಿವ ಲಿಂಗವನ್ನಿಟ್ಟು ಭಕ್ತಿಯಿಂದ ಪೂಜಿಸುವವನು ಸಂಪೂರ್ಣವಾದ ಐಶ್ವರ್ಯವನ್ನು ಪಡೆದು ತನ್ನ ಲೋಕದಲ್ಲಿ ಸರ್ವದಾ ವಾಸಿಸತೊಡಗಿದನು

೩೩–೩೪ ಬಿಲ್ವವೃಕ್ಷದ ಮೂಲದಲ್ಲಿ ಕುಳಿತು ಯಾವನು ರುದ್ರಮಂತ್ರ ಗಳನ್ನು ಜಪಿಸುವನೋ, ಆವನಿಗೆ ಒಂದೇ ಒಂದು ದಿನದಲ್ಲಿ ಸರ್ವಮಂತ್ರ ಪುರಶ್ಚರಣೆಯ ಫಲವೂ ದೊರೆಯುವುದು ಬಿಲ್ವವನದಲ್ಲಿ ಗುಡಿಸಿಲನ್ನು ಕಟ್ಟಿಕೊಂಡು ಅಲ್ಲಿಯೇ ವಾಸಮಾಡುವವನಿಗೆ ಸಕಲ ಮಂತ್ರಗಳೂ ಜಪಮಾತ್ರದಿಂದಲೇ ಫಲ ವನ್ನು ಕೊಡುವುವು. ಪರ್ವತಾಗ್ರಭೂತವಾದ ಶಿಖರದಲ್ಲಾಗಲಿ, ನದೀತೀರದಲ್ಲಾ

ಪರ್ವತಾಗ್ರೇ ನದೀತೀರೇ ಬಿಲ್ವವೃಕ್ಷೇ ಶಿವಾಲಯೇ ।
ಅಗ್ನಿಹೋತ್ರೇ ಕೇಶವಸ್ಯ ಸನ್ನಿಧೌ ವಾ ಜಪೇತ್ತು ಯಃ ॥ ೩೫ ॥

ನೈವಾಸ್ಯ ವಿಘ್ನಂ ಕುರ್ವಂತಿ ದಾನವಾ ಯಕ್ಷರಾಕ್ಷಸಾಃ ।
ತಂ ನ ಸ್ಪೃಶಂತಿ ಪಾಪಾನಿ ಶಿವಸಾಯುಜ್ಯಮೃಚ್ಛತಿ ॥ ೩೬ ॥

ಸ್ಥಂಡಿಲೇ ವಾ ಜಲೇ ವಹ್ನೌ ವಾಯಾವಾಕಾಶ ಏವ ಚ ।
ಗುರೌ ಸ್ವಾತ್ಮನಿ ವಾ ಯೋ ಮಾಂ ಪೂಜಯೇತ್ಪ್ರಯತೋ ನರಃ ॥ ೩೭ ॥

ಸ ಕೃತ್ಸ್ನಂ ಫಲಮಾಪ್ನೋತಿ ಲವಮಾತ್ರೇಣ ರಾಘವ ।
ಆತ್ಮಪೂಜಾಸಮಾ ನಾಸ್ತಿ ಪೂಜಾ ರಘುಕುಲೋತ್ತಮ ॥ ೩೮ ॥

ಮತ್ಸಾಯುಜ್ಯಮವಾಪ್ನೋತಿ ಚಂಡಾಲೋಽಪ್ಯಾತ್ಮಪೂಜಯಾ ।
ಸರ್ವಾನ್ಕಾಮಾನವಾಪ್ನೋತಿ ಮನುಷ್ಯಃ ಕಂಬಳಾಸನೇ ॥ ೩೯ ॥

ಗಲಿ, ಬಿಲ್ವವೃಕ್ಷದ ಬುಡದಲ್ಲಾಗಲಿ, ಶಿವಾಲಯದಲ್ಲಾಗಲಿ, ಅಗ್ನಿ ಗೃಹದಲ್ಲಾಗಲಿ, ವಿಷ್ಣುವಿನ ಸಮೀಪದಲ್ಲಾಗಲಿ ಶಿವಮಂತ್ರಗಳನ್ನು ಜಪಿಸುವವನಿಗೆ ಯಾರಿಂದಲೂ ವಿಘ್ನವುಂಟಾಗಲಾರದು ಯಕ್ಷರಾಕ್ಷಸರೂ ಅವನಿಗೆ ಯಾವ ತೊಂದರೆಯನ್ನೂ ಮಾಡಲಾರರು ಪಾಪಸಂಸ್ಪರ್ಶವೇ ಅವನಿಗಾಗುವುದಿಲ್ಲ ಆದರಿಂದ ಅವನು ಶಿವ ಸಾಯುಜ್ಯವನ್ನೂ ಪಡೆಯುವನು

೩೭–೪೦ ಮಂತ್ರಪೂತವಾದ ಸ್ಥಂಡಿಲಪ್ರದೇಶ, ನೀರು, ಅಗ್ನಿ, ವಾಯು, ಆಕಾಶ, ಗುರು, ಆತ್ಮ, ಇವುಗಳಲ್ಲಿ ಶಿವನನ್ನು ಧ್ಯಾನಿಸಿ ಯಾರು ಭಕ್ತಿಯುತನಾಗಿ ರುವನೋ ಅವನು ಕರ್ಮಗಳ ಸಂಪೂರ್ಣ ಫಲವನ್ನು ಪಡೆಯುವನು ಲೋಕದಲ್ಲಿ ಆತ್ಮಪೂಜೆಗಿಂತ ದೊಡ್ಡ ಕರ್ಮವಿಲ್ಲ ಜಾತಿಯಿಂದ ಚಂಡಾಲನಾದರೂ ಆತ್ಮಪೂಜೆ ಯನ್ನು ನೆರವೇರಿಸುವುದರಿಂದ ಅವನಿಗೆ ಶಿವಸಾಯುಜ್ಯವು ಲಭಿಸುವುದು ಇನ್ನು ಶಿವಮಂತ್ರಜಪಮಾಡುವಾಗ ಮನುಷ್ಯನು ಕಂಬಳಾಸನದಲ್ಲಿ ಕುಳಿತು ಜಪಮಾಡಿದರೆ

ಕೃಷ್ಣಾಜಿನೇ ಭವೇನ್ಮುಕ್ತಿರ್ಮೋಕ್ಷಶ್ರೀರ್ವ್ಯಾಘ್ರಚರ್ಮಣಿ ।
ಕುಶಾಸನೇ ಭವೇಜ್ಜ್ಞಾನಮಾರೋಗ್ಯಂ ಪತ್ರನಿರ್ಮಿತೇ ॥ ೪೦ ॥

ಉದಙ್ಮುಖಃ ಪ್ರಾಙ್ಮುಖೋ ವಾ ಜಪಂ ಪೂಜಾಂ ಸಮಾಚರೇತ್ ।
ಪಾಷಾಣೇ ದುಃಖಮಾಪ್ನೋತಿ ಕಾಷ್ಠೇ ನಾನಾವಿಧಾನ್ ಗದಾನ್ ॥ ೪೧ ॥

ವಸ್ತ್ರೇ ಶ್ರಿಯಮವಾಪ್ನೋತಿ ಭೂಮೌ ಮಂತ್ರೋ ನ ಸಿದ್ಧ್ಯತಿ ।
ಅಕ್ಷಮಾಲಾವಿಧಿಂ ವಕ್ಷ್ಯೇ ಶೃಣುಷ್ವಾವಹಿತೋ ನೃಪ ॥ ೪೨ ॥

ಸಾಮ್ರಾಜ್ಯಂ ಸ್ಫಾಟಿಕೋ ದದ್ಯಾತ್ಪುತ್ರಜೀವೀ ಪರಾಂ ಶ್ರಿಯಂ ।
ಆತ್ಮಜ್ಞಾನಂ ಕುಶಗ್ರಂಥೀ ರುದ್ರಾಕ್ಷಸ್ಸರ್ವಕಾಮದಃ ॥ ೪೩ ॥

ಅವನಿಗೆ ಸಕಲ ಇಷ್ಟಾರ್ಥಗಳೂ ಸಿದ್ಧಿಸುವುವು ಕೃಷ್ಣಾಜಿನದ ಮೇಲೆ ಕುಳಿತು ಜಪಮಾಡುವವರಿಗೆ ಸ್ಥಿರಮುಕ್ತಿಯೂ, ವ್ಯಾಘ್ರಾಜಿನದಿಂದ ಮೋಕ್ಷಸಂಪತ್ತೂ, ದರ್ಭಾಸನದಿಂದ ಜ್ಞಾನಲಾಭವೂ, ಪತ್ರಾಸನದಿಂದ ಆರೋಗ್ಯವೂ ಲಭಿಸುವುದು.

೪೧–೪೨ ಉತ್ತರದಿಗಭಿಮುಖವಾಗಿಯೋ, ಪೂರ್ವಾಭಿಮುಖವಾಗಿಯೋ ಕುಳಿತು ಮಂತ್ರಪಾರಾಯಣ ಮಾಡಬೇಕು ಕಲ್ಲಿನ ಮೇಲೆ ಕುಳಿತು ಜಪ ಮಾಡುವವರಿಗೆ ವಿಶೇಷವಾದ ದುಃಖವೂ, ಕಟ್ಟಿಗೆಯಮೇಲೆ ಕುಳಿತು ಮಂತ್ರಜಪ ಮಾಡುವವರಿಗೆ ನಾನಾವಿಧಗಳಾದ ರೋಗಗಳೂ ಉಂಟಾಗುವುವು ಮಡಿ ವಸ್ತ್ರದ ಮೇಲೆ ಕುಳಿತು ಜಪಮಾಡುವುದರಿಂದ ಐಶ್ವರ್ಯವು ದೊರೆಯುವುದು ಭೂಮಿಯ ಮೇಲೆ ಕುಳಿತು ಎಂದೂ ಜಪ ಮಾಡಬಾರದು ಶ್ರೀರಾಮನೇ, ಈಗ ಜಪಮಾಲೆಯ ಲಕ್ಷಣಾವನ್ನು ಹೇಳುವೆನು ಕೇಳು

೪೩–೪೪ ಸ್ಫಟಿಕಮಣಿಯಿಂದ ಜಪಸಂಖ್ಯೆಯನ್ನು ಎಣಿಸುತ್ತಾ ಜಪ ಮಾಡುವವರಿಗೆ ಪುತ್ರಸಂಪತ್ತೂ, ಅಮಿತವಾದ ಐಶ್ವರ್ಯವೂ, ಸಾಮ್ರಾಜ್ಯವೂ ಲಭಿಸುವುದು ದರ್ಭೆಯ ಗ್ರಂಥಿಯು ಜಪಮಾಲೆಯಾದರೆ ಆತ್ಮಜ್ಞಾನವೂ, ರುದ್ರಾಕ್ಷಿಯಿಂದ

ಪ್ರವಾಳೈಶ್ಚ ಕೃತಾ ಮಾಲಾ ಸರ್ವಲೋಕವಶಪ್ರದಾ ।
ಮೋಕ್ಷಪ್ರದಾ ಚ ಮಾಲಾ ಸ್ಯಾದಾಮಲಕ್ಯಾಃ ಫಲೈಃ ಕೃತಾ ॥ ೪೪ ॥

ಮುಕ್ತಾಫಲೈಃ ಕೃತಾ ಮಾಲಾ ಸರ್ವವಿದ್ಯಾಪ್ರದಾಯಿನೀ ।
ಮಾಣಿಕ್ಯರಚಿತಾ ಮಾಲಾ ಸರ್ವಲೋಕವಶಂಕರೀ ॥ ೪೫ ॥

ನೀಲೈರ್ಮರಕತೈರ್ವಾಪಿ ಕೃತಾ ಶತ್ರುಜಯಪ್ರದಾ ।
ಸುವರ್ಣರಚಿತಾ ಮಾಲಾ ದದ್ಯಾದ್ವೈ ಮಹತೀಂ ಶ್ರಿಯಂ ॥ ೪೬ ॥

ತಥಾ ರೌಪ್ಯಮಯೀ ಮಾಲಾ ಕನ್ಯಾಂ ಯಚ್ಛತಿ ಕಾಮಿತಾಂ ।
ಉಕ್ತಾನಾಂ ಸರ್ವಕಾಮಾನಾಂ ದಾಯಿನೀ ಪಾರದೈಃ ಕೃತಾ ॥ ೪೭ ॥

ಅಷ್ಟೋತ್ತರಶತೈರ್ಮಾಲಾ ತತ್ರ ಸ್ಯಾದುತ್ತಮೋತ್ತಮಾ ।
ಶತಸಂಖ್ಯೋತ್ತಮಾ ಮಾಲಾ ಪಂಚಾಶನ್ಮಧ್ಯಮಾ ಸ್ಮೃತಾ ॥ ೪೮ ॥

ಸಕಲ ಇಷ್ಟಾರ್ಥಗಳೂ ಸಲ್ಲುವುವು ಪ್ರವಾಳವನ್ನು ಜಪಮಾಲೆಯಾಗಿ ಮಾಡಿಕೊಳ್ಳುವುದರಿಂದ ಸರ್ವಲೋಕಗಳೂ ವಶವರ್ತಿಗಳಾಗುವುವು ನೆಲ್ಲಿಕಾಯಿಯ ಸರದಿಂದ ಜಪಮಾಲೆಯನ್ನು ಮಾಡಿಕೊಂಡರೆ ಮೋಕ್ಷವು ಸುಲಭವಾಗಿ ಲಭಿಸುವುದು

೪೬–೪೮ ನೀಲದಿಂದಾಗಲಿ, ಮರಕತದಿಂದಾಗಲಿ ಮಾಡಿದ ಜಪಮಾಲೆಯು ಶತ್ರು ಜಯಪ್ರದವಾದುದು. ಸುವರ್ಣದಿಂದ ರಚಿತವಾದ ಜಪಮಾಲೆಯು ಅತಿಶಯವಾದ ಸಂಪತ್ತನ್ನುಂಟುಮಾಡುವುದು ರಜತಮಯವಾದ ಜಪಮಾಲೆಯು ತನ್ನ ಇಚ್ಛೆಗೆ ಒಳಗಾದ ಸ್ತ್ರೀಯನ್ನು ವಶೀಕರಿಸಿಕೊಡುವುದು ಪಾದರಸದ ಮಣಿಗಳಿಂದ ನಿರ್ಮಿತವಾದ ಮಣಿಮಾಲೆಯು ಸರ್ವಕಾಮ್ಯಗಳನ್ನೂ ಒದಗಿಸುವುದು ನೂರೆಂಟು ಮಣಿಗಳಿಂದ ಕೂಡಿದ ಜಪಮಾಲೆಯು ಉತ್ತಮೋತ್ತಮವೆನಿಸಿಕೊಳ್ಳುವುದು ನೂರು ಮಣಿಗಳಿಂದ ಕೂಡಿದುದು ಉತ್ತಮವೆನಿಸುವುದು ಐವತ್ತು ಮಣಿಗಳಿಂದ ಕೂಡಿದುದು ಅಥವಾ ಐವತ್ತುನಾಲ್ಕು ಮಣಿಗಳಿಂದ ಕೂಡಿದುದು ಮಧ್ಯಮವೆನಿಸುವುದು ಇಪ್ಪತ್ತೇಳು ಮಣಿಗಳುಳ್ಳದುದು ಅಧಮ ವಾದುದು

ಚತುಃಪಂಚಾಶತಾ ಯದ್ವಾ ಅಥವಾ ಸಪ್ತವಿಂಶತಿಃ ।
ಅಥವಾ ಪಂಚವಿಂಶತ್ಯಾ ಯದಿ ಸ್ಯಾಚ್ಛತನಿರ್ಮಿತಾ ॥ ೪೯ ॥

ಪಂಚಾಶದಕ್ಷರಾಣ್ಯತ್ರಾನುಲೋಮಪ್ರತಿಲೋಮತಃ ।
ಇತ್ಯೇವಂ ಸ್ಥಾಪಯೇತ್ಸ್ಪಷ್ಟಂ ನ ಕಸ್ಮೈಚಿತ್ಪ್ರದರ್ಶಯೇತ್ ॥ ೫೦ ॥

ವರ್ಣೈರ್ವಿನ್ಯಸ್ತಯಾ ಯಸ್ತು ಕ್ರಿಯತೇ ಮಾಲಯಾ ಜಪಃ ।
ಏಕವಾರೇಣ ತಸ್ಯೈವ ಪುರಶ್ಚರ್ಯಾ ಕೃತಾ ಭವೇತ್ ॥ ೫೧ ॥

ಸವ್ಯಪಾಣಿಂ ಗುದೇ ನ್ಯಸ್ಯ ದ್ವಿತೀಯಂ ಲಿಂಗಮೂರ್ಧನಿ ।
ಯೋನಿಮುದ್ರಾಬಂಧ ಏಷ ಭವೇದಾಸನಮುತ್ತಮಂ ॥ ೫೨ ॥

ಯೋನಿಮುದ್ರಾಸನೇ ಸ್ಥಿತ್ವಾ ಪ್ರಜಪೇದ್ಯಸ್ಸಮಾಹಿತಃ ।
ಯಂ ಕಂಚಿದಪಿ ವಾ ಮಂತ್ರಂ ತಸ್ಯ ಸ್ಯುಸ್ಸರ್ವಸಿದ್ಧಯಃ ॥ ೫೩ ॥

---

೪೯–೫೧ ನೂರುಮಣಿಯುಳ್ಳ ಅಕ್ಷಮಾಲೆಯಲ್ಲಿ ಐವತ್ತು ಐವತ್ತು ಮಣಿಗಳನ್ನು ಬೇರೆ ಬೇರೆ ವರ್ಣಗಳಲ್ಲಿಟ್ಟು ಅದನ್ನು ಅನುಲೋಮ ವಿಲೋಮಕ್ರಮದಿಂದ ತೋರುವಂತೆ ಏರ್ಪಡಿಸಿಕೊಳ್ಳಬೇಕು ಅದನ್ನು ವಿಶೇಷವಾಗಿ ಜಪಕಾಲದಲ್ಲಿ ಯಾರಿಗೂ ತೋರ್ಪಡಿಸಬಾರದು, ಇಂತಹ ಜಪಮಾಲೆಯಲ್ಲಿ ಒಂದು ಸಾರಿ ಮಂತ್ರಜಪಮಾಡಿದರೂ, ಆ ಮಂತ್ರ ಪುರಶ್ಚರಣೆಯ ಫಲವೆಲ್ಲಾ ಲಭಿಸುವುದು

೫೨–೫೩ ಎಡಗೈಯ್ಯನ್ನು ಗುದಾಕಾರದಲ್ಲಿಟ್ಟು ಬಲಗೈಯ್ಯನ್ನು ಲಿಂಗಾಕಾರವಾಗಿ ಮೇಲ್ಭಾಗದಲ್ಲಿ ಹೊಂದಿ ತೋರ್ಪಡಿಸುವ ಮುದ್ರೆಗೆ ಯೋನಿಮುದ್ರೆಯೆಂದು ಹೆಸರು ಈ ಮುದ್ರಾಸಹಿತವಾದ ಆಸನವು ಜಪಕ್ಕೆ ಅತ್ಯಂತ ಶ್ರೇಷ್ಠವಾದುದು. ಯೋನಿ ಮುದ್ರಾಸನದಲ್ಲಿ ಕುಳಿತು, ಸಮಾಹಿತಮನಸ್ಕನಾಗಿ ಯಾವ ಮಂತ್ರಗಳನ್ನು ಜಪಿಸಿದರೂ ಅದು ಕ್ಷಿಪ್ರಫಲಕಾರಿಯಾಗುವುದು ಸಕಲ ಇಷ್ಟಾರ್ಥಗಳೂ ಆ ವಿಧವಾಗಿ ಮಾಡುವ ಮಂತ್ರಜಪದಿಂದ ಸಿದ್ಧಿಯನ್ನು ಕೊಡುವುವು

ಛಿನ್ನಾ ರುದ್ಧಾಸ್ಸ್ತಂಭಿತಾಶ್ಚ ಮೀಲಿತಾ ಮೂರ್ಚ್ಛಿತಾಸ್ತಥಾ ।
ಸುಪ್ತಾ ಮತ್ತಾ ಹೀನವೀರ್ಯಾ ದಗ್ಧಾಸ್ತ್ರಸ್ತಾರಿಪಕ್ಷಗಾಃ ॥ ೫೪ ॥

ಬಾಲಾ ಯೌವನಮತ್ತಾಶ್ಚ ವೃದ್ಧಾ ಮಂತ್ರಾಶ್ಚ ಯೇ ಮತಾಃ ।
ಯೋನಿಮುದ್ರಾಸನೇ ಸ್ಥಿತ್ವಾ ಮಂತ್ರಾನೇವಂವಿಧಾನ್ ಜಪೇತ್ ॥ ೫೫ ॥

ತಸ್ಯ ಸಿಧ್ಯಂತಿ ತೇ ಮಂತ್ರಾ ನಾನ್ಯಸ್ಯ ತು ಕಥಂಚನ ।
ಬ್ರಾಹ್ಮಂ ಮುಹೂರ್ತಮಾರಭ್ಯಾಮಧ್ಯಾಹ್ನಂ ಜಪೇನ್ಮನುಂ ॥ ೫೬ ॥

ಅತ ಊರ್ಧ್ವಂ ಕೃತೇ ಜಪ್ಯೇ ವಿನಾಶೋ ಭವತಿ ಧ್ರುವಂ ।
ಪುರಶ್ಚರ್ಯಾವಿಧಾವೇವಂ ಸರ್ವಕಾಮ್ಯಫಲೇಷ್ವಪಿ ॥ ೫೭ ॥

ನಿತ್ಯೇ ನೈಮಿತ್ತಿಕೇ ವಾಪಿ ತಪಶ್ಚರ್ಯಾಸು ವಾ ಪುನಃ ।
ಸರ್ವದೈವ ಜಪಃ ಕಾರ್ಯೋ ನ ದೋಷಸ್ತತ್ರ ಕಶ್ಚನ ॥ ೫೮ ॥

ಛಿನ್ನ, ಮೂರ್ಛಿತ, ಮೀಳಿತ, (ಮೀಲಿತ) ರುದ್ಧ, ದಗ್ಧ, ಸ್ತಂಭಿತ, ಹೀನಬಲ, ಶಿಶು, ವೃದ್ಧ, ಮತ್ತ, ತ್ರಸ್ತ, ಯೌವನ, ಇವೇ ಮೊದಲಾದ ಮಂತ್ರಗಳು ಯೋನಿ ಮುದ್ರಾಸನದಲ್ಲಿ ಜಪಿಸಲ್ಪಟ್ಟಿದ್ದೇ ಆದರೆ ಆಯಾ ಮಂತ್ರ ಪುರಶ್ಚರಣೆಗೆ ತಕ್ಕ ಫಲ ಗಳು ಅನಾಯಾಸವಾಗಿ ಬಹು ಬೇಗ ಫಲಪ್ರದಗಳಾಗುವುವು (ಮೇಲೆ ಹೇಳಿದ ಮಂತ್ರಭೇದಗಳನ್ನು ಮಂತ್ರಶಾಸ್ತ್ರಗಳಿಂದರಿಯಬೇಕು )

೫೬–೫೮ ನಿತ್ಯವೂ ಸೂರ್ಯೋದಯಾತ್ಪೂರ್ವದಿಂದಾರಂಭವಾಗುವ ಬ್ರಾಹ್ಮ ಮುಹೂರ್ತದಿಂದಾರಂಭಿಸಿ, ಮಧ್ಯಾಹ್ನಕಾಲಪರ್ಯಂತವಿರುವ ಕಾಲಗಳಲ್ಲಿ ಮಂತ್ರ ಪುರಶ್ಚರಣೆಮಾಡಬೇಕು ಫಲಕಾಮನೆಯಿಂದ ಮಾಡುವವರಿಗೆ ಫಲವು ಸಿದ್ಧಿಸುವ ಕಾಲವೆಂದರೆ ಅದೇ ಮಧ್ಯಾಹ್ನದನಂತರ ಮಾಡುವ ಸಮಸ್ತ ಮಂತ್ರ ಜಪಗಳೂ ವಿರುದ್ಧವಾದ ಅನಿಷ್ಟಫಲಗಳನ್ನೂ ಕೊಡುವುವು ಕಾಮ್ಯಫಲವನ್ನಪೇಕ್ಷಿಸದೆ ನೈಮಿತ್ತಿಕವಾದಲ್ಲಿ, ಈಶ್ವರ ತೃಪ್ತಿಗಾಗಿ ಮಾಡುವ ತಪಶ್ಚರ್ಯೆಯಲ್ಲಿಯೂ ಯಾವಾಗ ಬೇಕಾದರೂ ಮಂತ್ರಜಪ ಮಾಡಬಹುದು ಅದಕ್ಕೆ ಅಷ್ಟಾಗಿ ಕಾಲನಿಯಮವಿಲ್ಲ ಆದರೆ ಮಂತ್ರಜಪಮಾಡುವವನು ಮಾತ್ರ ಸರ್ವದಾ ನನ್ನ ಸ್ವರೂಪವನ್ನು ಅನು ಸಂಧಾನ ಮಾಡುತ್ತಲೇ ಇರಬೇಕು

ಯಸ್ತು ರುದ್ರಂ ಜಪೇನ್ನಿತ್ಯಂ ಧ್ಯಾಯಮಾನೋ ಮಮಾಕೃತಿಂ ।
ಷಡಕ್ಷರಂ ವಾ ಪ್ರಣವಂ ನಿಷ್ಕಾಮೋ ವಿಜಿತೇಂದ್ರಿಯಃ ॥ ೫೯ ॥

ಅಥಾಥರ್ವಶಿರೋಮಂತ್ರಂ ಕೈವಲ್ಯಂ ವಾ ರಘೂತ್ತಮ ।
ಸ ತೇನೈವ ಚ ದೇಹೇನ ಶಿವಃ ಸಂಜಾಯತೇ ಸ್ವಯಂ ॥ ೬೦ ॥

ಅಧೀತೇ ಶಿವಗೀತಾಂ ಯೋ ನಿತ್ಯಮೇತಾಂ ಜಿತೇಂದ್ರಿಯಃ ।
ಶೃಣುಯಾದ್ವಾ ಸ ಮುಕ್ತಸ್ಸ್ಯಾತ್ಸಂಸಾರಾನ್ನಾತ್ರ ಸಂಶಯಃ ॥ ೬೧ ॥

॥ ಸೂತ ಉವಾಚ ॥

ಏವಮುಕ್ತ್ವಾ ಮಹಾದೇವಸ್ತತ್ರೈವಾಂತರಧೀಯತ ।
ರಾಮಃ ಕೃತಾರ್ಥಮಾತ್ಮಾನಮಮನ್ಯತ ತದೈವ ಸಃ ॥ ೬೨ ॥

ಏವಂ ಮಯಾ ಸಮಾಸೇನ ಶಿವಗೀತಾ ಸಮೀರಿತಾ ।
ಏತಾಂ ಯಃ ಪ್ರಜಪೇನ್ನಿತ್ಯಂ ಶೃಣುಯಾದ್ವಾ ಸಮಾಹಿತಃ ॥ ೬೩ ॥

---

೫೯-೬೧ ಶ್ರೀರುದ್ರ, ಪ್ರಣವ, ಷಡಕ್ಷರೀಮಂತ್ರ, ಕೈವಲ್ಯೋಪನಿಷತ್ತು, ಅಥರ್ವಶೀರ್ಷೋಪನಿಷತ್ತು, ಮೊದಲಾದ ಶೈವಮಂತ್ರಗಳನ್ನು ಯಾವನು ನಿಷ್ಕಾಮನಾಗಿ ಭಗವತ್ಪ್ರೀತಿಯಿಂದ, ನನ್ನ ಆಕಾರವನ್ನೇ ಸದಾ ಹೃದಯದಲ್ಲಿ ಧ್ಯಾನಮಾಡುತ್ತಾ ಜಪಮಾಡುವನೋ, ಅವನು ಭೂಲೋಕದಲ್ಲಿಯೇ ಪ್ರತ್ಯಕ್ಷ ರುದ್ರನೆನಿಸುವನು ಶ್ರೀರಾಮನೇ, ಈ ನನ್ನ ಮಾತಿನಲ್ಲಿ ಸಂಶಯಪಡಬೇಡ, ಮತ್ತು ಇಲ್ಲಿನವರೆಗೂ ನಾನು ಹೇಳಿದ ಶಿವಗೀತೆಯನ್ನು ಜಿತೇಂದ್ರಿಯನಾಗಿ ಓದುವವನೂ, ಭಕ್ತಿಯಿಂದ ಕೇಳುವವನೂ ಸಾಂಸಾರಿಕಗಳಾದ ಸಕಲ ದುಃಖಗಳನ್ನೂ ದೂರಮಾಡಿ ನಿತ್ಯಾನಂದವನ್ನನುಭವಿಸುತ್ತಾ ಪರಬ್ರಹ್ಮಸ್ವರೂಪವನ್ನು ಪಡೆಯುವನು

೬೨-೬೪ ಹೀಗೆ ಪರಮೇಶ್ವರನು ಶ್ರೀರಾಮನಿಗೆ ಮುಕ್ತಿಸಾಧನೋಪಾಯಾದಿ ಸಕಲ ಸದ್ಧರ್ಮಗಳನ್ನೂ ಉಪದೇಶಿಸಿ ಒಡನೆಯೇ ಅಂತರ್ಧಾನನಾದನು.

ಏಕಾಗ್ರಚಿತ್ತೋ ಯೋ ಮರ್ತ್ಯಸ್ತಸ್ಯ ಮುಕ್ತಿಃ ಕರೇ ಸ್ಥಿತಃ ।
ಅತಃ ಶೃಣುಧ್ವಂ ಮುನಯೋ ನಿತ್ಯಮೇತಾಂ ಸಮಾಹಿತಾಃ ॥ ೬೪ ॥

ಅನಾಯಾಸೇನ ವೋ ಮುಕ್ತಿರ್ಭವಿತಾ ನಾತ್ರಸಂಶಯಃ ।
ಕಾಯಕ್ಲೇಶೋ ಮನಃಕ್ಷೋಭೋ ಧನಹಾನಿರ್ನ ಚಾತ್ಮನಃ ॥ ೬೫ ॥

ಪೀಡಾಸ್ತಿ ಶ್ರವಣಾದೇವ ಯಸ್ಮಾತ್ಕೈವಲ್ಯಮಾಪ್ನುಯಾತ್ ।
ಶಿವಗೀತಾಮತೋ ನಿತ್ಯಂ ಶೃಣುಧ್ವಮೃಷಿಸತ್ತಮಾಃ ॥ ೬೬ ॥

॥ ಋಷಯ ಊಚುಃ ॥

ಅದ್ಯ ಪ್ರಭೃತಿ ನಃ ಸೂತ ತ್ವಮಾಚಾರ್ಯಃ ಪಿತಾ ಗುರುಃ ।
ಅವಿದ್ಯಾಯಾಃ ಪರಂ ಪಾರಂ ಯಸ್ಮಾತ್ತಾರಯಿತಾಸಿ ನಃ ॥ ೬೭ ॥

---

ಶ್ರೀರಾಮಚಂದ್ರನಾದರೋ, ಆ ಶಿವೋಕ್ತಿಯನ್ನು ಕೇಳಿ ತಾನೇ ಧನ್ಯನೆಂದರಿತು ಆನಂದಭರಿತನಾದನು ” ಎಲೈ ಶೌನಕಾದಿ ಮಹರ್ಷಿಗಳೇ, ಇಲ್ಲಿನವರೆಗೂ ನಿಮಗೆ ಸಾಕ್ಷಾತ್ಪರಮೇಶ್ವರನೇ ಶ್ರೀರಾಮನಿಗೆ ಪ್ರೀತಿಯಿಂದ ಹೇಳಿದ ಶಿವಗೀತೆಯನ್ನು ಸಂಕ್ಷೇಪವಾಗಿ ತಿಳಿಯಪಡಿಸಿರುವೆನು ಇದನ್ನು ಸಮಾಧಾನಚಿತ್ತದಿಂದ ಕೇಳುವವರೂ, ಓದುವವರೂ, ಏಕಾಗ್ರಚಿತ್ತದಿಂದ ನಿತ್ಯವೂ ಪಾರಾಯಣ ಮಾಡುವವರೂ ನಿಶ್ಚಯವಾಗಿ ಮುಕ್ತಿಯನ್ನು ಪಡೆಯುವರು, ಅವರಿಗೆ ಮೋಕ್ಷಲಕ್ಷ್ಮಿಯು ಕರಗತವಾದಂತೆಯೇ ಸರಿ

೬೫–೬೬ ಮಹರ್ಷಿವರ್ಯರೇ, ಇಂತಹ ಪವಿತ್ರವಾದ ಶಿವಗೀತೆಯನ್ನು ನೀವು ತಪ್ಪದೆ ಸ್ಥಿರಮನಸ್ಸಿನಿಂದ ಕೇಳಿರಿ ಇದರಿಂದ ನಿಮಗೆ ಅನಾಯಾಸವಾಗಿ ಮುಕ್ತಿಯು ದೊರೆಯುವುದು ನಿಮಗೆ ದೇಹಕ್ಲೇಶವಾಗಲಿ, ಮನಃಖೇದವಾಗಲಿ, ದ್ರವ್ಯನಾಶವಾಗಲಿ ಎಂದೂ ಆಗುವುದಿಲ್ಲ ಇದರ ಶ್ರವಣಮಾತ್ರದಿಂದಲೇ ಸಮಸ್ತವಾದ ಪಾಪರಾಶಿಯೂ ಪರಿಹಾರವಾಗಿ ಮುಕ್ತಿಯು ದೊರೆಯುವುದು

೬೭–೬೮ ಹೀಗೆ ಶಿವಗೀತೆಯನ್ನೂ, ಶಿವಗೀತಾ ಮಹಿಮೆಯನ್ನೂ ವಾತ್ಸಲ್ಯಪರಿಪೂರಿತವಾದ ಮನಸ್ಸಿನಿಂದ ಸೂತ ಮಹಾ ಮುನಿಗಳು, ನೈಮಿಷಾರಣ್ಯವಾಸಿಗಳಾದ ಋಷಿಜನರಿಗೆ ವಿವರಿಸಿ ಹೇಳಲು, ಆಸಕ್ತಿಯಿಂದ ಕೇಳಿದ ಸಕಲ ಮುನಿವೃಂದವೂ ಸೂತಮಹಾಮುನಿಗೆ ನಾನಾರೀತಿಯಾಗಿ ವಂದಿಸುತ್ತಾ ಅವರನ್ನು

ಉತ್ಪಾದಕಬ್ರಹ್ಮದಾತ್ರೋರ್ಗರೀಯಾನ್ ಬ್ರಹ್ಮದಃ ಪಿತಾ ।
ತಸ್ಮಾತ್ತ್ವಂ ತಾತ್ಮಜ ತ್ವತ್ತಃ ಸತ್ಯಂ ನಾನ್ಯೋಽಸ್ತಿ ನೋ ಗುರುಃ ॥ ೭೮ ॥

॥ ವ್ಯಾಸ ಉವಾಚ ॥

ಇತ್ಯುಕ್ತ್ವಾ ಪ್ರಯಯುಃ ಸರ್ವೇ ಸಾಯಂ ಸಂಧ್ಯಾಮುಪಾಸಿತುಂ ।
ಸ್ತುವಂತಃ ಸೂತಪುತ್ರಂ ತೇ ಸಂತುಷ್ಟಾ ಗೌತಮೀತಟಂ ॥ ೭೯ ॥

ಇತಿ ಶ್ರೀಪದ್ಮಪುರಾಣೇ ಶಿವಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಶಿವರಾಘವಸಂವಾದೇ ಸಕಲಶಾಸ್ತ್ರ
ನಿರ್ಣೀತಮೋಕ್ಷಯೋಗೋ ನಾಮ
॥ ಷೋಡಶೋಽಧ್ಯಾಯಃ ॥
॥ ಶ್ರೀಶಿವಗೀತಾ ಸಂಪೂರ್ಣಾ ॥

---

ಕುರಿತು " ಸೂತಮಹರ್ಷಿಯೇ, ನೀನು ನಮಗೆ ಜ್ಞಾನದಾತೃವಾದ ಸದ್ಗುರುವು ಪಿತೃಸಮಾನನು, ನಿನ್ನ ಉಪದೇಶಬಲದಿಂದ ನಾವು ಈಗ ಅವಿದ್ಯಾರೂಪವಾದ ಮಹಾ ಸಾಗರವನ್ನು ದಾಟಿ ಬ್ರಹ್ಮಸ್ವರೂಪವನ್ನು ಪಡೆಯುವ ದಿವ್ಯಶಕ್ತಿಯನ್ನು ಸಂಪಾದಿಸಿದೆವು ನಮ್ಮನ್ನು ಅಜ್ಞಾನದಿಂದ ಉದ್ಧರಿಸಿದ ಮಹಾಚಾರ್ಯವರ್ಯನು ನೀನು ಸೂತಮಹರ್ಷಿಯೇ, ಲೋಕದಲ್ಲಿ ಜನ್ಮಕ್ಕೆ ಕಾರಣನಾದ ತಂದೆಗೂ, ಜ್ಞಾನದಾತೃನಾದ ಗುರುವಿಗೂ ವ್ಯತ್ಯಾಸವಿಲ್ಲದಿದ್ದರೂ, ಒಂದಂಶದಲ್ಲಿ ಜ್ಞಾನಾಚಾರ್ಯನಾದ ಸದ್ಗುರುವೇ ಜನಕನಿಗಿಂತ ಶ್ರೇಷ್ಠನೆನಿಸುವನು ಅಂತಹ ಸದ್ಗುರುವು ನಮಗೆ ನೀನೇ ಆಗಿರುವೆ ಇದರಲ್ಲಿ ಸಂಶಯವಿಲ್ಲ " ನಮೋಽಸ್ತು ಗುರುಭ್ಯಃ " ಎಂದು ಸೂತಮಹಾ ಮುನಿಯನ್ನು ಸರ್ವರೂ ಸ್ತುತಿಸಿದರು

೭೯ ಹೀಗೆ ಸಮಸ್ತ ಮುನಿಗಳೂ ಸೂತಮಹಾಮುನಿಯಿಂದ ಶಿವಗೀತಾಮೃತದ ಸವಿಯನ್ನು ಪಡೆದು, ಸೂತಮಹಾಮುನಿಯನ್ನು ಸ್ತುತಿಸುತ್ತಾ ಸಂತುಷ್ಟಾಂತರಂಗವುಳ್ಳವರಾಗಿ, ಸಾಯಂಕಾಲದ ಸಂಧ್ಯಾವಂದನೆಯನ್ನು ನೆರವೇರಿಸಲು, ಗೌತಮೀ ನದೀ ತೀರವನ್ನು ಕುರಿತು ಪ್ರಯಾಣ ಬೆಳಸಿದರು ಎಂದು ವ್ಯಾಸಮಹರ್ಷಿಗಳು ಪ್ರಾಸಂಗಿಕವಾಗಿ ಬಂದ ಶಿವಗೀತೆಯನ್ನು ಸಕಲಮುನಿವೃಂದಕ್ಕೂ ಶ್ರುತಪಡಿಸಿದರು




ಶ್ರೀ ಪದ್ಮಪುರಾಣದ ಶಿವಗೀತೆಯಲ್ಲಿ ಸಕಲಶಾಸ್ತ್ರನಿರ್ಣೀತವಾದ ಮೋಕ್ಷಯೋಗವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುವು,
॥ ಶ್ರೀ ಶಿವಗೀತಾ ಸಮಾಪ್ತವಾದುದು ॥